ಪ್ರತಿಭಾವಂತ ಸಂಸದೀಯಪಟು ಪುಸ್ತಕ ಮಾಲಿಕೆ

# ಟಿ.ಎ. ಪೈ

ಡಾ. ಶಿವಾನಂದ ಬೇಕಲ್, ಭಾ.ಪ್ರ.ಸೇ.(ನಿ)

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ

ವಿಧಾನಸೌಧ, ಬೆಂಗಳೂರು - 560 001

# T.A. PAI

**Eminent Parlimentarian Series**

**Written by Dr. Shivananda Bekal**
**'Sai Krishna', Mahanavami Katte,**
**1st Cross, Mangalore - 575 001**
**Mobile: 99450 89253**

**Published by**
**Karnataka Legislature Library Committee**
**Vidhana Soudha, Bangalore - 560 001.**
Page: 289+ xv Price: 30/- Rs.

First Edition: 2010, Copies: 2000
**Printed & Designed by**
Government Press. Bangalore.

# ಟಿ.ಎ. ಪೈ

ಪ್ರತಿಭಾವಂತ ಸಂಸದೀಯಪಟು ಪುಸ್ತಕ ಮಾಲಿಕೆ

ಲೇಖಕರು: ಡಾ. ಶಿವಾನಂದ ಬೇಕಲ್, ಭಾ.ಪ್ರ.ಸೇ. (ನಿ)
'ಸಾಯಿ ಕೃಷ್ಣ', ಮಹಾನವಮಿ ಕಟ್ಟೆ,
1ನೇ ಕ್ರಾಸ್, ಮಂಗಳೂರು – 575 001
ಸಂಚಾರಿ : 99450 89253

ಪ್ರಕಾಶನ
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು – 560 001.
ಪುಟ: 299+xv ಬೆಲೆ: 30/- ರೂ.

ಮೊದಲ ಮುದ್ರಣ: 2010, ಪ್ರತಿಗಳು: 2,000
ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2010–2011

---

ಅಧ್ಯಕ್ಷರು

ಶ್ರೀ ಡಿ.ಎಚ್. ಶಂಕರಮೂರ್ತಿ

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

ಶ್ರೀ ಕೆ.ಜಿ. ಬೋಪಯ್ಯ

ಸಭಾಧ್ಯಕ್ಷರು, ಕರ್ನಾಟಕ ವಿಧಾನಸಭೆ

ಶ್ರೀ ಜಿ. ಸೋಮಶೇಖರ ರೆಡ್ಡಿ

ವಿಧಾನಸಭಾ ಸದಸ್ಯರು

ಶ್ರೀ ನೆ.ಲ. ನರೇಂದ್ರಬಾಬು

ವಿಧಾನಸಭಾ ಸದಸ್ಯರು

ಶ್ರೀ ಕಿಮ್ಮನೆ ರತ್ನಾಕರ್

ವಿಧಾನಸಭಾ ಸದಸ್ಯರು

ಶ್ರೀ ಸಾ.ರಾ. ಮಹೇಶ್

ವಿಧಾನಸಭಾ ಸದಸ್ಯರು

ಶ್ರೀ ಹೆಚ್.ಎಸ್. ಪ್ರಕಾಶ್

ವಿಧಾನಸಭಾ ಸದಸ್ಯರು

ಡಾ|| ಶ್ರೀನಾಥ್

ವಿಧಾನ ಪರಿಷತ್ ಸದಸ್ಯರು

ಪ್ರೊ: ಪಿ.ವಿ. ಕೃಷ್ಣಭಟ್ಟ

ವಿಧಾನ ಪರಿಷತ್ ಸದಸ್ಯರು

ಶ್ರೀ ಲೇಹರ್ ಸಿಂಗ್ ಸಿರೋಯಾ

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

---

## ಕರ್ನಾಟಕ ವಿಧಾನ ಮಂಡಲ

**ಹೆಚ್.ಎಂ. ಭಾರತೇಶ್** — **ಪ್ರಧಾನ ಕಾರ್ಯದರ್ಶಿ**

## ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಕಾರ್ಯದರ್ಶಿ–2 |
| ಎಂ. ಗುರುರಾಜ | ಜಂಟಿ ಕಾರ್ಯದರ್ಶಿ |
| ಕೆ. ಚಿನ್ನಸ್ವಾಮಿ | ಉಪ ಕಾರ್ಯದರ್ಶಿ |
| ಅನಸೂಯ ಎನ್. ದೇವಗಿರಿ | ಮುಖ್ಯ ಗ್ರಂಥಪಾಲಕಿ (ಪ್ರ) |

## ಸಂಪಾದಕರು

ಮಹಾಬಲೇಶ್ವರ ಕಾಟ್ರಹಳ್ಳಿ

# ನನ್ನ ಮಾತು

25 ಆಗಸ್ಟ್ 2010

"ಟಿ.ಎ.ಪೈಯವರ ಕುರಿತು ನಿಮಗೆ ಪುಸ್ತಕ ಬರೆದುಕೊಡುವುದಕ್ಕೆ ಸಾಧ್ಯವೆ?"

–ಹೀಗೊಂದು ಫೋನ್ ಕರೆ ನನಗೆ ಬಂತು. ಅಂದು ನಾನು ಯಾವುದೋ ಕಾರ್ಯ ನಿಮಿತ್ತ ಬೆಂಗಳೂರಲ್ಲೇ ಇದ್ದೆ. ಫೋನ್ ಮಾಡಿದವರು ಬೈಂದೂರಿನ ಶಾಸಕರಾದ ಶ್ರೀಲಕ್ಷ್ಮೀನಾರಾಯಣ ಅವರು. ಲಕ್ಷ್ಮೀನಾರಾಯಣರು ಅಂದರೆ ನಮಗೆ ಅಪಾರ ಗೌರವ. ಜತೆಗೆ ತೋನ್ಸೆ ಅನಂತ ಪೈಯವರ ಕುರಿತಾದ ಗ್ರಂಥ. ಇಂತಹ ಸದವಕಾಶವನ್ನು ಅಲ್ಲಗಳೆಯುವುದಕ್ಕೆ ಸಾಧ್ಯವೇ? ನನ್ನ ಕಾರ್ಯ ಬಾಹುಳ್ಯದ ಜತೆಯಲ್ಲೇ ಈ ಮಹತ್ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ಮಾಡಿಕೊಡುವುದಕ್ಕೆ ಸಂಪ್ರೀತಿಯಿಂದ ಒಪ್ಪಿಕೊಂಡೆ.

ಟಿ.ಎ.ಪೈಯವರು ಅಂದಾಗ ನನಗೆ ತಕ್ಷಣ ನೆನಪಾದದ್ದು ಜಯಂತಿ ಜನತಾ ಎಕ್ಸ್‌ಪ್ರೆಸ್. ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶದವರ ಬಹುಕಾಲದ ಕನಸಾಗಿದ್ದ, ದಿಲ್ಲಿಯ ಜತೆಗೆ ಮಂಗಳೂರನ್ನು ಬೆಸೆಯುವ ಈ ರೈಲು ಶ್ರೀ ಪೈಯವರ ಕೊಡುಗೆ. ಕೇಂದ್ರ ರೇಲ್ವೇ ಸಚಿವರಾದಾಗಲೂ, ಭಾರೀ ಕೈಗಾರಿಕೆಯ ಮಂತ್ರಿ ಪದವಿ ದೊರೆತಾಗಲೂ ಪೈಯವರು ತಮ್ಮ ಹುಟ್ಟೂರು ಜನತೆಯನ್ನು ಮರೆಯಲಿಲ್ಲ.

ನಿಜ ಹೇಳಬೇಕೆಂದರೆ, ಶ್ರೀ ಪೈಯವರು ಕರ್ನಾಟಕಕ್ಕೆ ಅದರಲ್ಲೂ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ನೀಡಿದ ಕೊಡುಗೆಗಳು ಅಪಾರ. ಆದರೆ ಅವರ ಸೇವೆ ಮತ್ತು ನಾಡಿನ ಬಗೆಗಿನ ಅವರ ಕಾಳಜಿಯನ್ನು ಜನತೆ ಅಷ್ಟಾಗಿ ಕೊಂಡಾಡದೆ ಇದ್ದುದು ಪ್ರಾಯಶಃ ನಮ್ಮ ನಾಡಿನ ದುರ್ದೈವವೂ, ನಾವು ಎಸಗಿದ ವಿಲಕ್ಷಣವಾದ ಪ್ರಮಾದವೂ ಅಂತ ನಿಮಗೆ ಈ ಗ್ರಂಥವನ್ನು ಓದಿದಾಗ ವೇದ್ಯವಾದೀತು.

ಅವರು 1952ರಿಂದ ಮದ್ರಾಸು ಸಂಸ್ಥಾನದ ಶಾಸಕರಾಗಿ ಕರ್ನಾಟಕದ ಕರಾವಳಿ ಜಿಲ್ಲೆಗಳ ಪ್ರಗತಿಗಾಗಿ ಎಷ್ಟು ಹೋರಾಟ ನಡೆಸಿದ್ದರು ಎಂಬುದನ್ನು ನೀವು ಮುಂದಿನ ಪುಟಗಳಲ್ಲಿ ದಾಖಲಿಸಲಾದ, ಸದನಗಳಲ್ಲಿ ಅವರು ನಡೆಸಿದ

ಚರ್ಚೆಗಳಿಂದ ಮನಗಾಣುವಿರಿ. ಅದು ಕನ್ನಡ ಜಿಲ್ಲೆಯಲ್ಲಿ ಹಾದುಹೋಗುವ ರಾಜ ಮಾರ್ಗವಿರಲಿ, ವಿದ್ಯುತ್ ಸರಬರಾಜು ಇರಲಿ, ಕುಷ್ಠರೋಗ ನಿವಾರಣಾ ಕಾರ್ಯಕ್ರಮವಿರಲಿ, ಸೇತುವೆಗಳೋ, ಕೈಮಗ್ಗ ಸುಧಾರಣೆಯೋ, ಭೂ ಮಸೂದೆಯೋ ಇಲ್ಲ ಭಾಷಾವಾರು ಪ್ರಾಂತ್ಯ ರಚನೆಯೋ– ಎಲ್ಲದರಲ್ಲಿ ಪೈಗಳ ಸಕ್ರಿಯ ಪಾತ್ರವನ್ನು ನೀವು ಕಾಣುತ್ತೀರಿ. ಇಂತಹ ಓರ್ವ ಧೀಮಂತ ವ್ಯಕ್ತಿಯ ಕುರಿತು ಪುಸ್ತಕ ಬರೆಯುವುದೆಂದರೆ ನನ್ನ ಸೌಭಾಗ್ಯವೆಂದು ತಿಳಿದು ನನ್ನ ಸಮ್ಮತಿ ಪತ್ರವನ್ನು ತಕ್ಷಣ ಕರ್ನಾಟಕ ಸರಕಾರದ ಕಾರ್ಯದರ್ಶಿಯವರ ಕಾರ್ಯಾಲಯಕ್ಕೆ ಕಳುಹಿಸಿದೆ.

ಗ್ರಂಥ ರಚನೆಗೆ ಒಪ್ಪಿಗೆ ನೀಡಿದ್ದಂತೂ ಆಯಿತು. ಆದರೆ ಮುಂದಿನ ಅಡಚಣೆಗಳ ವಿರಾಟ್ ಸ್ವರೂಪ ನನ್ನ ಮುಂದೆ ಧುತ್ತೆಂದು ಕಾಣಿಸಿಕೊಂಡದ್ದು ಮುಂದಿನ ದಿನಗಳಲ್ಲಿ. ಗ್ರಂಥ ರಚನೆಗೆ ಸರಕಾರ ಕೆಲವು ವಿಧಿನಿಯಮಗಳನ್ನು ಸೂಚಿಸಿದ್ದರಿಂದ, ಅದಕ್ಕೆ ಅನುಗುಣವಾಗಿ ನನ್ನ ಕಾರ್ಯವಿಧಾನಗಳನ್ನು ರೂಪಿಸಿಕೊಳ್ಳಬೇಕಾಗಿತ್ತು. ಗ್ರಂಥದ ನಾಲ್ಕು ಭಾಗಗಳಿಗೆ ವಿಷಯ ಸಂಗ್ರಹಣೆ ದೊಡ್ಡ ಜವಾಬ್ದಾರಿಯುತ ಅಂತೆಯೇ, ತ್ರಾಸದಾಯಕ ಕಾಯಕವೆಂಬುದು ನನಗೆ ಮನವರಿಕೆಯಾದುದು ಈ ಹಂತದಲ್ಲೇ!

ಮೊದಲನೆಯದಾಗಿ, ಸದನ ಮತ್ತು ಸಂಸತ್ತುಗಳಲ್ಲಿ ಶ್ರೀ ಪೈಗಳು ನಡೆಸಿದ ಚರ್ಚೆ(ಡಿಬೇಟ್)ಗಳ ನೈಜ ಚಿತ್ರಣ ನೀಡಬೇಕಾಗಿತ್ತು. ಇದುವೆ ಗ್ರಂಥದ ಮುಖ್ಯ ಜೀವಾಳವಾಗಿದ್ದುದರಿಂದ ಅದರ ಸಂಗ್ರಹಣಾ ಕಾರ್ಯ ಮಹತ್ವದ ವಿಷಯವಾಗಿದ್ದಿತು. ಈ ಸಂದರ್ಭದಲ್ಲಿ ನನ್ನ ಸಹಾಯಕ್ಕೆ ಒದಗಿದವರು ಕರ್ನಾಟಕ ಸರಕಾರದ ವಿಧಾನ ಸೌಧದ ಉಪಕಾರ್ಯದರ್ಶಿಗಳಾದ ಶ್ರೀ ಎಂ.ಗುರುರಾಜ್ ಅವರು. ನನ್ನ ಬೇಡಿಕೆಗೆ ಅವರು ತಕ್ಷಣ ಸ್ಪಂದಿಸಿದ್ದಲ್ಲದೆ, ಮದ್ರಾಸು ವಿಧಾನ ಸಭೆಯಲ್ಲಿ ಶ್ರೀ ಪೈಗಳು 1952ರಿಂದ 1956ರವರೆಗೆ ಭಾಗವಹಿಸಿ ನಡೆಸಿದ ಚರ್ಚೆಗಳ ವರದಿಯ ಸುಮಾರು 350ಪುಟಗಳ ಮಾಹಿತಿಯನ್ನು ಚೆನ್ನೈ ವಿಧಾನ ಸಭೆಗೆ ಬರೆದು ತರಿಸಿಕೊಂಡು ನನಗೆ ಕಳುಹಿಸಿಕೊಟ್ಟರು. ಸುಮಾರು 60ವರ್ಷಗಳ ಹಿಂದೆ ರಾಜ್ಯ ಸರಕಾರಗಳು ಹೇಗೆ ಪ್ರವರ್ತಿಸುತ್ತಿದ್ದವು ಮತ್ತು ಅಲ್ಲಿನ ಕಾರ್ಯಕಲಾಪಗಳು ಹೇಗೆ ನಡೆಯುತ್ತಿದ್ದವು, ಎಷ್ಟು ಶಿಸ್ತುಬದ್ಧವಾಗಿದ್ದವು ಎಂಬ ವಿಷಯಗಳ ಒಂದು ವಿಹಂಗಮ ನೋಟ ಈ ಚರ್ಚೆಗಳಲ್ಲಿ ಕಾಣಬಹುದಾಗಿದೆ.

ಈ ವರದಿಗಳೆಲ್ಲ ಆಂಗ್ಲ ಭಾಷೆಯಲ್ಲಿದ್ದುದರಿಂದ ಅವನ್ನು ಕನ್ನಡಕ್ಕೆ ಅನುವಾದಿಸಿ ಸಂಗ್ರಹಿಸುವ ಕಾರ್ಯ ನಡೆಸುವಂತಾಯಿತು.

ಎರಡನೆಯದಾಗಿ, ಕೇಂದ್ರ ಮಂತ್ರಿ ಮಂಡಲದಲ್ಲಿ ಶ್ರೀ ಪೈಗಳು ಭಾಗವಹಿಸಿದ ಚರ್ಚೆಗಳ ಸಂಗ್ರಹಣೆ. ಕೇಂದ್ರದಲ್ಲಿ ರೇಲ್ವೇ, ಭಾರೀ ಉದ್ದಿಮೆ, ಕೈಗಾರಿಕೆ, ನಾಗರಿಕ ಸರಬರಾಜು, ವಿಜ್ಞಾನ ಮತ್ತು ತಂತ್ರಜ್ಞಾನ-- ಹೀಗೆ ವಿವಿಧ ಖಾತೆಗಳನ್ನು ಅವರು ನಿರ್ವಹಿಸಿದ್ದರಿಂದ ಅವುಗಳನ್ನೆಲ್ಲ ಸಂಗ್ರಹಿಸಬೇಕಾದ್ದಿತು. ಸಂಸತ್ತಿನ ಈ ಕಲಾಪಗಳ ವರದಿ ವಿಧಾನಸೌಧದ ಗ್ರಂಥಾಲಯದಲ್ಲೇ ಲಭ್ಯವಿದ್ದುದರಿಂದ, ಅವರ ಸಂಗ್ರಹಣೆಗೆ ಶಾಸಕರ ಭವನದ ಗ್ರಂಥಾಲಯದ ಕೊಠಡಿಗಳಲ್ಲಿ ಹೆಣಗಾಡಬೇಕಾಯಿತು. ಈ ಸಂದರ್ಭದಲ್ಲಿ ಗ್ರಂಥಪಾಲಕರಾದ ಶ್ರೀ ನಂಜುಂಡ ಸ್ವಾಮಿಯವರು ನನಗೆ ಬಹಳಷ್ಟು ಸಹಾಯ ಸಹಕಾರವನ್ನು ಒದಗಿಸಿದರು. ಅವರ ಸಹಾಯಕ ಶ್ರೀ ಶಿವಣ್ಣ ಕೂಡಾ ನನ್ನ ಬೇಡಿಕೆಗಳನ್ನು ಪೂರೈಸಿದರು. ಈ ವರದಿಗಳೂ ಸುಮಾರು 350ಪುಟಗಳನ್ನು ಮೀರಿ, ಎಲ್ಲವೂ ಸಹಜವಾಗಿ ಆಂಗ್ಲ ಭಾಷೆಯಲ್ಲೇ ಇದ್ದುದರಿಂದ ನನ್ನ ಜಂಘಾಬಲವನ್ನೇ ಉಡುಗಿಸುವ ಪ್ರಯತ್ನ ಮಾಡಿದವು.

ಈ ನಡುವೆ ನಾನು ಪೂರ್ಣಪ್ರಮಾಣದ ಡಿಟಿಪಿ ಮಾಡಿದ ಗ್ರಂಥದ ಪ್ರತಿಯನ್ನು ಸಲ್ಲಿಸಬೇಕಾಗಿದ್ದರಿಂದ ಎರಡೆರಡು ಸಲ ಗ್ರಂಥ ಸಲ್ಲಿಕೆಯ ಗಡುವನ್ನು ವಿಸ್ತರಿಸುವಂತೆ ಕೇಳಿಕೊಳ್ಳುವಂತಾಯಿತು. ಈ ಸಂದರ್ಭದಲ್ಲೂ [illegible] ಸಮಿತಿಯ ಮುಂದೆ ನನ್ನ ಅಹವಾಲನ್ನು ನಿವೇದಿಸಿಕೊಳ್ಳುವುದಕ್ಕೆ ಶ್ರೀಯುತ ಗುರುರಾಜರೇ ನನ್ನ ನೆರವಿಗೆ ಒದಗಿದರು. ಈ ಸಂದರ್ಭದಲ್ಲಿ, ವಿಧಾನ ಸೌಧದ ಗ್ರಂಥಾಲಯದ ಮುಖ್ಯಸ್ಥರಾದ ಡಾ.ಅನಸೂಯಾ ದೇವಿಯವರು ಮತ್ತು ಶ್ರೀ ಮಂಜುನಾಥ್ ಅವರ ಕಾಲ್‌ಗಳು ಓತಪ್ರೋತವಾಗಿ ಲಗ್ಗೆಯಿಟ್ಟು ಹರಿದು ಬಂದವು. ಒಂದು ಹಂತದಲ್ಲಿ ಈ ಮಾಹಿತಿಗಳನ್ನು ನೀಡುವವರನ್ನು ನಿಭಾಯಿಸುವುದೇ ಕಷ್ಟವಾಯಿತು. ಇದರಿಂದ ತಿಳಿದದ್ದು ಎರಡು ವಿಷಯಗಳು- ಒಂದು ಪೈಯವರ ಜನಪ್ರಿಯತೆ ಮತ್ತು ಜನರ ಜತೆಗಿನ ಅವರ ಆತ್ಮೀಯ ಸಂಪರ್ಕ, ಇನ್ನೊಂದು ಪತ್ರಿಕಾ ಮಾಧ್ಯಮದ ಶಕ್ತಿ. ಇವೆರಡೂ ಪತ್ರಿಕೆಗಳ ಸಂಪಾದಕರುಗಳಿಗೂ, ಮುಖ್ಯವಾಗಿ ಉದಯವಾಣಿಯ ಶ್ರೀ ಮನೋಹರ ಪ್ರಸಾದ್ ಮತ್ತು ವಿಜಯ ಕರ್ನಾಟಕದ ಶ್ರೀ ಕುಮಾರನಾಥ್ ಅವರಿಗೆ ನನ್ನ ನೆನಪುಗಳು ಸಲ್ಲುತ್ತವೆ.

ಭಾಗ ಒಂದರಲ್ಲಿ ದಾಖಲಾಗಿರುವ ಪೈಯವರ ವ್ಯಕ್ತಿಚಿತ್ರದ ಮಾಹಿತಿಗೋಸ್ಕರ ಪ್ರಸಾರ ಭಾರತಿಯ ವಿಶ್ರಾಂತ ಅಧ್ಯಕ್ಷರೂ, ಪ್ರಖ್ಯಾತ ಪತ್ರಕರ್ತರೂ, ನನ್ನ ಆತ್ಮೀಯರೂ ಆದ ಡಾ.ಎಂ.ವಿ.ಕಾಮತ್ ಅವರ 'The Innovative Banker' ಹೊತ್ತಗೆಯನ್ನು ನಾನು ಅವಲಂಬಿಸಬೇಕಾಯಿತು. ಅಂತೆಯೇ, ಇನ್ನಿತರ ಕೆಲವು ಪುಸ್ತಕಗಳು. ಉದಾಹರಣೆಗೆ, ಶ್ರೀ ಬಿ.ವಿ.ಕೆದಿಲಾಯ ಅವರ 'ಧೀಮಂತ ವ್ಯಕ್ತಿತ್ವದ ಟಿ.ಎ.ಪೈ', ಹಾಗೆಯೇ, 'ಟಿ.ಎ.ಪೈ ಚಿಂತನೆ ಮತ್ತು ಸಾಧನೆ', 'Padmabhushan T.A.Pai-The Man on the Move', 'Shri T.A.Pai- The Man and His Mission' ಮುಂತಾದ ಗ್ರಂಥಗಳ ಮೊರೆಹೋಗಬೇಕಾಯಿತು. ಈ ಎಲ್ಲ ಪುಸ್ತಕಗಳಲ್ಲಿ ಅಚ್ಚಾದ ಫೋಟೋಗಳನ್ನು ಕೂಡಾ ನಾನು ಈ ಗ್ರಂಥದಲ್ಲಿ ಅಳವಡಿಸಿಕೊಂಡಿದ್ದೇನೆ.

ಗಣ್ಯರ ಅನಿಸಿಕೆಗಳ ಸಂಗ್ರಹಣೆಯ ನಿಮಿತ್ತ ನಾನು ರಾಜ್ಯ ಮಟ್ಟದಲ್ಲಿ ಪ್ರಸಾರವಿರುವ 'ಉದಯವಾಣಿ' ಮತ್ತು 'ವಿಜಯ ಕರ್ನಾಟಕ' ಪತ್ರಿಕೆಗಳಲ್ಲಿ ನಿವೇದನೆ ಸಲ್ಲಿಸಿದೆ. ಅದಕ್ಕೆ ಸಂದ ಪ್ರತಿಕ್ರಿಯೆ ಅತ್ಯದ್ಭುತ! ಪತ್ರಗಳು, ಫೋನ್ ಕಾಲ್‌ಗಳು ಓತಪ್ರೋತವಾಗಿ ಲಗ್ಗೆಯಿಟ್ಟು ಹರಿದು ಬಂದವು. ಒಂದು ಹಂತದಲ್ಲಿ ಈ ಮಾಹಿತಿಗಳನ್ನು ನೀಡುವವರನ್ನು ನಿಭಾಯಿಸುವುದೇ ಕಷ್ಟವಾಯಿತು. ಇದರಿಂದ ತಿಳಿದದ್ದು ಎರಡು ವಿಷಯಗಳು-ಒಂದು ಪೈಯವರ ಜನಪ್ರಿಯತೆ ಮತ್ತು ಜನರ ಜತೆಗಿನ ಅವರ ಆತ್ಮೀಯ ಸಂಸರ್ಗ, ಇನ್ನೊಂದು ಪತ್ರಿಕಾ ಮಾಧ್ಯಮದ ಶಕ್ತಿ. ಇವೆರಡೂ ಪತ್ರಿಕೆಗಳ ಸಂಪಾದಕರುಗಳಿಗೂ, ಮುಖ್ಯವಾಗಿ ಉದಯವಾಣಿಯ ಶ್ರೀ ಮನೋಹರ ಪ್ರಸಾದ್ ಮತ್ತು ವಿಜಯ ಕರ್ನಾಟಕದ ಶ್ರೀ ಕುಮಾರನಾಥ್ ಅವರಿಗೆ ನನ್ನ ನೆನಕೆಗಳು ಸಲ್ಲುತ್ತವೆ.

ನಮ್ಮೆಲ್ಲರ ನೆಚ್ಚಿನ ಮತ್ತು ಸದಾ ಕಾಲ ನನ್ನ ಶ್ರೇಯಸ್ಸನ್ನು ಬಯಸುವ ಶ್ರೀಕ್ಷೇತ್ರ ಧರ್ಮಸ್ಥಳದ ಧರ್ಮಾಧಿಕಾರಿ ಪೂಜ್ಯ ಡಾ.ಡಿ. ವೀರೇಂದ್ರ ಹೆಗ್ಗಡೆಯವರು ನನಗೆ ನೀಡಿದ ಸಂದರ್ಶನದಲ್ಲಿ ಪೈಗಳ ಕುರಿತಂತೆ ತಮ್ಮ ಮೆಚ್ಚುಗೆಯನ್ನು ದಾಖಲಿಸಿ ಗ್ರಂಥದ ಮೆರುಗನ್ನು ಹೆಚ್ಚಿಸಿದ್ದಾರೆ, ಅವರಿಗೂ, ಪೈಗಳ ಆತ್ಮೀಯ ಮಿತ್ರರಾದ ಡಾ. ಪಾಟೀಲ ಪುಟ್ಟಪ್ಪನವರಿಗೂ, ಲೋಕವಿಖ್ಯಾತ ಪತ್ರಕರ್ತರೂ, ಟಿ.ಎ.ಪೈಗಳ ಒಡನಾಡಿಯವರೂ ಆದ ಡಾ.ಎಂ.ವಿ.ಕಾಮತ್ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಗ್ರಂಥ ರಚನೆಯ ಆದಿಯಿಂದ ನನ್ನ ಎಲ್ಲ ಕೆಲಸ ಕಾರ್ಯಗಳಿಗೆ ಬೆಂಬಲ ನೀಡಿದವರೆಂದರೆ, ಟಿ.ಎ.ಪೈಯವರ ನಿಕಟವರ್ತಿಗಳೂ, ಅವರು ಸ್ಥಾಪಿಸಿದ 'ಭಾರತ ವಿಕಾಸ ಟ್ರಸ್ಟ್'ನ ಮ್ಯಾನೇಜಿಂಗ್ ಟ್ರಸ್ಟಿಗಳೂ ಆದ ಶ್ರೀ ಕೆ.ಎಂ.ಉಡುಪ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಪೈಯವರ ಕುರಿತು ಅತ್ಯಂತ ಆಸಕ್ತಿಯಿಂದ ತಮ್ಮ ಅಭಿಪ್ರಾಯವನ್ನು ದಾಖಲಿಸುವುದಕ್ಕೆ ಅನುವು ಮಾಡಿಕೊಟ್ಟವರು ಶ್ರೀ ಟಿ.ಸತೀಶ್ ಪೈ ದಂಪತಿಗಳು. ಶ್ರೀಮತಿ ಸಂಧ್ಯಾ ಪೈಯವರಂತೂ ಬಹಳ ಉತ್ಸುಕತೆಯಿಂದ ತಮ್ಮ ಅನಿಸಿಕೆಗಳನ್ನು ನನ್ನ ಮುಂದಿಟ್ಟರು. ಅವರಿಬ್ಬರ ಮಾತಿನ ಭರದಲ್ಲಿ ಅನಂತ್ ಅವರ ಬಗ್ಗೆ ಅವರ ಅಂತಃಕರಣ ಮಿಡಿದು ಕಣ್ಣುಗಳು ತೇವಗೊಂಡಿದ್ದನ್ನು ನಾನು ಗುರುತಿಸದೆ ಇರಲಿಲ್ಲ. ಅವರಿಗೂ, ನನ್ನ ಆತ್ಮೀಯರಾದ ಪದ್ಮಭೂಷಣ ಡಾ.ಬಿ.ಎಂ.ಹೆಗ್ಡೆ, ಡಾ.ಎನ್.ಕೆ.ತಿಂಗಳಾಯ, ಡಾ.ಕೆ.ಕೆ.ಅಮ್ಮಣ್ಣಾಯ, ಶ್ರೀ ಬಿ.ಆರ್.ಪೈ, ಶ್ರೀ ಸಿ.ಮಹಾಬಲ ನಾಯಕ್, ಶ್ರೀ ಎಚ್.ಶ್ರೀಧರ ಹಂದೆ, ಶ್ರೀ ಎಂ.ನಾರಾಯಣ ಗೋಖಲೆ, ಶ್ರೀ ಯು.ವಾದಿರಾಜ ಉಪಾಧ್ಯಾಯ, ಶ್ರೀ ಶ್ರೀಧರ್ ರಾವ್, -ಹೀಗೆ ಅನೇಕ ಮಂದಿ ತಮ್ಮ ಅಭಿಪ್ರಾಯಗಳನ್ನು ದಾಖಲಿಸಿದ್ದಾರೆ, ಅವರೆಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಹೊತ್ತಗೆಯ ಬಗ್ಗೆ ವಿಶೇಷ ಆಸಕ್ತಿ ವಹಿಸಿದ ಶ್ರೀವಿಟ್ಠಲ್ ಶೆಟ್ಟಿಗಾರ್, ಸಾಹುಕಾರ್ ಮಲ್ಪೆ ದೇಜಪ್ಪನವರ ಮೊಮ್ಮಗ ಶ್ರೀಎಂ.ಎಸ್.ಶ್ರೀಧರ್, ಕುಮಟಾ ತಾಲೂಕಿನ ಶ್ರೀಎಂ.ಝಡ್.ಎ.ಶೇಖ್ ಅವರಿಗೂ ನನ್ನ ಕೃತಜ್ಞತೆಗಳು.

ಹೀಗೊಂದು ಅತ್ಯುಪಯುಕ್ತ ಗ್ರಂಥ ಪ್ರಕಟವಾಗಲು ಕಾರಣವಾದ ಕರ್ನಾಟಕ ಸರಕಾರಕ್ಕೆ, ಅದರಲ್ಲೂ ಮುಖ್ಯವಾಗಿ ವಿಧಾನ ಪರಿಷತ್ತಿನ ಗೌರವಾನ್ವಿತ ಸಭಾಪತಿಗಳೂ, ಗ್ರಂಥಾಲಯ ಸಮಿತಿಯ ಅಧ್ಯಕ್ಷರೂ ಆದ ಶ್ರೀ ವೀರಣ್ಣ ಮತ್ತಿಕಟ್ಟಿ ಯವರಿಗೂ, ಶಾಸಕ ಬಂಧು ಶ್ರೀ ಲಕ್ಷ್ಮೀನಾರಾಯಣ ಅವರಿಗೂ ಉಪಸಮಿತಿಯ ಎಲ್ಲ ಸದಸ್ಯರುಗಳಿಗೂ ನನ್ನ ಅನಂತ ವಂದನೆಗಳು ಸಲ್ಲುತ್ತವೆ.

ಮಂಗಳೂರು

**ಡಾ. ಶಿವಾನಂದ ಬೇಕಲ್ ಭಾ.ಪ್ರ.ಸೇ.**
ಸಹಾಯಕ ಕೇಂದ್ರ ನಿರ್ದೇಶಕರು,
ಆಕಾಶವಾಣಿ: ಮಂಗಳೂರು-575 004

# ಪರಿವಿಡಿ

ಮುನ್ನುಡಿ

ನನ್ನ ಮಾತು

## ಭಾಗ – 1

## ಜೀವನ ದರ್ಶನ

# ಭಾಗ – 2

# ಸತ್ವಶಾಲಿ ಚಿಂತನೆಗಳು

## ಮದ್ರಾಸು ಶಾಸನ ಸಭೆಯಲ್ಲಿ ಸತ್ವಶಾಲಿ ಚಿಂತನೆಗಳು

## ಲೋಕಸಭೆಯಲ್ಲಿ ಸತ್ವಶಾಲಿ ಚಿಂತನೆಗಳು

## ಭಾಗ – ೩
# ಗಣ್ಯರ ದೃಷ್ಟಿಯಲ್ಲಿ

"ಭಾರತದಲ್ಲಿ ಇಂದು ಪ್ರಚಲಿತವಿರುವ ಶಿಕ್ಷಣ ವ್ಯವಸ್ಥೆ ರಾಷ್ಟ್ರಾಭಿವೃದ್ಧಿಯ ದೃಷ್ಟಿಯಿಂದ ಏನೇನೂ ತೃಪ್ತಿ ನೀಡುವಂಥದ್ದಲ್ಲ. ನಮ್ಮ ರಾಷ್ಟ್ರದ ಸಂಪನ್ಮೂಲಗಳನ್ನು, ಮುಖ್ಯವಾಗಿ ಜನಬಲ ಹಾಗೂ ಯುವಜನರ ಪ್ರತಿಭೆ ಮತ್ತು ಕೌಶಲ್ಯಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳಲು ಅದು ತೀರಾ ವಿಫಲವಾಗಿದೆ ಎನ್ನದೆ ವಿಧಿಯಿಲ್ಲ...

"........ನಮ್ಮ ಶಿಕ್ಷಣ ವ್ಯವಸ್ಥೆಯೊಂದು ಕಾರ್ಯಾಗಾರ. ಅತ್ಯುತ್ತಮ ಕಚ್ಚಾಮಾಲನ್ನು ಉಪಯೋಗಿಸಿಕೊಂಡು ಅತಿ ನಿಕೃಷ್ಟ ಸಿದ್ಧವಸ್ತುಗಳನ್ನು ನಿರ್ಮಿಸುವುದಷ್ಟೇ ಅದರ ಕೆಲಸ. ಎಂಥ ವಿಪರ್ಯಾಸ!"

—ಟಿ.ಎ.ಪೈ



# ಟಿ.ಎ.ಪೈ
# (ತೋನ್ಸೆ ಅನಂತ ಪೈ)

## ಬದುಕಿನ ಪ್ರಮುಖ ಘಟನೆಗಳು



ಉಪೇಂದ್ರ ಪೈ- ಪಾರ್ವತಿ ಅಮ್ಮನವರ ಹಿರಿಯ ಪುತ್ರನಾಗಿ ಟಿ.ಎ.ಪೈಯವರು 1922 ಜನವರಿ ತಿಂಗಳ 17ರಂದು ಜನಿಸಿದರು. ಮುಂಬಯಿಯ ಸಿಡೆನ್ ಹ್ಯಾಂ ಕಾಮರ್ಸ್ ಮತ್ತು ಇಕನಾಮಿಕ್ಸ್ ಕಾಲೇಜಿನಲ್ಲಿ ಅವರು ವಾಣಿಜ್ಯ ಪದವಿಯನ್ನು 1943ರಲ್ಲಿ ಪಡೆದರು. ಅದೇ ವರ್ಷ ಅವರು ಸಿಂಡಿಕೇಟ್ ಬ್ಯಾಂಕಿನ ಡೆಪ್ಯುಟಿ ಮ್ಯಾನೇಜರ್ ಆಗಿ ನೇಮಕಗೊಂಡರು. ಆಗಿನ್ನೂ ಅವರಿಗೆ 21 ವರ್ಷ ವಯಸ್ಸು! ಒಂದೇ ವರ್ಷದಲ್ಲಿ ಅವರು ಬ್ಯಾಂಕಿನ ಜನರಲ್ ಮ್ಯಾನೇಜರ್ ಹುದ್ದೆಗೆ ಭಡ್ತಿ ಪಡೆದರು. 1961ರ ತನಕ ಅವರು ಆ ಹುದ್ದೆಯಲ್ಲಿ ಮುಂದುವರಿದರು.

ಜನವರಿ 1962ರಲ್ಲಿ ಪೈಯವರು ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರ್ ಆದರು. ಆ ಪದವಿಯನ್ನು ಡಿಸೆಂಬರ್ 1964ರ ವರೆಗೆ ಅಲಂಕರಿಸಿದರು. ಭಾರತದ ಯಾವುದೇ ಬ್ಯಾಂಕ್ ಸಾಧಿಸದೆ ಇರುವಂಥ ತೀವ್ರಗತಿಯ ಪ್ರಗತಿಯನ್ನು ಸಿಂಡಿಕೇಟ್ ಬ್ಯಾಂಕ್ ಅವರ ಮುಂದಾಳ್ತನದಲ್ಲಿ ಸಾಧಿಸಿತು. ಬ್ಯಾಂಕ್ ವಿವಿಧ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದರಲ್ಲಿ ಮುಂಚೂಣಿಯಲ್ಲಿತ್ತು. ಮುಖ್ಯವಾಗಿ ಸಣ್ಣ ಉಳಿತಾಯ, ಕೃಷಿಗೆ ಸಾಲ ನೀಡಿಕೆ ಮತ್ತು ಸಾಮಾನ್ಯ ಜನತೆಗೆ ಸಹಾಯ. 1962ರಲ್ಲಿ ಇದಕ್ಕೆ ಪೂರಕವಾಗಿ ಅವರು ದ.ಕ.ಜಿಲ್ಲಾ ಕೃಷಿ ಅಭಿವೃದ್ಧಿ ಸಹಕಾರಿ ಸಂಘವನ್ನು ಸ್ಥಾಪಿಸಿದರು.

1965ರಲ್ಲಿ ಪೈಯವರನ್ನು ಭಾರತೀಯ ಆಹಾರ ನಿಗಮದ ಪ್ರಥಮ ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಅವರು ಆ ಸಂಸ್ಥೆಯನ್ನು ಗೌರವ ಪದವಿಯೊಂದಿಗೆ ನಡೆಸಿದರು. ಒಂದು ವರ್ಷದ ಬಳಿಕ ಅವರು ಸಂಸ್ಥೆಯ ಅಧ್ಯಕ್ಷ ಸ್ಥಾನವನ್ನು ತ್ಯಜಿಸಿದಾಗ ಸರಕಾರ ಅವರ ಸೇವೆಯನ್ನು ಹೃತ್ಪೂರ್ವಕ ಸ್ಮರಿಸಿಕೊಂಡಿತು– 'ನಿಗಮಕ್ಕೆ ಸಮರ್ಪಣಾ ಭಾವದ ಮತ್ತು ವಿಶೇಷ ನಿಯತ್ತಿನ ಸೇವೆ' ಎಂದು ದಾಖಲಾಯಿತು. ಮತ್ತೆ 1966ರಲ್ಲಿ ಅವರು ಸಿಂಡಿಕೇಟ್ ಬ್ಯಾಂಕಿಗೆ ಮರಳಿ ಬಂದರು–ಮ್ಯಾನೇಜಿಂಗ್ ಡೈರೆಕ್ಟರ್ ಆಗಿ. ಡಿಸೆಂಬರ್ 1967ರಲ್ಲಿ ಬ್ಯಾಂಕಿನ ಅಧ್ಯಕ್ಷರಾಗಿ ನೇಮಕಗೊಂಡರು.

**ರಾಜಕೀಯ ಸ್ಥಾನಮಾನ:**

ಮದ್ರಾಸು ಶಾಸನ ಸಭೆಯ ಸದಸ್ಯರಾಗಿಯೂ, ಮೈಸೂರು ಶಾಸನ ಸಭೆಯ ಸದಸ್ಯರಾಗಿಯೂ ಅವರು ಸೇವೆ ಸಲ್ಲಿಸಿದರು. ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಮೈಸೂರು ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ಸದಸ್ಯರೂ, ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರೂ ಆಗಿ ಸೇವೆ ಸಲ್ಲಿಸಿದ್ದರು. ಅವರು ರಾಜ್ಯ ಮತ್ತು ರಾಷ್ಟ್ರದ ಅನೇಕ ಸಮಿತಿಗಳಲ್ಲಿ ಸೇವೆ ಸಲ್ಲಿಸಿದ್ದಾರೆ– ಮೈಸೂರು ರಾಜ್ಯ ವಿದ್ಯುಚ್ಛಕ್ತಿ ಬೋರ್ಡ್, ಮೈಸೂರು ರಾಜ್ಯ ಪ್ರೌಢ ಶಿಕ್ಷಣ ಸಮಿತಿ; ಮೈಸೂರು ಪಠ್ಯ ಪುಸ್ತಕ ಸಲಹಾ ಸಮಿತಿ; ಮೈಸೂರು ರಾಜ್ಯ ಮೀನುಗಾರಿಕಾ ಸಲಹಾ ಸಮಿತಿ; ಅಖಿಲ ಭಾರತ ಕೋಯರ್ ಬೋರ್ಡ್; ರಾಷ್ಟ್ರೀಯ ಕ್ರೆಡಿಟ್ ಕೌನ್ಸಿಲ್ ಮತ್ತು ಬೋರ್ಡ್ ಆಫ್ ಗವರ್ನರ್ಸ್; ರಾಷ್ಟ್ರೀಯ

ಬ್ಯಾಂಕ್ ಮ್ಯಾನೇಜ್‌ಮೆಂಟ್ ಸಂಸ್ಥೆ; ಆಡಳಿತ ಸಿಬ್ಬಂದಿ ಮಹಾವಿದ್ಯಾಲಯ ಹೈದರಾಬಾದ್, ಮತ್ತು ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಬೆಂಗಳೂರು, ಇದರ ಅಧ್ಯಕ್ಷರಾಗಿದ್ದರು.

ಭಾರತೀಯ ರಿಸರ್ವ್ ಬ್ಯಾಂಕ್ ಸ್ಥಾಪಿಸಿದ ಡಿಪಾಸಿಟ್ ಮೊಬಲೈಸೇಶನ್ ಸಮಿತಿಯ ಅಧ್ಯಕ್ಷರಾಗಿ, ಆಡಳಿತ ಸುಧಾರಣಾ ಆಯೋಗದ ಕೃಷಿ ಅಧ್ಯಯನ ಗುಂಪಿನ ಸದಸ್ಯರಾಗಿ, ರಾಷ್ಟ್ರೀಯ ಕೃಷಿ ಆಯೋಗದ ಸದಸ್ಯರಾಗಿಯೂ ಅವರು ಸೇವೆ ಸಲ್ಲಿಸಿದ್ದಾರೆ.

1970ರ ಮಾರ್ಚ್ 2ರಂದು ಪೈಯವರನ್ನು ಭಾರತೀಯ ಜೀವವಿಮಾ ನಿಗಮದ ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಅವರ ಮುಂದಾಳ್ತನದಲ್ಲಿ ನಿಗಮ ತನ್ನ ಸಂಪನ್ಮೂಲಗಳನ್ನು ಜನತೆಯ ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸುವ ನಿಟ್ಟಿನಲ್ಲಿ ಬಳಸುವ ತೀರ್ಮಾನ ಕೈಗೊಂಡಿತು. ಸಾಮಾಜಿಕ ಯೋಜನೆಯಡಿಯಲ್ಲಿ ವಸತಿ, ನಗರ ಮತ್ತು ಗ್ರಾಮೀಣ ನೀರು ಸರಬರಾಜು ಹಾಗೂ ಗ್ರಾಮೀಣ ವಿದ್ಯುದೀಕರಣಗಳಿಗೆಲ್ಲ ನಿಗಮ ತನ್ನ ಸಂಪತ್ತನ್ನು ತೊಡಗಿಸಲು ಪ್ರಾರಂಭಿಸಿತು. ಅವರ ಈ ಸೇವೆಯನ್ನು ಪರಿಗಣಿಸಿ 1972ರಲ್ಲಿ ಸರಕಾರ ಪದ್ಮಭೂಷಣ ಪ್ರಶಸ್ತಿಯನ್ನು ಅವರಿಗೆ ನೀಡಿತು. 1973ರಲ್ಲಿ ಅವರಿಗೆ ಕರ್ನಾಟಕ ವಿಶ್ವವಿದ್ಯಾಲಯ ಡಿ.ಲಿಟ್(ಡಾಕ್ಟರೇಟ್) ಪದವಿಯನ್ನು ಕೊಡಮಾಡಿತು. ಆಂಧ್ರ ವಿಶ್ವವಿದ್ಯಾಲಯ, 1975ರಲ್ಲಿ ಡಿ.ಲಿಟ್ ಪದವಿಯನ್ನು ಘೋಷಿಸಿತು.

1972ರ ಮಾರ್ಚ್‌ನಲ್ಲಿ ಅವರು ಎಲ್.ಐ.ಸಿ.ಯ ಅಧ್ಯಕ್ಷ ಸ್ಥಾನವನ್ನು ತೆರವುಗೊಳಿಸಿದರು. ಅದೇ ವರ್ಷ ಏಪ್ರಿಲ್‌ನಲ್ಲಿ ಅವರು ಮೈಸೂರು ರಾಜ್ಯದಿಂದ ರಾಜ್ಯ ಸಭಾ ಸದಸ್ಯರಾಗಿ ಚುನಾಯಿತರಾದರು. 1972ರ ಜುಲೈ 22ರಂದು ಪೈಯವರು ಕೇಂದ್ರ ರೇಲ್ವೇ ಸಚಿವರಾಗಿ ನೇಮಕಗೊಂಡರು. 1973 ಫೆಬ್ರವರಿ 5ರಂದು, ನೂತನವಾಗಿ ಸ್ಥಾಪಿಸಲಾದ ಘನ ಉದ್ದಿಮೆಯ ಸಚಿವ ಪದವಿಯನ್ನು ಅವರಿಗೆ ನೀಡಲಾಯಿತು. ಅದೇ ವರ್ಷ ಅಂದರೆ, 1973 ಜುಲೈ 23ರಂದು ಅವರಿಗೆ ಉಕ್ಕು ಮತ್ತು ಗಣಿಗಾರಿಕೆಯ ಹೆಚ್ಚುವರಿ ಖಾತೆಗಳನ್ನು ನೀಡಲಾಯಿತು. 1974 ಅಕ್ಟೋಬರ್ ತಿಂಗಳಲ್ಲಿ ಅವರು ಕೈಗಾರಿಕೆ ಮತ್ತು ನಾಗರಿಕ ಸರಬರಾಜು ಮಂತ್ರಿ ಪದವಿಯನ್ನು ವಹಿಸಿಕೊಂಡರು. ವಿಜ್ಞಾನ ಮತ್ತು ತಂತ್ರಜ್ಞಾನ

ಖಾತೆಯನ್ನು ಕೂಡಾ ಅವರು ಸ್ವಲ್ಪ ಸಮಯ ನಿಭಾಯಿಸಿದ್ದಾರೆ. ಮುಂದೆ ಕೇಂದ್ರ ಕೈಗಾರಿಕಾ ಮಂತ್ರಿಯಾಗಿಯೂ ಅವರು ಸೇವೆ ಸಲ್ಲಿಸಿದರು.

1975ರಲ್ಲಿ ದೇಶದ ಮೇಲೆ ಹೇರಲಾದ ತುರ್ತುಪರಿಸ್ಥಿತಿಯ ನಂತರದ 1977ರ ಮಹಾಚುನಾವಣೆಯಲ್ಲಿ ಪೈಯವರು ಉಡುಪಿ ಕ್ಷೇತ್ರದಿಂದ ಸಂಸತ್ ಸದಸ್ಯರಾಗಿ ಆಯ್ದು ಬಂದರು. ಮುಂದೆ ಜನತಾಪಕ್ಷವನ್ನು ಸೇರಿ ಮತ್ತೊಮ್ಮೆ ಅವರು ರೇಲ್ವೇ ಸಚಿವರಾದರು.

***

## ಪ್ರಮುಖ ಘಟನೆಗಳ ಪಟ್ಟಿ – ವಿಹಂಗಮ ನೋಟ

17.1.1922 – ಉಪೇಂದ್ರ ಪೈ–ಪಾರ್ವತಿ ಅಮ್ಮ ದಂಪತಿಗಳ ಪುತ್ರನಾಗಿ ಜನನ

1943 – ಬಿ.ಕಾಂ. ಪದವಿ

1943 – ಸಿಂಡಿಕೇಟ್ ಬ್ಯಾಂಕಿನಲ್ಲಿ ಡೆಪ್ಯುಟಿ ಮ್ಯಾನೇಜರ್ ಆಗಿ ವೃತ್ತಿ ಜೀವನ ಆರಂಭ

1944 – ಸಿಂಡಿಕೇಟ್ ಬ್ಯಾಂಕಿನ ಜನರಲ್ ಮ್ಯಾನೇಜರ್ ಆಗಿ ಭಡ್ತಿ

1952 – ಮದ್ರಾಸು ಶಾಸನ ಸಭೆಗೆ ಶಾಸಕನಾಗಿ ಆಯ್ಕೆ

1955 – ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆ

1957 – ಉಡುಪಿ ಎಂ.ಜಿ.ಎಂ. ಕಾಲೇಜಿನ ವ್ಯವಸ್ಥಾಪಕರಾಗಿ ನೇಮಕ

1962 – ದ.ಕ.ಜಿಲ್ಲಾ ಕೃಷಿ ಅಭಿವೃದ್ಧಿ ಸಹಕಾರಿ ಸಂಘದ ಸ್ಥಾಪನೆ

1962 – ಸಿಂಡಿಕೇಟ್ ಬ್ಯಾಂಕ್‌ನ ಆಡಳಿತ ನಿರ್ದೇಶಕರಾಗಿ ಅಧಿಕಾರ ಸ್ವೀಕಾರ

1.1.1965 – ಭಾರತೀಯ ಆಹಾರ ನಿಗಮದ ಸ್ಥಾಪಕಾಧ್ಯಕ್ಷರಾಗಿ ಅಧಿಕಾರ ಸ್ವೀಕಾರ

1966 – ಸಿಂಡಿಕೇಟ್ ಬ್ಯಾಂಕಿಗೆ ಪುನರಾಗಮನ

1968 – ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾಗಿ ನೇಮಕ

19.7.1969 – ಸಿಂಡಿಕೇಟ್ ಬ್ಯಾಂಕಿನ ಕಸ್ಟೋಡಿಯನ್ ಆಗಿ ನೇಮಕ

2.3.1970 – ಭಾರತೀಯ ಜೀವವಿಮಾ ನಿಗಮದ ಅಧ್ಯಕ್ಷರಾಗಿ ಅಧಿಕಾರ ಸ್ವೀಕಾರ

27.3.1972 – ಜೀವವಿಮಾ ನಿಗಮದಿಂದ ನಿರ್ಗಮನ

1972 – ಮೈಸೂರು ರಾಜ್ಯಸಭಾ ಸದಸ್ಯರಾಗಿ ಚುನಾಯಿತ

22.7.1972 – ಕೇಂದ್ರ ರೈಲ್ವೆ ಸಚಿವರಾಗಿ ಅಧಿಕಾರ ಸ್ವೀಕಾರ

8.9.1972 – ವಸಂತಿ ಪೈಯವರೊಂದಿಗೆ ತಿರುಪತಿಯಲ್ಲಿ ವಿವಾಹ

1972 – ಪದ್ಮಭೂಷಣ ಪ್ರಶಸ್ತಿ

3.2.1973 – ಕೇಂದ್ರದಲ್ಲಿ ಘನ ಉದ್ದಿಮೆ ಸಚಿವರಾಗಿ ಅಧಿಕಾರ ಸ್ವೀಕಾರ

23.7.1973 – ಕೇಂದ್ರ ಉಕ್ಕು ಮತ್ತು ಗಣಿಗಾರಿಕೆಯ ಹೆಚ್ಚುವರಿ ಖಾತೆ

1973 – ಕರ್ನಾಟಕ ವಿಶ್ವವಿದ್ಯಾಲಯದಿಂದ ಡಿ.ಲಿಟ್. ಪದವಿ

1974 – ಕೇಂದ್ರ ಕೈಗಾರಿಕಾ ಮತ್ತು ನಾಗರಿಕ ಸರಬರಾಜು ಸಚಿವರಾಗಿ ಅಧಿಕಾರ ಸ್ವೀಕಾರ –ವಿಜ್ಞಾನ ಮತ್ತು ತಂತ್ರಜ್ಞಾನದ ಹೆಚ್ಚುವರಿ ಖಾತೆ

1975 – ಆಂಧ್ರ ವಿಶ್ವವಿದ್ಯಾಲಯದಿಂದ ಡಿ.ಲಿಟ್. ಪದವಿ

1977 – ಲೋಕಸಭೆಗೆ ಪುನರಾಯ್ಕೆ, ವಿರೋಧ ಪಕ್ಷದಲ್ಲಿ ಸಂಸದೀಯ ಪಟುವಾಗಿ

1979 – ಚರಣ್ ಸಿಂಗ್ ಸಂಪುಟದಲ್ಲಿ ಕೇಂದ್ರ ಸಚಿವರಾಗಿ ನೇಮಕ

1980 – ಸಕ್ರಿಯ ರಾಜಕೀಯದಿಂದ ನಿವೃತ್ತಿ ಮತ್ತು ಸಾರ್ವಜನಿಕ ಸೇವೆ ಮತ್ತು ಗ್ರಾಮೀಣ ಅಭಿವೃದ್ಧಿ ಚಟುವಟಿಕೆಗಳಲ್ಲಿ ಮಗ್ನ

29.5.1981 – ದೈವಾಧೀನ

# ಧೀಮಂತ ವ್ಯಕ್ತಿತ್ವ



ಅಸಾಧಾರಣ ಕಾರ್ಯಸಾಮರ್ಥ್ಯ, ಅಪೂರ್ವ ದಕ್ಷತೆ, ಅಪ್ಪಟ ಪ್ರಾಮಾಣಿಕತೆ, ಅತುಲ್ಯ ಮಾನವೀಯ ಅಂತಃಕರಣ, ಅಸಾಮಾನ್ಯ ಆಧ್ಯಾತ್ಮಿಕ ಉತ್ತುಂಗತೆ, ಎಲ್ಲಕ್ಕೂ ಮಿಗಿಲಾಗಿ ಅಪಾರ ದೇಶಪ್ರೇಮ - ಇವೆಲ್ಲ ವಿಶೇಷಣಗಳು ಒಂದೆಡೆ ಮೇಳೈಸಿ ಮೂರ್ತೀಭವಿಸಿದರೆ ಒಡಮೂಡುವ ವ್ಯಕ್ತಿತ್ವವೇ-ತೋನ್ಸೆ ಅನಂತ ಪೈ ಅಥವಾ ಚುಟುಕಿನಲ್ಲಿ ಟಿ.ಎ.ಪೈ. ಕಳೆದ ಶತಮಾನದಲ್ಲಿ ದೇಶ ಕಂಡ ಮಹಾನ್ ಅರ್ಥ ಶಾಸ್ತ್ರಜ್ಞ, ಆಡಳಿತಗಾರ, ಸಾಧಕರು ಅವರು; ರಾಷ್ಟ್ರರಂಗದಲ್ಲಿ ಉಜ್ವಲವಾಗಿ ಬಾಳಿ ಬೆಳಗಿದ ಧೀಮಂತ ವ್ಯಕ್ತಿತ್ವದ ನಾಯಕರೂ ಹೌದು.

ಬ್ಯಾಂಕಿಂಗ್ ಕ್ಷೇತ್ರದಲ್ಲಿ ತಾವು ಕೈಗೊಂಡ ಸೃಜನಶೀಲ ಪ್ರಯೋಗಗಳಿಂದ ಇಡೀ ದೇಶದ ಗಮನವನ್ನು ಅವರು ಸೆಳೆದರು. ತಮ್ಮ ನೇತೃತ್ವದಲ್ಲಿ ಜೀವವಿಮಾ ನಿಗಮ ಹೊಸ ಜೀವ ತಳೆದು ಪ್ರಗತಿಪಥದಲ್ಲಿ ಮುನ್ನಡೆ ಸಾಧಿಸುವಂತೆ ದಾರಿ ತೋರಿದರು. ಭಾರತೀಯ ಆಹಾರ ನಿಗಮದ ಅಭ್ಯುದಯಕ್ಕೆ ಸ್ಥಾಪಕಾಧ್ಯಕ್ಷರಾಗಿ ಹಸಿರು ಕ್ರಾಂತಿಯ ನಾಂದಿಹಾಡಿದರು. ಕೇಂದ್ರ ಸರಕಾರದ ರೇಲ್ವೇ, ಉದ್ದಿಮೆ, ಭಾರೀ ಉದ್ದಿಮೆ ಮತ್ತು ಇನ್ನಿತರ ಖಾತೆಗಳನ್ನು ದಕ್ಷತೆಯಿಂದ ನಿರ್ವಹಿಸಿ, ಅವುಗಳನ್ನು ಸಶಕ್ತಗೊಳಿಸಿ, ಯಶಸ್ವೀ ಸಂಸದೀಯ ಪಟುವಾಗಿ ಬೆಳಗಿದರು. ಆಡಳಿತ ಶಿಕ್ಷಣ, ಸಹಕಾರೀ ರಂಗ ಹಾಗೂ ಗ್ರಾಮೀಣಾಭಿವೃದ್ಧಿ- ಮುಂತಾದ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆ ಸಲ್ಲಿಸಿದರು. ಒಬ್ಬ ವ್ಯಕ್ತಿಯೇ ತನ್ನ ಜೀವಮಾನದಲ್ಲಿ ಇಷ್ಟೆಲ್ಲ ಸಾಧಿಸಲು ಸಾಧ್ಯವೇ ಎಂಬ ಪ್ರಶ್ನೆ, ಪ್ರಶ್ನೆಯಾಗಿಯೇ ಉಳಿಯುವಂತೆ ಮಾಡಿದವರು ಟಿ.ಎ.ಪೈ.

ಇಂದಿಗೆ ಸುಮಾರು 89ವರ್ಷಗಳ ಹಿಂದೆ, ಅಂದರೆ, 1922 ಜನವರಿ 17ರಂದು ಜನಿಸಿದ ಟಿ.ಎ.ಪೈಯವರು ತೀರಿಕೊಂಡಾಗ ಅವರಿಗೆ 60ವರ್ಷ ಕೂಡಾ ತುಂಬಿರಲಿಲ್ಲ. 1981, ಮೇ ತಿಂಗಳ 29ರಂದು ಅವರು ಇಹಲೋಕ ತ್ಯಜಿಸಿದರು.

## ಕಾಯಕ ಯೋಗಿ

ಅವರು ಹುಟ್ಟಿದ್ದು ಸಾಂಸ್ಕೃತಿಕವಾಗಿ ಸಮೃದ್ಧವಾದ ಹಳ್ಳಿಯೊಂದರಲ್ಲಿ– ಹಾಗಾಗಿ ಗ್ರಾಮೀಣ ಪರಿಸರದ ಒಲುಮೆ ಅವರ ಬದುಕಿನುದ್ದಕ್ಕೂ ಹಾಸುಹೊಕ್ಕಾಗಿತ್ತು. ಅವರ ಪ್ರತಿಯೊಂದು ಕಾಯಕದಲ್ಲೂ ಗ್ರಾಮ ಬದುಕಿನ ಬಗೆಗಿನ ಪ್ರೇಮ ಎದ್ದು ಕಾಣುತ್ತಿತ್ತು. ತಮ್ಮ ತಂದೆಯಂತೆ ಅವರೊಬ್ಬ ಕ್ರಿಯಾಶೀಲ, ಸೃಜನಶೀಲ ವ್ಯಕ್ತಿಯೂ ಆಗಿದ್ದರು. ಜನಸಾಮಾನ್ಯರ ಅವಶ್ಯಕತೆಗಳನ್ನು ಪೂರೈಸುವುದು ಅವರಲ್ಲಿ ಜನ್ಮತಃ ಬಂದಂಥ ಗುಣವಾಗಿತ್ತು.

ಪ್ರಾಮಾಣಿಕತೆ ಮತ್ತು ಸತ್ಯಸಂಧತೆ ಜನಸಾಮಾನ್ಯರ, ಅದರಲ್ಲೂ ರೈತರಲ್ಲಿ ಇರಬೇಕಾದ ಮೌಲಿಕ ಅರ್ಹತೆಯೆಂದು ಅವರು ಪ್ರತಿಪಾದಿಸುತ್ತಿದ್ದರು. ಅವರ ನೇತೃತ್ವದಲ್ಲಿನ ಸಿಂಡಿಕೇಟ್ ಬ್ಯಾಂಕ್, ರೈತ ಸಮುದಾಯಕ್ಕೆ ಪ್ರಥಮವಾಗಿ ಸಾಲವನ್ನು ನೀಡುವ ಯೋಜನೆಯನ್ನು ಕೈಗೊಂಡಿದ್ದು ಮತ್ತು ರೈತರಿಗೆ ಕೊಡಮಾಡಿದ ಸಾಲ ನಿಜವಾಗಿಯೂ ಸುರಕ್ಷಿತವಾದ ಬಂಡವಾಳವೆಂದು ಘೋಷಿಸಿ, ಅವರು ಸಾರಿದ್ದು ಅಂದಿನ ಕಾಲದ ಒಂದು ಕ್ರಾಂತಿಕಾರೀ ಹೆಜ್ಜೆಯೇ ಆಗಿತ್ತು. 'ನಾವು ಆರ್ಥಿಕವಾಗಿ ಸಬಲರಲ್ಲ, ಆದರೆ ಮಾನವ ಸಂಪನ್ಮೂಲದಲ್ಲಿ ಬಹಳಷ್ಟು ಬಲಿಷ್ಠರಿದ್ದೇವೆ'– ಎಂಬಂಥ ಅತೀವ ಆತ್ಮವಿಶ್ವಾಸ ಅವರಲ್ಲಿತ್ತು!

ಟಿ.ಎ.ಪೈಯವರ ಕರ್ತೃತ್ವಶಕ್ತಿಗೆ ಮನ್ನಣೆ ಎಂಬಂತೆ, ಜನತೆ ಅವರನ್ನು ಆಯ್ಕೆ ಮಾಡಿ 1952ರ ಕಾಲಕ್ಕೇ ಮದ್ರಾಸು ವಿಧಾನ ಸಭೆಗೆ ಒಯ್ದರು. ಆರ್ಥಿಕ ತಜ್ಞರಾಗಿ ಸಿಂಡಿಕೇಟ್ ಬ್ಯಾಂಕಿನ ಜತೆ ತಮ್ಮ ಅವಿನಾಭಾವ ಸಂಬಂಧವನ್ನು ಬೆಳೆಸಿಕೊಂಡ ಪೈಯವರು ಅದರ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾದರು. ಸರಕಾರವೇ ಅವರ ಸೇವೆಯ ಉತ್ಕೃಷ್ಟತೆಯನ್ನು ಮನಗಂಡು, ಭಾರತೀಯ ಆಹಾರ ನಿಗಮದ ಅಧ್ಯಕ್ಷರನ್ನಾಗಿ ಆರಿಸಿತು. ಮುಂದೆ ಜೀವವಿಮಾ ನಿಗಮದ ಅಧ್ಯಕ್ಷರೂ ಆದರು. ಈ ಎಲ್ಲಾ ಸಾಧನೆಯ ಹಿನ್ನೆಲೆಯಲ್ಲಿ ಅವರು ಕೇಂದ್ರ ಸರಕಾರದ ಸಚಿವರಾಗಿ ಆಯ್ಕೆಯಾದುದು ಸಹಜವಾಗಿಯೇ ಇತ್ತು. ಮುಂದೆ ಅಧಿಕಾರವಿರಲಿ ಇಲ್ಲದಿರಲಿ ಅವರು ತಮ್ಮ ಬದುಕಿನ ಕೊನೆಯ ದಿನಗಳನ್ನು ಸಾಮಾನ್ಯ ಜನತೆಯ ಆಶೋತ್ತರಗಳನ್ನು ಪೂರೈಸುವುದಕ್ಕೆ ಮುಡಿಪಾಗಿಟ್ಟರು.

ಪ್ರಶಸ್ತಿ ಪಾರಿತೋಷಕಗಳು ಅವರನ್ನು ಅರಸಿಕೊಂಡು ಬಂದವು. ವಿವಿಧ ವಿಶ್ವವಿದ್ಯಾಲಯಗಳ ಡಾಕ್ಟರೇಟ್ ಪದವಿಗಳು, ಕೇಂದ್ರ ಸರಕಾರ ಕೊಡಮಾಡಿದ ಪದ್ಮಭೂಷಣ ಪ್ರಶಸ್ತಿ, ಅವರ ಸಾಧನೆಯನ್ನು ಗುರುತಿಸಿ ನೀಡಿದ ವಿಶೇಷ ಪುರಸ್ಕಾರಗಳು.

ಅವರೊಬ್ಬ ಧೀಮಂತ ವ್ಯಕ್ತಿತ್ವದ ಕಾಯಕಯೋಗಿ. ಬರೀ ಹೆಸರಿನಿಂದ ಮಾತ್ರ ಅವರು 'ಅನಂತ'ರಾಗಿರಲಿಲ್ಲ– ಹೃದಯ ವೈಶಾಲ್ಯತೆಯಿಂದಲೂ ಅವರು 'ಅನಂತ'ವಾಗಿಯೇ ಬಾಳಿದರು. ಪ್ರಯೋಗಶೀಲ ಚಿಂತನೆಗಳು ಜನಸಾಮಾನ್ಯರ ಬದುಕಿನಲ್ಲಿ ಯಾವ ತೆರನಾದ ಪರಿಣಾಮಗಳನ್ನು ಹುಟ್ಟುಹಾಕಬಹುದೆಂಬುದಕ್ಕೆ ಟಿ.ಎ.ಪೈಯವರ ಬದುಕೊಂದು ಜೀವಂತ ನಿದರ್ಶನ.

## ಗಣ್ಯರ ಮಾತುಗಳು

"ನಲವತ್ತು ವರ್ಷಗಳ ಹಿಂದೆ ಪೈಗಳು ಇದ್ದರೆಂದು ನಾನು ಇಂದು ಬದುಕಿ ಉಳಿದಿದ್ದೇನೆ."

–ಹೀಗಂತ ಪೈಗಳ ಮಾನವೀಯ ಅಂತಃಕರಣದ ಬಗೆಗೆ ಹೃದಯಸ್ಪರ್ಶಿಯಾಗಿ ಉದ್ಗರಿಸಿದವರು, ಅವರ ಅಪ್ಪಟ ಅಭಿಮಾನಿ, ಕನ್ನಡದ ಕಟ್ಟಾಳು, ಪ್ರಖ್ಯಾತ ಪತ್ರಕರ್ತರಾದ ಡಾ. ಪಾಟೀಲ ಪುಟ್ಟಪ್ಪನವರು.

"...ಅತ್ಯಂತ ವ್ಯಸ್ತವಾಗಿದ್ದಂಥ ವ್ಯಕ್ತಿ ಅವ್ರು. ಯಾವಾಗ ನೋಡಿದ್ರೂ ಚುರುಕಾದ ಓಡಾಟ, ಚುರುಕಾದ ಮಾತು ಅವ್ರ ಶಕ್ತಿ. ಈ ಚುರುಕುತನ, ಬಹಳ ತೀವ್ರವಾದ ಜ್ಞಾಪಕ ಶಕ್ತಿ ಮತ್ತು ಯಾವುದೇ ಒಂದು ವಿಷಯದ ಬಗ್ಗೆ ಆಳವಾದ ಅಧ್ಯಯನ ಮಾಡಿ ನಿರ್ಣಯ ಕೊಡಬಲ್ಲ ಶಕ್ತಿ ನನಗೆ ಯಾವಾಗ್ಲೂ ಆಶ್ಚರ್ಯವನ್ನುಂಟು ಮಾಡ್ತಾ ಇತ್ತು."

–ಅವರ ಕಾರ್ಯಸಾಮರ್ಥ್ಯ ಮತ್ತು ದಕ್ಷತೆಯನ್ನು ಉಲ್ಲೇಖಿಸಿದವರು, ಡಾ. ಡಿ. ವೀರೇಂದ್ರ ಹೆಗ್ಗಡೆಯವರು.

"ಅವರಲ್ಲಿ ಕೃತಕತೆಯ ಲವಲೇಶವೂ ಇರಲಿಲ್ಲ. ಯಾವ ಸಂಕುಚಿತ ಮನೋಭಾವವೂ ಇರಲಿಲ್ಲ. ಕ್ಷುಲ್ಲಕ ವಿಷಯಗಳಲ್ಲಿ ಅವರ ಮನ ಹೋಗದು. ಮನಸ್ಸು ಎಂದಿಗೂ ಕಠಿಣವಾಗದು. ಅಷ್ಟು ಅನುಭವ ಸಂಪಾದಿಸಿದ್ದರೂ,

ಅದೆಷ್ಟೋ ಜನರನ್ನು ಸನಿಹದಿಂದ ಬಲ್ಲವರಾಗಿದ್ದರೂ ಅವರಲ್ಲಿ ಧಾಂಬಿಕತೆ ಇರಲಿಲ್ಲ.

"ಅವರ ಜೀವನ ಮೃದು. ಅವರೂ ಮೃದು. ಅವರ ಗೆಳೆತನ ನನಗೀಗ ಇಲ್ಲ. ನನ್ನ ಜತೆ ಈ ಜೀವಕ್ಕೆ ನಮನ ಸಲ್ಲಿಸುವವರು ನೂರಾರು ಜನ ಇದ್ದಾರೆಂಬುದು ಸತ್ಯ."

–ಅವರ ಸರಳ, ಪ್ರಾಮಾಣಿಕ, ನಿಸ್ಪೃಹ, ಸ್ನೇಹಪರ ವ್ಯಕ್ತಿತ್ವವನ್ನು ಕೊಂಡಾಡಿದವರು ಅವರ ಓರಗೆಯ ಗೆಳೆಯ, ವಿಶ್ವವಿಖ್ಯಾತ ಪತ್ರಕರ್ತ, ಪ್ರಸಾರ ಭಾರತಿಯ ವಿಶ್ರಾಂತ ಅಧ್ಯಕ್ಷರಾದ ಡಾ.ಎಂ.ವಿ.ಕಾಮತ್

"ನನ್ನ ಸುದೀರ್ಘ ಜೀವನದಲ್ಲಿ ಒಳ್ಳೆಯ ಮಿತ್ರನಾಗಿ ನಾನು ಕಂಡ ಅತ್ಯಂತ ದಕ್ಷ , ಪ್ರಾಮಾಣಿಕ ಮತ್ತು ನಿಷ್ಠ ವ್ಯಕ್ತಿ ಶ್ರೀ ಟಿ.ಎ.ಪೈ ಅವರು. ದೀನ ದಲಿತರಿಗೆ ಸಹಾಯ ಹಸ್ತವನ್ನು ನೀಡಿ ಸಂಕಷ್ಟದಲ್ಲಿರುವವರ ಸಮಸ್ಯೆಗಳಿಗೆ ಪರಿಹಾರ ನೀಡಿ ಸ್ಫೂರ್ತಿ ನೀಡಿ ಬಡವ ಬಲ್ಲಿದರೆನ್ನದೇ ಎಲ್ಲರ ಮಟ್ಟಿಗೆ ಆಪದ್ಬಾಂಧವ ರಾದವರು." –ಅವರ ಸಮಕಾಲೀನರೂ, ದೇಶದ ನ್ಯಾಯಾಂಗ ತಜ್ಞರೂ, ಸುಪ್ರೀಂ ಕೋರ್ಟಿನ ನ್ಯಾಯಾಧೀಶರೂ ಆಗಿದ್ದ ವಿ.ಎಸ್. ಕೃಷ್ಣ ಅಯ್ಯರ್ ಅವರು ಹೇಳಿದ ಮಾತು.

## ವಂಶವೃಕ್ಷ

ಟಿ.ಎ.ಪೈಯವರದ್ದು ಅಪೂರ್ವ ಸಾಧನೆಗಳನ್ನು ಮಾಡಿರುವ ವಂಶವೃಕ್ಷ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಪ್ರಸಿದ್ಧವಾದ ಉಡುಪಿಯಿಂದ ಸುಮಾರು ನಾಲ್ಕು ಮೈಲಿ ಉತ್ತರಕ್ಕಿರುವ ತೋನ್ಸೆ ಗ್ರಾಮವೇ ಟಿ.ಎ.ಪೈಯವರ ಪೂರ್ವಜರ ಮೂಲಸ್ಥಾನ. ಹಾಗಾಗಿಯೇ ಅವರು ತೋನ್ಸೆ ಅನಂತ ಪೈ.

ತೋನ್ಸೆ ಗ್ರಾಮದಲ್ಲಿ ಮಂಜು ಪೈಯವರ ಮಗ ರಂಗ ಪೈ ಪ್ರಮುಖ ವ್ಯಾಪಾರಸ್ಥರಾಗಿದ್ದರು. ಹತ್ತೊಂಬತ್ತನೆ ಶತಮಾನದ ಕೊನೆಯ ಭಾಗದಲ್ಲಿ ರಂಗ ಪೈ ಬ್ರಹ್ಮಾವರಕ್ಕೆ ತಮ್ಮ ವಾಸ್ತವ್ಯವನ್ನು ಬದಲಿಸಿಕೊಂಡರು.

ರಂಗ ಪೈಯವರದ್ದು ದೊಡ್ಡ ಸಂಸಾರ- ಏಳು ಮಂದಿ ಗಂಡು, ಮೂವರು ಹೆಣ್ಮಕ್ಕಳು. ಮಹಾ ಸಿರಿವಂತರಲ್ಲದಿದ್ದರೂ, ತಕ್ಕಮಟ್ಟಿನ ಆದಾಯವಿದ್ದ ರಂಗಪೈಗಳು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಒದಗಿಸುವುದರಲ್ಲಿ ಹಿಂದೆ ಬೀಳಲಿಲ್ಲ. ಅವರ ಮಗ ಮುಕುಂದ ಮೆಟ್ರಿಕ್ಯುಲೇಶನ್ ಮುಗಿಸಿ ಮದ್ರಾಸಿನಲ್ಲಿ ಬಿ.ಎ. ಪದವಿಯನ್ನು ಗಳಿಸಿದ್ದು ಅಂದಿನ ಕಾಲದ ದೊಡ್ಡ ಸಾಧನೆಯಾಗಿತ್ತು. ಮುಕುಂದ ವಕೀಲ ವೃತ್ತಿ ಕೈಗೊಂಡು ಉಡುಪಿಯಲ್ಲಿ ತಂಗಿದರು. ಅವರ ಮನೆ **'ಮುಕುಂದ ನಿವಾಸ'**ವೇ ಮುಂದಿನ ಪೀಳಿಗೆಯವರ ವಿದ್ಯಾಭ್ಯಾಸಕ್ಕೆ ಆಶ್ರಯ ತಾಣವಾಯಿತು.


ವಕೀಲ ಮುಕುಂದ ಪೈ

ರಂಗಪೈಯವರ ನಾಲ್ಕನೇ ಮಗ, ಟಿ.ಎ.ಪೈಯವರ ತಾತನವರ ಹೆಸರು ಅನಂತ. ಅವರಿಗೆ ಆಧ್ಯಾತ್ಮದಲ್ಲಿ ಅಪಾರ ಒಲವು. ಸಾಧು ಸಂತರ ಸತ್ಸಂಗ, ಗ್ರಾಮ ಪುರೋಹಿತರಿಂದ ಪುರಾಣ ಪ್ರವಚನ ಕೇಳುವುದು- ಅವರ ಅಚ್ಚುಮೆಚ್ಚಿನ ಹವ್ಯಾಸವಾಗಿತ್ತು. ಅನಂತರಿಗೆ 19ನೇ ವರ್ಷದಲ್ಲಿ ಮದುವೆಯಾಯಿತು-ಕಲ್ಯಾಣಪುರದ ಸಿರಿವಂತರಾದ ಬಾಳಿಗಾ ಕುಟುಂಬದಿಂದ ಬಂದ ಯಶೋದಾ ಅವರೊಂದಿಗೆ


ಡಾ. ಟಿ.ಎಂ.ಎ.ಪೈ

ಅನಂತ- ಯಶೋಧಾರದ್ದು ಆದರ್ಶ ದಾಂಪತ್ಯ. ಈ ದಂಪತಿಗಳಿಗೆ, ಪುರುಷೋತ್ತಮ, ಉಪೇಂದ್ರ (ಟಿ.ಎ.ಪೈಯವರ ತಂದೆ), ಮಾಧವ (ಮಣಿಪಾಲದ ಕಾಯಕಶಿಲ್ಪಿ - ಮಣಿಪಾಲದ ಸಮಗ್ರ ಅಭ್ಯುದಯಕ್ಕೆ ಕಾರಣರಾದ ಡಾ.ಟಿ.ಎಂ.ಎ.ಪೈ), ತದನಂತರ, ಮಾರ್ತಾ ಮತ್ತು ಕೊನೆಯದಾಗಿ ರಘುನಾಥ- ಹೀಗೆ ನಾಲ್ಕು ಗಂಡು, ಒಂದು ಹೆಣ್ಣು ಮಕ್ಕಳು. ಇದು ಟಿ.ಎ.ಪೈಯವರ ತಾತ ಅನಂತ ಪೈಯವರ ಕುಟುಂಬ. ತಾತ ಅನಂತ ಪೈ ಬಹಳ ಸಾತ್ವಿಕ ಮನುಷ್ಯ, ಆದರೆ ಅಷ್ಟೇ ಶಿಸ್ತಿನ ತಂದೆ. ಮಕ್ಕಳು ಏನಾದರೂ ತಪ್ಪೆಸಗಿದರೆ, ಮನೆ ದೇವರ

ಸಮಕ್ಷಮ ಬಸ್ಕಿ ಹೊಡೆಸುವುದೇ ದಂಡ. ತತ್ಫಲವಾಗಿ ಅವರ ಲೆಕ್ಕಾಚಾರದಲ್ಲಿ ಮೂರು ಪ್ರಯೋಜನ– ಒಂದು ಶಿಸ್ತು, ಎರಡು ದೈವ ಪ್ರೀತಿ ಮತ್ತು ಮೂರನೇದ್ದು ದೈಹಿಕ ವ್ಯಾಯಾಮ– ಹೀಗಾಗಿ ಈ ಬಗೆಯ ದಂಡದಿಂದ ಲಾಭವೇ ಜಾಸ್ತಿ ಎನ್ನುವುದಿತ್ತು!

ಅನಂತ ಪೈಯವರ ಎರಡನೆ ಮಗ ಉಪೇಂದ್ರ ಪೈ, ಟಿ.ಎ.ಪೈಯವರ ತಂದೆ. ತಾಯಿ ಪಾರ್ವತಿ ಅಮ್ಮ. ಈ ದಂಪತಿಗಳ ಹಿರಿಯ ಮಗನಾಗಿ ಜನಿಸಿದ ಟಿ.ಎ.ಪೈಯವರಿಗೆ ಅವರ ಅಜ್ಜನ ನೆನಪಿಗಾಗಿ ಅನಂತ ಎಂದು ನಾಮಕರಣ ಮಾಡಿದರು. ಅಜ್ಜಿ ಯಶೋದಾಗೆ ಈ ಮೊಮ್ಮಗನ ಮೇಲೆ ಇನ್ನಿಲ್ಲದ ಪ್ರೀತಿ. ಆಕೆ ಇವರನ್ನು ಬಾಲಕೃಷ್ಣ ಎಂದೇ ಕರೆಯುತ್ತಿದ್ದರು. ಕ್ರಮೇಣ ಇಡೀ ಕುಟುಂಬದ ಎಲ್ಲಾ ಬಂಧುಗಳೂ, ಸದಸ್ಯರೂ ಆ ಹೆಸರಿನಿಂದಲೇ ಕರೆಯತೊಡಗಿದರು. ಮುಂದೆ ದೊಡ್ಡವರಾದ ಮೇಲೆ ಟಿ.ಎ.ಪೈ ಎಂಬ ಹೆಸರೇ ಪ್ರಸಿದ್ಧವಾಯಿತು.

ಇವರೆಲ್ಲರೂ ಉಡುಪಿಯ 'ಮುಕುಂದ ನಿವಾಸ'ದ ಮನೆಯಲ್ಲಿ ಅವಿಭಕ್ತ ಕುಟುಂಬದ ವಾತಾವರಣದಲ್ಲಿ ಬೆಳೆದವರು. ಟಿ.ಎ.ಪೈಯವರ ತಂದೆ ಉಪೇಂದ್ರ ಪೈ, ಸೌಮ್ಯ ಸ್ವಭಾವದ, ಉದಾರ ಮನಸ್ಸಿನ ವ್ಯಕ್ತಿ. ಜತೆಗೆ ಅವರಿಗೆ ಬಹುಮುಖಿ ಆಸಕ್ತಿಗಳು. ಮಿತಭಾಷಿಯಾದರೂ ದುಡಿಮೆಯಲ್ಲಿ **ಅಜ್ಜಿ ಯಶೋದಾ ಮೊಮ್ಮಗ ಅನಂತ** ಅಪಾರ ನಂಬಿಕೆ.



ಸಿಂಡಿಕೇಟ್ ಬ್ಯಾಂಕ್‌ನ ಸ್ಥಾಪಕರಾದ ಉಪೇಂದ್ರ ಪೈ

ಉಪೇಂದ್ರ ಪೈ ದಂಪತಿಗಳಿಗೆ ಕಾಲಕ್ರಮದಲ್ಲಿ ರಮೇಶ(ಮಣಿಪಾಲ ಶಿಕ್ಷಣ ಸಂಸ್ಥೆ / ಮಣಿಪಾಲ ಇಂಡಸ್ಟ್ರೀಸ್ ಮೊದಲಾದ ಸಂಸ್ಥೆಗಳ ಯೋಜಕರು), ಗಣೇಶ, ಸತೀಶ ('ಉದಯವಾಣಿ' ಬಳಗದ ಪ್ರಕಟಣೆಗಳ ಮುಖ್ಯಸ್ಥರು)–ಎಂಬ ಮೂವರು ಗಂಡು ಮಕ್ಕಳು. ಸುಗುಣಾ, ವರದಾ, ಲೀಲಾ ಮತ್ತು ತಾರಾ ಎಂಬ ಹೆಣ್ಣು ಮಕ್ಕಳು ಜನಿಸಿದರು. ಉಪೇಂದ್ರ ಪೈಯವರಿಗೆ ಹೊಸ ಹೊಸ ವಿಚಾರಗಳನ್ನೂ, ಅವುಗಳ ಮೂಲಕ ಹೊಸ ಹೊಸ ಪ್ರಯೋಗಗಳನ್ನೂ ಮಾಡುವಂಥ ಪ್ರಸಕ್ತಿ.

ದೀನದಲಿತರ ಬಗೆಗೆ ಅಪಾರ ಕರುಣೆ. ಉನ್ನತ ಆದರ್ಶಗಳ ಸರಳ ಸಜ್ಜನಿಕೆಯ ಬದುಕು. ಒಟ್ಟಿನಲ್ಲಿ ಹೇಳುವುದಾದರೆ, ಉದಾರ, ಸೃಜನಶೀಲ ಬಹುಮುಖ ವ್ಯಕ್ತಿತ್ವ ಅವರದ್ದು. ಈ ಗುಣವೇ ಮುಂದಿನ ದಿನಗಳಲ್ಲಿ ಟಿ.ಎ.ಪೈಯವರ ನಡವಳಿಕೆಯಲ್ಲೂ ಎದ್ದು ಕಾಣುತ್ತಿದ್ದುದನ್ನು ನಾವು ಗಮನಿಸಬಹುದು.

## ಉದಾರ ಮನಸ್ಸಿನ ಉಪೇಂದ್ರ ಪೈ ದಂಪತಿಗಳು

ದೇಶ ಪ್ರೇಮವನ್ನೂ ಮೈಗೂಡಿಸಿಕೊಂಡ ಉಪೇಂದ್ರ ಪೈಯವರು ಅಂದಿನ ಕಾಲದ ಭಾರತೀಯ ದೇಶ ಪ್ರೇಮಿಗಳಂತೆ, ತಾವೂ ಗಾಂಧೀಜಿಯವರ ಪ್ರಭಾವದಿಂದ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಕೊಂಡರು. ಅದರ ಸಂಕೇತವೆಂಬಂತೆ, ಉಡುಪಿಯಲ್ಲಿ ಅವರು ಸ್ನೇಹಿತ ಕಾಡಬೆಟ್ಟು ಶ್ರೀನಿವಾಸ ಪೈಗಳ ಜತೆಗೂಡಿ, ಖಾದಿ ಭಂಡಾರವನ್ನು ಸ್ಥಾಪಿಸಿದರು. ಸ್ವತಃ ಖಾದಿಧಾರಿಗಳಾದರು. ನೇಕಾರರು, ಕಮ್ಮಾರರು, ಕುಂಬಾರರು, ಬಡಗಿಗಳು ಮುಂತಾದ ಹಳ್ಳಿಯ ಕುಶಲಕರ್ಮಿಗಳ ಮೇಲೆ ಅವರಿಗೆ ಅಪಾರ ಪ್ರೀತಿ. ಅಂತಹ ಕುಟುಂಬಗಳಿಗೆ ನೆರವಾಗಬೇಕೆಂಬ ಉದ್ದೇಶದಿಂದ, ಅವರಿಂದ ಏನಾದರೂ ಕೆಲಸ ಮಾಡಿಸಿ ವೇತನ ನೀಡುವ ಉದಾರ ಮನಸ್ಸಿತ್ತು ಅವರಿಗೆ. ಕಟ್ಟಡಗಳನ್ನು ಕಟ್ಟಿಸುವುದೆಂದರೆ ಅವರಿಗೆ ಇಷ್ಟವಾದ

ಕೆಲಸ. ಕಡಿಮೆ ಖರ್ಚಿನಲ್ಲಿ ಸ್ಥಳೀಯವಾಗಿ ಲಭ್ಯವಾಗುವ ವಸ್ತುಗಳನ್ನು ಉಪಯೋಗಿಸಿ ಕಟ್ಟಡಗಳನ್ನು ಅವರು ನಿರ್ಮಿಸುತ್ತಿದ್ದರು. ಇದರಲ್ಲೂ ಅವರ ಪ್ರಯೋಗಶೀಲವಾದ ಬುದ್ಧಿ ಕೆಲಸ ಮಾಡುತ್ತಿತ್ತು.

ಸಂಗೀತ. ಸಾಹಿತ್ಯ. ಚಿತ್ರಕಲೆ ಮತ್ತು ಸಿನಿಮಾದಲ್ಲೂ ಅವರಿಗೆ ಅಪಾರ ಆಸಕ್ತಿ. 1932ರಲ್ಲಿ ಅವರು ರಾಮಕೃಷ್ಣ ಥಿಯೇಟರ್‌ನ್ನು ಕಟ್ಟಿಸಿದರು. ಉಡುಪಿಯ ಮೊತ್ತಮೊದಲ ಸಿನಿಮಾ ಮಂದಿರವದು. ಆ ಕಾಲಕ್ಕೆ ಜನರಿಗೆ ಸಿನಿಮಾ ಹೊಸತು ಅನುಭವವನ್ನು ಕೊಡತಕ್ಕ ಮಾಧ್ಯಮ. ಸಿನಿಮಾ ನೋಡುವ ಆಸಕ್ತಿ ಜನರಲ್ಲಿ ಇರಲಿಲ್ಲ. ಸಿನಿಮಾ ನೋಡುವ ಚಟವನ್ನು ಜನರಲ್ಲಿ ಬೆಳೆಸುವ ಸಲುವಾಗಿ ಅವರು ಅನೇಕ ಉಪಾಯಗಳನ್ನು ಕೈಗೊಂಡರು. ಬುದ್ಧಿವಂತ ವಿದ್ಯಾರ್ಥಿಗಳಿಗೆ ಮುಖ್ಯೋಪಾಧ್ಯಾಯರ ಮೂಲಕ ಫ್ರೀ ಪಾಸುಗಳನ್ನು ಹಂಚುವ ವಿಧಾನ ಅವರು ಪ್ರಥಮವಾಗಿ ಕೈಗೊಂಡ ಸೂತ್ರ. ಇನ್ನೊಂದು, ಸಿನಿಮಾ ಪ್ರೇಕ್ಷಕರಿಗೆ ಸ್ಪರ್ಧೆಗಳನ್ನು

ಏರ್ಪಡಿಸುವಂಥದ್ದು. ಸಿನಿಮಾ ಮಂದಿರದ ಸೀಟುಗಳು ಕೆಲವೊಮ್ಮೆ ಖಾಲಿ ಬಿದ್ದಿರುವ ಸಂದರ್ಭದಲ್ಲಿ ಯಾಕಾಗಿ ಬಡಜನತೆ ಅದರ ಆನಂದವನ್ನು ಸವಿಯಬಾರದು ಎಂಬ ದೃಷ್ಟಿಯಿಂದ, ಕೂಪನ್ ವ್ಯವಸ್ಥೆ ಪ್ರಾರಂಭಿಸಿದರು. ಇದಕ್ಕೋಸ್ಕರ 'ಚಿತ್ರಕಲಾ' ಎಂಬ ಸಿನಿಮಾ ಪತ್ರಿಕೆಯನ್ನು ಹೊರಡಿಸಿದ್ದೂ ಒಂದು ದಾಖಲೆಯೇ! 'ಚಿತ್ರಕಲಾ'ದಲ್ಲಿ ಪ್ರಕಟವಾಗುತ್ತಿದ್ದ ಒಂದು ಕೂಪನ್ ಬೆಲೆ ಕೇವಲ 10ಪೈಸೆ. ಈ ವ್ಯವಸ್ಥೆಯಿಂದ ಒಂದೆಡೆ ಸಿನಿಮಾ ಮಂದಿರದ ಹಾಜರಾತಿ ಹೆಚ್ಚಿದರೆ, ಇನ್ನೊಂದೆಡೆ, 'ಚಿತ್ರಕಲಾ' ಪತ್ರಿಕೆಯ ಮಾರಾಟವೂ ವೃದ್ಧಿಸಿತು! ಉಪೇಂದ್ರ ಪೈಗಳ ಧರ್ಮಪತ್ನಿ ಪಾರ್ವತಿ ಅಮ್ಮನವರು ಪತಿಗೆ ತಕ್ಕ ಪತ್ನಿಯಾಗಿ ನಡೆದುಕೊಳ್ಳುತ್ತಿದ್ದರು. ಸೌಮ್ಯ ಸ್ವಭಾವದ ಸದ್ಗುಣಿ ಅವರು.



ಉಪೇಂದ್ರ ಪೈ ಪಾರ್ವತಿ ಅಮ್ಮ ದಂಪತಿ

ಜತೆಗೆ ತಮ್ಮ ಪತಿಯಂತೆ ಉದಾರ ಮನೋಭಾವದ ಪ್ರವೃತ್ತಿ. ಅತಿಥಿ ಸತ್ಕಾರಕ್ಕೆ ಅವರದ್ದು ಎತ್ತಿದ ಕೈ. ಮನೆಗೆ ಯಾರೇ ಬರಲಿ, ಎಷ್ಟು ಮಂದಿ ಜನರೇ ಬರಲಿ, ಎಷ್ಟು ಸಮಯಕ್ಕೇ ಬರಲಿ, ನಗುನಗುತ್ತಾ ಸತ್ಕರಿಸುವ ಹೃದಯವಂತಿಕೆ ಅವರದ್ದು. ಶ್ರೀ ರಾಮಕೃಷ್ಣ ಪರಮಹಂಸರ ಬಗೆಗೆ ವಿಶೇಷ ನಿಷ್ಠೆ ತೋರಿಸುತ್ತಿದ್ದ ಉಪೇಂದ್ರರು, ಸ್ವಾಮಿ ವಿವೇಕಾನಂದರು ಸ್ಥಾಪಿಸಿದ ಶ್ರೀರಾಮಕೃಷ್ಣ ಮಠದ ಸ್ವಾಮಿಗಳು ಉಡುಪಿ ಮಾರ್ಗವಾಗಿ ಸಾಗುವ ಸಂದರ್ಭಗಳಲ್ಲಿ ಅವರೆಲ್ಲ ಇವರ ಆದರಾತಿಥ್ಯ ಸ್ವೀಕರಿಸಿಯೇ ಮುಂದುವರಿಯುವ ಕ್ರಮವಿತ್ತು. ಪಾರ್ವತಿ ಅಮ್ಮನವರು ಅವರನ್ನೆಲ್ಲ ಹೃತ್ಪೂರ್ವಕವಾಗಿ ಸ್ವಾಗತಿಸುತ್ತಿದ್ದರು. ಅವರು ಎಲ್ಲಾ ಕಿರಿಯರಿಗೂ ಪ್ರೀತಿಯ ದೊಡ್ಡಮ್ಮನಾಗಿದ್ದರು ಎಂದು ಬೇರೆ ಹೇಳಬೇಕಾಗಿಲ್ಲ.

ಭಗವದ್ಗೀತೆ ಉಪೇಂದ್ರ ಪೈಗಳ ಇನ್ನೊಂದು ಶ್ರದ್ಧೆಯ ಆಕರ. ಮಣಿಪಾಲದಲ್ಲಿ ಅವರು ನಿರ್ಮಿಸಿದ ಕಟ್ಟಡಗಳಲ್ಲಿ ಸುಪ್ರಸಿದ್ಧವಾದ 'ಗೀತಾ ಮಂದಿರ' ಅವರ ಕೊಡುಗೆ. ಆಧ್ಯಾತ್ಮಿಕ ಕಾರ್ಯಕ್ರಮಗಳಿಗೆ ಆಶ್ರಯ ತಾಣವಾದ ಗೀತಾಮಂದಿರದಲ್ಲಿ ಭಜನಾ ಕೈಂಕರ್ಯಗಳು ಅವ್ಯಾಹತವಾಗಿ ನಡೆಯುತ್ತಿದ್ದವು.

ಉಪೇಂದ್ರ ಪೈಗಳು ಎಷ್ಟು ಪ್ರಯೋಗಶೀಲ, ಪ್ರಾಯೋಗಿಕ ವ್ಯಕ್ತಿಗಳಾಗಿದ್ದರೋ ಅಷ್ಟೇ ಭಾವುಕರೂ ಆಗಿದ್ದರು. ಯಾರನ್ನೂ ಅವರು ಸುಲಭವಾಗಿ ನಂಬಿಬಿಡುತ್ತಿದ್ದರು. ಉದಾರತೆಯಂತೂ ಅವರ ವಿಶೇಷ ಸ್ವಭಾವವಾಗಿದ್ದಿತು. ಜನರಲ್ಲಿ ನಂಬಿಕೆ ಮತ್ತು ಪ್ರೇಮವನ್ನು ಅವರು ಸ್ಫುರಿಸುತ್ತಿದ್ದರು. ಇವೆಲ್ಲ ಗುಣ ವಿಶೇಷಗಳನ್ನು ತಮ್ಮಲ್ಲಿ ಒಡಮೂಡಿಸಿಕೊಂಡಿದ್ದವರು ಟಿ.ಎ.ಪೈ.

ಟಿ.ಎ.ಪೈಯವರು ತಮ್ಮ ತಂದೆಯಂತೆ ಪ್ರಯೋಗಶೀಲರು ಹೇಗೋ ಹಾಗೆಯೇ ಕರ್ತೃತ್ವಶಾಲಿಗಳೂ ಆದರು. ಬ್ಯಾಂಕಿಂಗ್ ಇರಲಿ, ಜೀವವಿಮೆ ಇರಲಿ, ಭಾರತೀಯ ಆಹಾರ ನಿಗಮ ಇರಲಿ, ಅದು ರೇಲ್ವೇಯಾಗಿರಲಿ, ಬೃಹತ್ ಉದ್ದಿಮೆ ಅಥವಾ ಕೈಗಾರಿಕೆಯೋ, ಇಲ್ಲ ನಾಗರಿಕ ಸರಬರಾಜು ಇಲಾಖೆ ಇರಲಿ, ವಿಜ್ಞಾನ ಮತ್ತು ತಂತ್ರಜ್ಞಾನ ಇರಲಿ–ಎಲ್ಲದರಲ್ಲೂ ಎತ್ತಿದ ಕೈ ಎನಿಸಿಕೊಂಡ ಅವರ ಹಿಂದೆ ತಂದೆ ಉಪೇಂದ್ರ ಪೈಗಳ ಚೈತನ್ಯ ಕಾರ್ಯ ಸಾಧಿಸಿತ್ತೇನೋ! ತಾವು ಕೈಯಾಡಿಸಿದ ಈ ಎಲ್ಲಾ ಪ್ರತಿಯೊಂದು ಕ್ಷೇತ್ರದಲ್ಲೂ ಅವರು ಪ್ರಭುತ್ವವನ್ನು ಸಾಧಿಸಿದ್ದರೆ, ಅದರ ಹಿಂದೆ ತಂದೆ ಉಪೇಂದ್ರ ಪೈಗಳ ಕರ್ತೃತ್ವ ಶಕ್ತಿಯ ಛಾಪನ್ನು ನಾವು ನಿಶ್ಚಯವಾಗಿ ಗುರುತಿಸಬಹುದಾಗಿತ್ತು.



ತಂದೆ ಉಪೇಂದ್ರ ಪೈಯವರ ಜತೆಗೆ

## ಬಾಲ್ಯದ ದಿನಗಳು

ಮುಂದೊಂದು ದಿನ ಈ ದೇಶದ ಓರ್ವ ಪ್ರಮುಖ ಆಡಳಿತಗಾರ, ಓರ್ವ ಯಶಸ್ವೀ ಬ್ಯಾಂಕರ್ ಅಥವಾ ಓರ್ವ ಕೇಂದ್ರ ಸಚಿವರಾಗಿ ಬೆಳಗಬಹುದೆಂಬ

ಯಾವುದೇ ಕುರುಹನ್ನು ಅನಂತ್ ತಮ್ಮ ಬಾಲ್ಯದಲ್ಲಿ ತೋರಿಸಿದ್ದು ಬಹಳ ವಿರಳ. ಅವರ ಪ್ರಾರಂಭಿಕ ವಿದ್ಯಾಭ್ಯಾಸ ನಡೆದದ್ದು ಉಡುಪಿಯ ಅತೀ ಬಡ ಶಾಲೆಯೊಂದರಲ್ಲಿ, ಅದೂ ಕನ್ನಡ ಮಾಧ್ಯಮದ ಶಾಲೆಯಲ್ಲಿ. ಅನತಿ ದೂರದಲ್ಲಿದ್ದ ಪ್ರತಿಷ್ಠಿತ ಇಂಗ್ಲಿಷ್ ಮೀಡಿಯಂನ ಕಾನ್ವೆಂಟ್ ಶಾಲೆಗೆ ಸೇರಿಸುವಷ್ಟು ಆರ್ಥಿಕತೆ ಅವರ ಹೆತ್ತವರಲ್ಲಿ ಇರಲಿಲ್ಲ. ಹಾಗಾಗಿ ಅನಂತ್ ಸಾಮಾನ್ಯರಲ್ಲಿ ಒಬ್ಬರಾಗಿ ಬೆಳೆದರು.

ತದನಂತರ ಅವರು ಮಾಡರ್ನ್ ಹೈಯರ್ ಎಲಿಮೆಂಟರಿ ಶಾಲೆಯಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಜಗನ್ನಾಥ ನಾಯಕ್ ಎಂಬ ನುರಿತ ಅಧ್ಯಾಪಕರು ಆ ಶಾಲೆಯನ್ನು ನಡೆಸುತ್ತಿದ್ದರು. ಪೈಗಳ ಶಾಲಾ ಗೆಳೆಯರಲ್ಲಿ ಹೆಚ್ಚಿನವರು ಕೆಳ ಮಧ್ಯಮ ವರ್ಗದಿಂದ ಬಂದವರಾಗಿದ್ದರು. ಅವರೆಲ್ಲ ಅನಂತರಿಗಿಂತ ಬಡ ಮನೆತನದವರೇ ಆಗಿದ್ದರು. ಮುಂದಿನ ದಿನಗಳಲ್ಲಿ, ಬಡ ಜನತೆಯ ಬಗೆಗೆ ಅಪಾರ ಆಸಕ್ತಿ ಮತ್ತು ಅವರ ಏಳಿಗೆಗಾಗಿ ದುಡಿಯಬೇಕೆಂಬ ಅವರ ಸಂಕಲ್ಪ ಈ ಬಾಲ್ಯದ ಅನುಭವದಿಂದ ಬಂದಂಥ ಪ್ರೇರಣೆ ಎನ್ನಬಹುದು.

ಬಡ ಮಕ್ಕಳ ಜತೆಗಿನ ಸಂಪರ್ಕದಿಂದ ಅವರು ದುರಭ್ಯಾಸಗಳನ್ನು ಕಲಿಯುವಂತಾಯಿತು. ಅವುಗಳಲ್ಲಿ ಒಂದು, ಬೀಡಿ ಸೇದುವಂಥದ್ದು. ಒಮ್ಮೆ ಅವರು ತಮ್ಮ ರಮೇಶ್ ಜತೆಗೆ ಕಲ್ಯಾಣಪುರದ ಪೂರ್ವಿಕರ ಮನೆಗೆ ಹೋಗಿದ್ದರು. ಉಡುಪಿಗೆ ಹಿಂದಿರುಗುವ ಹಾದಿಯಲ್ಲಿ ತಮ್ಮ ರಮೇಶನನ್ನು ಬಸ್ಸಿನಲ್ಲಿ ಕಳುಹಿಸಿ ತಾವು ನಾಲ್ಕು ಮೈಲಿಗಳನ್ನು ನಡೆದು ಬರುವುದಾಗಿ ಹೇಳಿದರು. ಈ ಸಂಚಿನ ಹಿಂದೆ ಏನೋ ಮಸಲತ್ತು ಇರಬೇಕೆಂದು ಊಹಿಸಿದ ರಮೇಶ್ ಮುಕುಂದ ನಿವಾಸಕ್ಕೆ ಹಿಂದಿರುಗಿದ ತಕ್ಷಣ ತಾಯಿಗೆ ವರದಿಯನ್ನು ಒಪ್ಪಿಸಿದರು. ತಾಯಿ ಪಾರ್ವತಿಬಾಯಿ, ಅನಂತ ಮರಳಿದ ತಕ್ಷಣ 'ನಿನ್ನ ಬಾಯಿ ತೆರೆ' ಅಂತಂದು, ಪರೀಕ್ಷಿಸಿದರು. 'ನೀನು ಬೀಡಿ ಸೇದುವುದಕ್ಕೆ ಶುರುಮಾಡಿದ್ದೀಯಾ?' ಅಂತ ಜರೆದರಲ್ಲದೆ, ಅದಕ್ಕೆ ತಕ್ಕ ಶಾಸ್ತಿಯನ್ನೂ ಮಾಡಿದರು. ಅಂದಿನಿಂದ ಅವರು ಆ ಕೆಟ್ಟ ಚಟವನ್ನು ಬಿಟ್ಟುಬಿಟ್ಟರು. ಮುಂದೆ ಭಾರತೀಯ ಆಹಾರ ನಿಗಮದ ಅಧ್ಯಕ್ಷರಾಗಿದ್ದಾಗ ಗೆಳೆಯರೊಬ್ಬರು ನೀಡಿದ ಪೈಪ್ ಒಂದನ್ನು ಸೇದಲು ತೊಡಗಿ ಅಭ್ಯಾಸವಾಯಿತು.

ಕಲಿಯುವುದರಲ್ಲಿ ಪೈಗಳು ಎಷ್ಟು ಚುರುಕಾಗಿದ್ದರೋ, ಕ್ರೀಡೆ ಮತ್ತು ಕಲೆಗಳಲ್ಲಿ ಅವರಿಗೆ ಅಷ್ಟೇ ಆಸಕ್ತಿಯಿತ್ತು. ಕ್ರಿಕೆಟ್ ಅಂದರೆ ಅಚ್ಚುಮೆಚ್ಚು. ತಮ್ಮದೇ ಒಂದು ಕ್ರಿಕೆಟ್ ಟೀಮನ್ನು ಕೂಡಾ ಅವರು ಸಂಘಟಿಸಿದ್ದರು. ನಾಟಕಗಳಲ್ಲಿ ಭಾಗವಹಿಸುವುದೆಂದರೆ ಅನಂತರಿಗೆ ಅಪಾರ ಆಸಕ್ತಿ. ಶಾಲಾ ವಾರ್ಷಿಕೋತ್ಸವದಲ್ಲಿ ಅವರು ಕೃಷ್ಣದೇವರಾಯನ ಪಾತ್ರವನ್ನು ಬಹಳ ಸೊಗಸಾಗಿ ಅಭಿನಯಿಸಿದ್ದರು. ತಮ್ಮ ರಮೇಶ ಪೈ ಅದರಲ್ಲಿ ತೆನಾಲಿ ರಾಮಕೃಷ್ಣನ ಪಾತ್ರವನ್ನು ಅಭಿನಯಿಸಿದ್ದರು. ಅಣ್ಣತಮ್ಮಂದಿರೊಳಗಿನ ಈ ನಿಸ್ಪೃಹ ಸ್ನೇಹ ಅವರ ಬದುಕಿನ ಕೊನೆಯ ತನಕ ಮುಂದುವರಿದಿದ್ದುದನ್ನು ಕಾಣಬಹುದು. ಮಾಡರ್ನ್ ಹೈಯರ್ ಎಲಿಮೆಂಟರಿ ಶಾಲೆಯ ವಿದ್ಯಾಭ್ಯಾಸದ ಬಳಿಕ ಅನಂತರು ಉಡುಪಿಯ ಬೋರ್ಡ್ ಹೈಸ್ಕೂಲಿಗೆ ಸೇರ್ಪಡೆಗೊಂಡರು.

## ಭವಿಷ್ಯವನ್ನೇ ಬದಲಾಯಿಸಿದ ಹುಡುಗ

ಬೋರ್ಡ್ ಹೈಸ್ಕೂಲಿಗೆ ಸೇರುವ ಕೆಲವೇ ದಿನಗಳ ಮುಂಚೆ, ಅನಂತರ ಹೆತ್ತವರು ಬಾಬುರಾವ್ ಜೋಶಿ ಎಂಬ ಪ್ರಸಿದ್ಧ ಜೋಯಿಸರನ್ನು ಮನೆಗೆ ಕರೆಯಿಸಿ ಮಕ್ಕಳ ವಿದ್ಯಾಭ್ಯಾಸದ ಭವಿಷ್ಯವನ್ನು ಹೇಳುವ ವ್ಯವಸ್ಥೆಯನ್ನು ಮಾಡಿದ್ದರು. ಮೊದಲು ಅನಂತರ ಭವಿಷ್ಯ! 'ಈ ಹುಡುಗ ಹೈಸ್ಕೂಲ್ ವಿದ್ಯಾಭ್ಯಾಸಕ್ಕಿಂತ ಮುಂದಕ್ಕೆ ಹೋಗುವುದು ಕಷ್ಟ' ಎಂದರು ಜೋಯಿಸರು. ಆಗ ಅನಂತ ಎಂಟನೇ ತರಗತಿಯಲ್ಲಿ ಓದುತ್ತಿದ್ದುದು. ಮರೆಯಲ್ಲಿ ನಿಂತು ಈ ವಿಪರೀತ ಭವಿಷ್ಯವನ್ನು ಕೇಳಿಸಿಕೊಂಡ ಅನಂತ್ ಆ ಕ್ಷಣವೇ ಈ ಭವಿಷ್ಯವನ್ನು ಸುಳ್ಳಾಗಿಸಬೇಕೆಂದು ಪಣತೊಟ್ಟರು. ಆ ದಿನದಿಂದ ಅನಂತರ ಬದುಕಿನ ದಾರಿಯೇ ಬದಲಾಯಿತು. ಕ್ರೀಡೆಯ ಆಸಕ್ತಿ ತಣ್ಣಗಾಯಿತು. ಮರುದಿನದಿಂದಲೇ ಬೆಳಿಗ್ಗೆ 5ಗಂಟೆಗೆ ಏಳುವ ಪರಿಪಾಠವನ್ನು ಅವರು ಬೆಳೆಸಿಕೊಂಡರು. ಮುಂದಿನ ದಿನಗಳಲ್ಲಿ ಬರೀ ಓದು, ಓದು ಮತ್ತು ಓದು ಮಾತ್ರ ಉಳಿಯಿತು. ಹೆಚ್ಚಿನ ಅಭ್ಯಾಸಕ್ಕಾಗಿ ಅವರು ತಾಲೂಕು ಬೋರ್ಡ್ ಗ್ರಂಥಾಲಯಕ್ಕೂ, ಮಿತ್ರ ಮಂಡಳಿಯ ಗ್ರಂಥ ಭಂಡಾರಕ್ಕೂ ಲಗ್ಗೆಯಿಡಬೇಕಾಯಿತು. ಈ ಓದುವ ಹುಚ್ಚು ಅವರ ಕೊನೆಯ ತನಕ ಅವರನ್ನು ಬಿಟ್ಟಿರಲಿಲ್ಲ. ಅವರ ಸ್ವಂತ ಗ್ರಂಥ ಭಂಡಾರದಲ್ಲಿ ಐದು ಸಾವಿರಕ್ಕೂ ಮಿಕ್ಕು ಪುಸ್ತಕಗಳಿದ್ದವು!

ಬೋರ್ಡ್ ಹೈಸ್ಕೂಲಿನ ಹೊಸ ವಾತಾವರಣ ಅನಂತರ ವ್ಯಕ್ತಿತ್ವಕ್ಕೆ ಹೊಸ ಮೆರುಗನ್ನು ನೀಡುವುದಕ್ಕೆ ಸಹಾಯಕವಾಯಿತು. ಆಟ ವಿನೋದಗಳಲ್ಲಿ ವಿನಿಯೋಗವಾಗುತ್ತಿದ್ದ ಅವರ ಸಮಯ, ಈಗ ಪೂರ್ಣ ಪ್ರಮಾಣದಲ್ಲಿ ಅಧ್ಯಯನಕ್ಕೆ ಮುಡಿಪಾಗತೊಡಗಿತು. ಪಾಠ ಪ್ರವಚನಗಳಲ್ಲಿ ಅನಂತ್ ತನ್ನದೇ ರೀತಿಯ ಪ್ರತಿಭೆಯನ್ನು ಬೀರತೊಡಗಿದರು. ಗುಣನಡತೆಯಲ್ಲೂ ಅವರದ್ದು ವಿಶೇಷ ನಡವಳಿಕೆಯಾಯಿತು.

ಚರ್ಚಾಕೂಟದ ಕಾರ್ಯದರ್ಶಿಯಾಗಿ ಆಯ್ಕೆಯಾದುದರಿಂದ ಪ್ರತಿವಾರವೂ ಭಾಷಣಕ್ಕೆ ಸಿದ್ಧಪಡಿಸುವುದು, ಭಾಷಣ ಮಾಡುವಂಥದ್ದಕ್ಕೆ ತೊಡಗಿಸಿಕೊಳ್ಳಬೇಕಾದ ಪ್ರಮೇಯ ಒದಗಿ ಬಂತು. ವಿಸ್ತಾರವಾದ ಓದು, ಭಾಷೆಯ ಮೇಲಿನ ಪ್ರಭುತ್ವ, ಕ್ರಮಬದ್ಧವಾದ ಸಿದ್ಧತೆ ಇವುಗಳಿಂದಾಗಿ ಅನಂತರಿಗೆ ಭಾಷಣ ಕಲೆಯಲ್ಲಿ ಅಪರಿಮಿತ ಪರಿಣತಿ ಒದಗಿ ಬಂದಿತ್ತು. ಮುಂದೆ ನಾಡಿನ ಪ್ರಖ್ಯಾತ ಭಾಷಣಕಾರರಾಗಿ, ಪ್ರತಿಭಾವಂತ ಸಂಸದೀಯ ಪಟುವಾಗಿ ಪ್ರಸಿದ್ಧರಾಗಲು ತಕ್ಕ ತಯಾರಿ, ತರಬೇತಿ ಅಂದಿನ ದಿನಗಳಲ್ಲೇ ನಡೆದಂತಾಗಿತ್ತು ಎನ್ನಬಹುದು. ಇದೇ ಕಾಲಕ್ಕೆ ಬರವಣಿಗೆಯ ಕಲೆಯನ್ನೂ ಅವರು ಕರಗತಮಾಡಿಕೊಂಡರು. 1935ರಲ್ಲಿ ಸರಕಾರ ಏರ್ಪಡಿಸಿದ 'ಕ್ಷಯರೋಗ ನಿರ್ಮೂಲನ' ಎಂಬ ವಿಷಯದ ಮೇಲಿನ ಪ್ರಬಂಧ ಸ್ಪರ್ಧೆಯಲ್ಲಿ ಅವರಿಗೆ ಪ್ರಥಮ ಬಹುಮಾನ ಲಭಿಸಿತು.

ಅನಂತ್ ತಮ್ಮ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು 1938ರಲ್ಲೇ ಮುಗಿಸಬೇಕಾದಿದ್ದಿತು. ಆದರೆ ದುರ್ದೈವದಿಂದ ಆ ದಿನಗಳಲ್ಲಿ ಅವರು ಬೇನೆಬಿದ್ದರು. ಅವರ ಚಿಕ್ಕತಂದೆ ಡಾ.ಮಾಧವ ಪೈಗಳು ಅವರಿಗೆ ವಿಶ್ರಾಂತಿ ಪಡೆಯುವಂತೆ ಸಲಹೆ ನೀಡಿದರು. ಪರೀಕ್ಷೆಯ ಬಳಿಕ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡ್‌ಗೆ ಪ್ರಯಾಣ ಬೆಳೆಸುವ ಅವರ ಕನಸು ಕನಸಾಗಿಯೇ ಉಳಿಯಿತು.

ಅನಂತ್ ಉಡುಪಿಯ ಬೋರ್ಡ್ ಶಾಲೆಗೆ ಸೇರುವ ಕಾಲಕ್ಕೆ ಮುಖ್ಯೋಪಾಧ್ಯಾಯರಾಗಿ ರಾಕಿ ಫೆರ್ನಾಂಡಿಸ್ ಎಂಬ ಪ್ರಸಿದ್ಧ ಶಿಕ್ಷಕರಿದ್ದರು. ಅವರು ಇಂಗ್ಲಿಷ್‌ನಲ್ಲಿ ದೊಡ್ಡ ವಿದ್ವಾಂಸರಾಗಿದ್ದರು. ಶಿಸ್ತಿನ ಸಿಪಾಯಿ ಎಂದು ಹೆಸರಾಗಿದ್ದರು. ಪ್ರತಿಭಾವಂತ ವಿದ್ಯಾರ್ಥಿಗಳನ್ನು ಕಂಡರೆ ರಾಕಿ ಫೆರ್ನಾಂಡಿಸ್ ಅವರಿಗೆ ಅಪಾರ ಪ್ರೇಮ. ಅನಂತ್ ಅವರ ಅಚ್ಚುಮೆಚ್ಚಿನ ವಿದ್ಯಾರ್ಥಿ. ತಮ್ಮ ವಿದ್ಯಾರ್ಥಿಗೆ ತಾವು ನೀಡಿದ ಅರ್ಹತಾ ಪತ್ರವೇ ಇದಕ್ಕೆ ಸಾಕ್ಷಿ.

## ಅರ್ಹತಾ ಪತ್ರ

**"ಟಿ.ಅನಂತ ಪೈ ಎಂಬ ವಿದ್ಯಾರ್ಥಿಯನ್ನು 1938ರ ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷೆಗೆ ಬಹಳ ನಿರೀಕ್ಷೆಗಳೊಂದಿಗೆ ಕಳುಹಿಸಲಾಗಿತ್ತು. ಯಾಕೆಂದರೆ ಆತ ಇಡೀ ಶಾಲೆಯಲ್ಲಿ ಪ್ರಥಮ ಸ್ಥಾನದಲ್ಲಿದ್ದ. ಆದರೆ ಪರೀಕ್ಷೆಯ ಸಮಯದಲ್ಲಿ ಆತ ವಿಪರೀತ ಅಸೌಖ್ಯದಿಂದ ನರಳುತಿದ್ದುದರಿಂದ ಪರೀಕ್ಷೆಗೆ ಹಾಜರಾಗಲು ಸಾಧ್ಯವಾಗಲಿಲ್ಲ.**

**"ಈ ವಿದ್ಯಾರ್ಥಿ ದೇವರೇ ಆರಿಸಿದ ಹುಡುಗ. ಅಷ್ಟು ಸರಳ, ಅಷ್ಟು ವಿನಮ್ರ, ಅಷ್ಟು ವಿಧೇಯ. ಆದರೂ ಈತನಲ್ಲಿ ಅಪಾರ ಧೈರ್ಯವಿದೆ, ಸ್ಥೈರ್ಯವಿದೆ, ಕರ್ತೃತ್ವ ಶಕ್ತಿಯಿದೆ. ದೈವಿಕತೆಯ ಕಿಡಿಯಿದೆ. ಇವನು ಅತ್ಯಂತ ಸುಸಂಸ್ಕೃತ, ಪವಿತ್ರಾತ್ಮ. ಸ್ಪಷ್ಟವಾದ ದೃಷ್ಟಿ, ಪ್ರಾಮಾಣಿಕ ಹಾಗೂ ಪರಿಶ್ರಮವಿರುವ ವಿದ್ಯಾರ್ಥಿ. ಈ ನನ್ನ ಆದರ್ಶ ವಿದ್ಯಾರ್ಥಿ ಅದೃಷ್ಟದ ಕುವರನಾಗಲಿ,**

**"ಈ ಹುಡುಗ ಮುಂದೆ ತನ್ನ ಉನ್ನತ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ತೆರಳುವ ಸನ್ನಾಹದಲ್ಲಿದ್ದಾನೆ ಎಂದು ನಮ್ಮ ಅರಿವಿಗೆ ಬಂದಿರುತ್ತದೆ. ಈ ಶಾಲೆಯ ಮುಖ್ಯೋಪಾಧ್ಯಾಯನಾಗಿದ್ದುಕೊಂಡು ನಮ್ಮ ವಿದ್ಯಾರ್ಥಿಗಳು ವಿಶೇಷ ಅಭಿಲಾಷೆಗಳನ್ನು ಹೊಂದಿರಬೇಕೆಂದು ನಾವು ಬಯಸುತ್ತೇವೆ. ನಮ್ಮ ಶಾಲೆಯ ಈ ಅಪೂರ್ವ ರತ್ನ ಮುಂದೊಂದು ದಿನ ತನ್ನ ಅದ್ಭುತ ಸಾಧನೆಗಳಿಂದ ಮಾತೃ ಶಾಲೆಗೆ ಕೀರ್ತಿ ತರುವಂತಾಗಲಿ ಎಂಬುದೇ ನನ್ನ ಹಾರೈಕೆ."**

ಇದೊಂದು ಅಪೂರ್ವ ಅರ್ಹತಾ ಪತ್ರ. ಅದೇ ರೀತಿ ಅನಂತ್ ಕೂಡಾ ಅಪೂರ್ವ ವಿದ್ಯಾರ್ಥಿಯಾಗಿ ಬೆಳೆದರು. ಫೆರ್ನಾಂಡಿಸ್ ಅವರು ಅನಂತ್‌ನ ಗುಣಗಳನ್ನು ಅಷ್ಟು ಸೂಕ್ಷ್ಮವಾಗಿ ಗುರುತಿಸಿ ಪ್ರೋತ್ಸಾಹಿಸಿ ಅವರ ವ್ಯಕ್ತಿತ್ವಕ್ಕೆ ಹೊಸ ಆಯಾಮ ನೀಡುವಲ್ಲಿ ಸಫಲರಾದರು. ಈ ಗುರು ಶಿಷ್ಯ ಸಂಬಂಧ ಅಪೂರ್ವವೆನಿಸಿತು. ಗುರುವಿನ ಭವಿಷ್ಯವಾಣಿ ಮುಂದೆ ಅಕ್ಷರಶಃ ಸತ್ಯವಾಗಿ ಪರಿಣಮಿಸಿದ್ದು ಇತಿಹಾಸ.

ಅನಂತ್ ತನ್ನ ಪ್ರೀತಿಯ ಮುಖ್ಯೋಪಾಧ್ಯಾಯರನ್ನು ಎಂದಿಗೂ ಮರೆಯಲಿಲ್ಲ. ಒಂದು ಚುನಾವಣೆಗೆ ತಮ್ಮ ಗುರುಗಳ ಮಗನಾದ ಆಸ್ಕರ್ ಅವರನ್ನೇ ತಮ್ಮ ಚುನಾವಣಾ ವ್ಯವಸ್ಥಾಪಕನನ್ನಾಗಿ ನಿಯುಕ್ತಿಗೊಳಿಸಿದರು. ವಿಧಿಯ ವಿಪರ್ಯಾಸವೆಂದರೆ ಮುಂದೆ 1980ರ ಲೋಕಸಭಾ ಚುನಾವಣೆಯಲ್ಲಿ

ತಮ್ಮ ಗುರುಗಳ ಮಗನ ಎದುರೇ ಅವರು ಚುನಾವಣೆಯಲ್ಲಿ ಸೋತುಹೋದರು. ಎಂದೂ ಸೋಲರಿಯದ ಪೈ ಅವರಿಗೆ ಅದೇ ಬದುಕಿನ ಕೊನೆಯ ಸೋಲಾದುದು ದುರಂತದ ವಿಷಯವೆನ್ನಬೇಕು.

## ಮುಂಬಯಿಗೆ ಪಯಣ



ಯುವ ಅನಂತ್

1938ರಲ್ಲಿ ತಮ್ಮ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಉತ್ತಮ ದರ್ಜೆಯಲ್ಲಿ ಮುಗಿಸಿದ ಅನಂತ್, ಮುಂದಿನ ವಿದ್ಯಾಭ್ಯಾಸಕ್ಕೆ ಇಂಗ್ಲೆಂಡ್‌ಗೆ ತೆರಳುವ ಆಕಾಂಕ್ಷೆ ಹೊಂದಿದ್ದರು. ತಂದೆ ಉಪೇಂದ್ರ ಪೈಗಳೂ ಆ ವಿಚಾರವಾಗಿಯೇ ಯೋಚಿಸುತ್ತಿದ್ದರು. ಪ್ರಾಯಶಃ ಇಂಗ್ಲೆಂಡಿಗೆ ತೆರಳಿದ್ದರೆ ಅನಂತ್‌ರ ಬದುಕಿನ ದಿಕ್ಕೇ ಬದಲಾಗುತ್ತಿತ್ತೇನೋ! ಆದರೆ ಅದೃಷ್ಟದ ಆಟ ಬೇರೆಯೇ ಆಗಿತ್ತು. ಆ ದಿನಗಳಲ್ಲಿ ಎರಡನೇ ಮಹಾಯುದ್ಧದ ಕಾರಣದಿಂದಾಗಿ ಯುರೋಪ್ ಖಂಡದಲ್ಲಿ ಬದುಕು ನಿರಾಳವಾಗಿರಲಿಲ್ಲ. ಅಂತಹ ಸನ್ನಿವೇಶದಲ್ಲಿ ಇಂಗ್ಲೆಂಡಿಗೆ ತೆರಳುವುದು ಉಚಿತವಲ್ಲವೆಂಬ ಅಭಿಪ್ರಾಯವನ್ನು ಅವರ ಹೆತ್ತವರೂ, ಬಂಧುಗಳೂ ತಳೆದರು.

ಮುಂಬಯಿಯ ಸಿಡೆನ್‌ಹ್ಯಾಂ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸುವುದು ಅನಂತ್‌ಗೆ ಅನಿವಾರ್ಯವಾಯಿತು. ಪೈ ಬಂಧುಗಳ ಮುಂದಾಳ್ತನದಲ್ಲಿ ಮುಂದುವರಿಯಬೇಕಾಗಿದ್ದ ಸಿಂಡಿಕೇಟ್ ಬ್ಯಾಂಕನ್ನೇ ಉದ್ದೇಶವಾಗಿಟ್ಟುಕೊಂಡು, ಅನಂತ್ ಮುಂಬಯಿಯ ಸಿಡೆನ್ ಹ್ಯಾಂ ಕಾಲೇಜಿನಲ್ಲಿ ಬಿ.ಕಾಂ. ವಿಷಯವನ್ನು ಐಚ್ಛಿಕವನ್ನಾಗಿ ಆರಿಸಿಕೊಂಡರು. ಮೊದಲಿಗೆ ಒಂದೆರಡು ತಿಂಗಳು ಮೋಡರ್ನ್ ಹಿಂದು ಹೋಟೇಲಿನಲ್ಲಿ ವಾಸ್ತವ್ಯ ಹೂಡಿದ ಅನಂತ್, ಅಲ್ಲಿನ ಪರಿಸರಕ್ಕೆ ಒಗ್ಗದೆ, ತಮ್ಮ ಬಳಗಕ್ಕೇ ಸೇರಿದ ಡಾ.ಎ.ವಿ.ಬಾಳಿಗಾರ ಮರೀನ್ ಡ್ರೈವ್‌ನ ಮನೆಯಲ್ಲಿ ತಂಗಿದರು.

ಮುಂಬಯಿ ಮಹಾನಗರದ ಅತ್ಯಂತ ಪ್ರಭಾವಶಾಲಿ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದ ಡಾ.ಬಾಳಿಗಾ ಅವರ ಗರಡಿಯಲ್ಲಿ ಅನಂತ್ ವಿಶೇಷ

ಅನುಭವಗಳನ್ನು ಪಡೆಯುವಂತಾಯಿತು. ಮಕ್ಕಳಿಲ್ಲದ ಬಾಳಿಗಾ ಅವರದ್ದು ವಿಶಾಲವಾದ ಮನೆ. ಆ ಮಹಾ ನಗರದ ಮುಕ್ತ ವಾತಾವರಣದಲ್ಲಿ ಡಾ.ಬಾಳಿಗಾರ ಪ್ರೀತಿಯ ನೆರಳಿನಲ್ಲಿ ಅನಂತರ ಸುಪ್ತ ಪ್ರತಿಭೆಗಳಿಗೆ ವಿಶೇಷವಾದ ರಹದಾರಿ ದೊರೆತಂತಾಯಿತು. ನಗರದ ಶ್ರೀಮಂತರು, ಪ್ರತಿಷ್ಠಿತರೆಲ್ಲ ಡಾ.ಬಾಳಿಗಾ ಅವರ ಮನೆಗೆ ಯಾವಾಗಲೂ ಬರುತ್ತಲಿದ್ದರು. ಇದರಿಂದಾಗಿ ಅನೇಕ ಪ್ರತಿಷ್ಠಿತ ವ್ಯಕ್ತಿಗಳ ಸಂಪರ್ಕ ಹಾಗೂ ಅವರ ಜೀವನ ಶೈಲಿಗಳನ್ನು ನಿಕಟವಾಗಿ ಕಂಡುಕೊಳ್ಳುವ ಅವಕಾಶ ಅನಂತರಿಗೆ ಲಭ್ಯವಾಯಿತು.

ಅನಂತ್ ಅವರ ವ್ಯಕ್ತಿತ್ವದ ಮೇಲೆ ವಿಶೇಷ ಪರಿಣಾಮ ಬೀರಿದವರಲ್ಲಿ ಡಾ.ಬಾಳಿಗಾ ಅವರು ಪ್ರಮುಖರು. ಬಾಳಿಗಾ ಅವರು ತಮ್ಮ ಎಳೆಯ ವಯಸ್ಸಿನಲ್ಲಿ ಉಡುಪಿಯಲ್ಲಿದ್ದಾಗ, ಮಹಾತ್ಮಾ ಗಾಂಧೀಜಿಯವರ ಕರೆಗೆ ಓಗೊಟ್ಟು ಬ್ರಿಟಿಷ್ ಪೋಷಿತ ಶಾಲೆಯ ಕಲಿಕೆಗೆ ತಿಲಾಂಜಲಿಯಿತ್ತು ಖಾದಿ ಪ್ರಚಾರಕ್ಕೆ ತಮ್ಮನ್ನು ತೊಡಗಿಸಿಕೊಂಡವರು. ಉಡುಪಿ ತಾಲೂಕಿನ ಹಳ್ಳಿಗಳಲ್ಲಿ ಅವರು ಖಾದಿ ಉತ್ಪನ್ನಗಳನ್ನು ತಲೆಯ ಮೇಲೆ ಹೊತ್ತುಕೊಂಡು ತಿರುಗಾಡಿದವರು.



ಡಾ ಎ.ಎ. ಬಾಳಿಗಾ

ಅಂತಹ ದೇಶಭಕ್ತ ಬಾಳಿಗಾರ ವ್ಯಕ್ತಿತ್ವ ಅನಂತ್ ಅವರ ಮೇಲೆ ಪೂರಕವಾದ ಪರಿಣಾಮವನ್ನು ಬೀರಿದ್ದಲ್ಲದೆ, ಸ್ವಂತ ವ್ಯಕ್ತಿತ್ವ ವಿಕಸನಕ್ಕೆ ಇಂಬುಕೊಟ್ಟಿತು. ಬಾಳಿಗಾರ ಉದಾತ್ತ ಯೋಚನೆಗಳು, ಅನನ್ಯ ದೇಶ ಪ್ರೇಮ, ಕಾರ್ಯಕ್ಷಮತೆ, ಉತ್ತುಂಗ ವಿಚಾರಗಳು, ಉತ್ತಮ ಅಭಿರುಚಿ, ಉಡುಗೆತೊಡುಗೆಗಳ ಬಗೆಗಿನ ಅಚ್ಚುಕಟ್ಟುತನ, ಎಲ್ಲಾ ವರ್ಗದ ಜನರೊಂದಿಗೆ ಬೆರೆತು ನಡೆಸುವ ಸಹಬಾಳ್ವೆಯ ಪಾಠಗಳು ಅನಂತರ ಬದುಕಿನುದ್ದಕ್ಕೂ ಆದರ್ಶಮಯವಾಗಿ ಪರಿಣಮಿಸಿತು.

ಮುಂಬಯಿಯಲ್ಲಿ ಕಳೆದ ನಾಲ್ಕು ವರ್ಷಗಳ ಅವಧಿಯಲ್ಲಿ ಅನಂತ್ ತಮ್ಮ ವ್ಯಕ್ತಿತ್ವವನ್ನು ಸರ್ವಾಂಗ ಸುಂದರವಾಗಿ ರೂಪಿಸಿಕೊಳ್ಳುವುದರಲ್ಲಿ ಯಶಸ್ವಿಯಾದರು. ಕಾಲೇಜಿನ ಪ್ರತಿಭಾವಂತ ವಿದ್ಯಾರ್ಥಿ ಎಂದು ಗುರುತಿಸಲ್ಪಟ್ಟರು. ಅಂಕೆ ಸಂಖ್ಯೆಗಳನ್ನು ನೆನಪಿಟ್ಟು ಕೊಳ್ಳುವುದರಲ್ಲಿ ಅವರು ನಿಸ್ಸೀಮರಾಗಿದ್ದರು.

ಲೇಖನ ಬರೆಯುವುದರಲ್ಲೂ, ಭಾಷಣ ಮಾಡುವುದರಲ್ಲೂ ಎತ್ತಿದ ಕೈಯೆನಿಸಿದರು. ಅಂದಿನ ಅವರ ಆದರ್ಶ ವ್ಯಕ್ತಿ ಎಂದರೆ ಸ್ವಾಮಿ ವಿವೇಕಾನಂದರು.

## ದಿನಚರಿಯ ಪುಟಗಳಿಂದ

ಇದೇ ಕಾಲಕ್ಕೆ ದಿನಚರಿಯನ್ನು ಬರೆದಿಡುವ ಹವ್ಯಾಸ ಅವರನ್ನು ಕಾಡಿತು. ದಿನಚರಿಯಲ್ಲಿ ಪ್ರಮುಖವಾದ ವಿಷಯಗಳೆಂದರೆ, ಸಮಯ ಹಾಳುಮಾಡಬಾರದು, ಇನ್ನೊಬ್ಬರನ್ನು ಟೀಕೆ ಮಾಡಬಾರದು, ರಚನಾತ್ಮಕವಾಗಿ ಯಾವಾಗಲೂ ಯೋಚಿಸಬೇಕು, ಇನ್ನಷ್ಟು ಓದಿನ ಕಡೆಗೆ ಲಕ್ಷ್ಯವಿರಿಸಬೇಕು– ಇತ್ಯಾದಿ. ದೇಶಕ್ಕಾಗಿ ಏನಾದರೂ ತನ್ನ ಕೈಲಾದ ಸೇವೆಯನ್ನು ಮಾಡಬೇಕು ಎಂಬ ಸಂಕಲ್ಪ ಕೂಡಾ ತಮ್ಮ ದಿನಚರಿಯಲ್ಲಿ ಅವರು ದಾಖಲಿಸಿದ್ದರು. ದಿನಚರಿಯ ಪ್ರತಿಯೊಂದು ಉಲ್ಲೇಖದ ಕೊನೆಯಲ್ಲಿ ತಾನು ಆ ವಿಚಾರಕ್ಕೆ ಬದ್ಧನಾಗಿದ್ದೇನೆ ಎನ್ನುವ ರೀತಿಯಲ್ಲಿ ತಮ್ಮ ಹಸ್ತಾಕ್ಷರವನ್ನು ನಮೂದಿಸುತ್ತಿದ್ದರು.

**'ದಿ ಪೈಸ್ ಆಫ್ ಮಣಿಪಾಲ್'** ಎಂಬ ಹೊತ್ತಗೆಯನ್ನು ಬರೆದ ಅಮೆರಿಕಾದ ಸಮಾಜ ಶಾಸ್ತ್ರದ ವಿಜ್ಞಾನಿ ಸೆಲ್ಡನ್ ಮೆನ್‌ಫೀ, ಅನಂತ್ ಅವರ ದಿನಚರಿಯನ್ನು ಉಲ್ಲೇಖಿಸಿದ್ದು ಹೀಗೆ....(ಡಾ.ಎಂ.ವಿ.ಕಾಮತ್ ಅವರ 'ದಿ ಇನ್ನೊವೆಟಿವ್ ಬ್ಯಾಂಕರ್' ಪುಸ್ತಕದಿಂದ ಆಯ್ದ ಭಾಗಗಳು)

"ಇನ್ನು ಮುಂದೆ ನಾನು ನನ್ನ ಸಮಯವನ್ನು ನನ್ನ ಅಧ್ಯಯನಕ್ಕೇ ಮೀಸಲಾಗಿಡಬೇಕು. ಇನ್ನಿತರ ಚಟುವಟಿಕೆಗಳಿಗೆ ನನ್ನಲ್ಲಿ ಸಾಕಷ್ಟು ಚೈತನ್ಯವಿಲ್ಲ ಎಂಬುದನ್ನು ನಾನು ನೆನಪಿನಲ್ಲಿಡಬೇಕಾದುದು ಅನಿವಾರ್ಯ. ಆದ್ದರಿಂದ ಇನ್ನೊಬ್ಬರನ್ನು ವಿಮರ್ಶಿಸುವುದನ್ನು ನಾನು ಬಿಟ್ಟುಬಿಡಬೇಕು. ವ್ಯರ್ಥ ಚರ್ಚೆ ಮತ್ತು ಲೋಕಾಭಿರಾಮದ ಮಾತುಗಳು ಅನವಶ್ಯ. ಒಂದೊಂದು ಔನ್ಸ್ ಶಕ್ತಿಯನ್ನೂ ನಾನು ಕಾಪಾಡಿಕೊಂಡು, ಪ್ರತಿ ನಿಮಿಷವನ್ನು ಸದುಪಯೋಗ ಮಾಡಿಕೊಳ್ಳಬೇಕು."

ಇನ್ನೊಂದು ಸಂದರ್ಭ–

"ನಾಳೆ ನಾನು ಗಮನಿಸಬೇಕಾದ ವಿಷಯಗಳು... ಒಂದೇ ಒಂದು ಅನುಪಯುಕ್ತ ಶಬ್ದವನ್ನು ನಾನು ಉಚ್ಚರಿಸಬಾರದು. ಯಾವುದೇ ಅನುಪಯುಕ್ತ



ಕೆಲಸವನ್ನು ನಾನು ಮಾಡಬಾರದು.... ಇದರಿಂದ ನನ್ನ ಏಕಾಗ್ರತೆ ವೃದ್ಧಿಸುತ್ತದೆ."

ಇನ್ನೊಂದು ದಿವಸ:

"ಡಿ.ಎಫ್.ಕರಕ (ಪ್ರಖ್ಯಾತ ಅಂಕಣಕಾರರು, ಮುಂದೆ 'ಕರೆಂಟ್' ಪತ್ರಿಕೆಯ ಸಂಪಾದಕರು) ಅವರ 'ಔಟ್ ಆಫ್ ಡಸ್ಟ್', ನನ್ನ ಯೋಚನೆಗಳಿಗೆ ಬಹಳಷ್ಟು ಆಹಾರವನ್ನು ಒದಗಿಸಿದೆ. ಗಾಂಧೀಜಿಯವರ 'ನಾಗರಿಕ ಅಸಹಕಾರ ಚಳವಳಿ'ಯ ಸಂದರ್ಭದಲ್ಲಿ ಪೊಲೀಸರು ಎಸಗಿದ ಕ್ರೂರ ಕೃತ್ಯಗಳು ನನ್ನ ಮನಸ್ಸಿನ ಮೇಲೆ ಆಘಾತಕರ ಪರಿಣಾಮವನ್ನು ಬೀರಿದೆ. ಮಾನವ ಜನಾಂಗಕ್ಕೆ ಅಹಿಂಸಾ ಮಾರ್ಗವೇ ಅತ್ಯುತ್ಕೃಷ್ಟ ವಿಧಾನವೆಂದು ನನಗೆ ಮನವರಿಕೆಯಾಗಿದೆ. ಇದನ್ನು ಜಗತ್ತು ಒಂದಲ್ಲ ಒಂದು ದಿನ ಅರಿತುಕೊಳ್ಳಬಹುದು."

ಅಹಿಂಸಾ ಮಾರ್ಗದ ಬಗೆಗಿನ ಅವರ ನಿಲುವು ಮತ್ತು ಒಲವು ಅನುಭವಜನ್ಯವಾಗಿದ್ದು, ಅದು ಯಾವುದೇ ಓದಿನ ಪ್ರೇರಣೆಯಿಂದ ಉದ್ದೀಪನಗೊಂಡದ್ದಲ್ಲ ಎಂಬುದಕ್ಕೆ ಕಾರಣಗಳಿದ್ದವು. ಎರಡನೇ ಅಸಹಕಾರ ಚಳುವಳಿಯ ಸಂದರ್ಭ ಉಡುಪಿಯಲ್ಲಿ ಘಟಿಸಿದ ಘಟನೆಗಳು ಅವರ ಎಳೆಯ ಮನಸ್ಸಿನ ಮೇಲೆ ಅಚ್ಚೊತ್ತಿದ್ದವು. ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಸತ್ಯಾಗ್ರಹದಲ್ಲಿ ತೊಡಗಿದ ಸ್ವಯಂ ಸೇವಕರ ಮೇಲೆ ನಡೆದ ದೌರ್ಜನ್ಯವನ್ನು ಅವರು ಕಣ್ಣಾರೆ ಕಂಡಿದ್ದರು. ಸ್ವಯಂಸೇವಕರನ್ನು ಎಷ್ಟು ತೀವ್ರವಾಗಿ ಥಳಿಸಿದ್ದರು ಅಂದರೆ, ಕೆಲವರ ರಕ್ತಸಿಕ್ತವಾದ ಮೈಗಂಟಿದ ಕುರ್ತಾ ಮತ್ತು ಪೈಜಾಮುಗಳನ್ನು ಕತ್ತರಿ ಉಪಯೋಗಿಸಿ ಬಿಡಿಸಿಕೊಳ್ಳಬೇಕಾದ ಪ್ರಸಂಗ ಒದಗಿತ್ತು. ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಕೆಲವು ಸ್ವಯಂಸೇವಕರು ಮದ್ಯದಂಗಡಿಗಳ ಮುಂದೆ ಸತ್ಯಾಗ್ರಹವನ್ನು ಎಸಗಿದ್ದನ್ನು ಅವರು ಗಮನಿಸಿದ್ದರು. (ಬಹುಶಃ ಇದೇ ನಿಲುವು ಅವರಿಗೆ ಮುಂದೆ, ಮದ್ರಾಸು ವಿಧಾನ ಸಭೆಯ ಚರ್ಚೆಗಳಲ್ಲಿ ಭಾಗವಹಿಸಿದ ಸಂದರ್ಭಗಳಲ್ಲಿ, ಪ್ರತಿಕೂಲ ಪರಿಸ್ಥಿತಿಯಲ್ಲೂ, ಮದ್ಯಪಾನ ನಿಷೇಧವನ್ನು ಎತ್ತಿಹಿಡಿಯುವುದಕ್ಕೆ ಪ್ರೇರಣೆ ನೀಡಿರಬೇಕೆಂದು ಭಾವಿಸಬಹುದು.)

ಅಂದಿನ ದಿನಗಳಲ್ಲಿ ಮುಕುಂದ ನಿವಾಸ ಸ್ವಯಂ ಸೇವಕರ ತಂಗುದಾಣವಾಗಿತ್ತು. ಯುವ ಜನಾಂಗದವರಲ್ಲಿ ದೇಶ ಪ್ರೇಮದ ಕಿಡಿ ಹೊತ್ತಿ ಉರಿಯುವುದನ್ನು ಅನಂತ್ ತನ್ನ ಎಳೆಯ ಪ್ರಾಯದಲ್ಲೇ ಕಣ್ಣಾರೆ ಕಾಣುವ ಅವಕಾಶ ಮುಕುಂದ ನಿವಾಸದಲ್ಲಿ ಉಂಟಾಗಿತ್ತು. ಕಾಸರಗೋಡಿನ ಚೆರಡಪ್ಪ ನಾಯಕ ಎಂಬ ಸ್ವಯಂಸೇವಕ ಸತ್ಯಾಗ್ರಹದಲ್ಲಿ ಭಾಗವಹಿಸಿದ ಸಂದರ್ಭದಲ್ಲಿ ಆತನನ್ನು ಹಿಗ್ಗಾಮುಗ್ಗಿಯಾಗಿ ಥಳಿಸಿದ ಪರಿಣಾಮವಾಗಿ, ಆತನ ಎರಡೂ ಕಾಲುಗಳನ್ನು ತುಂಡರಿಸಬೇಕಾದ ಪರಿಸ್ಥಿತಿ ಒದಗಿಬಂದುದನ್ನು ಅನಂತ್ ಕೇಳಿದ್ದರು. 1,262 ಮಂದಿ ಗಂಡಸರು ಮತ್ತು 21 ಮಂದಿ ಹೆಂಗಸರು ಅಂದಿನ ದಕ್ಷಿಣ ಕನ್ನಡದಂಥ ಸಣ್ಣ ಊರಲ್ಲಿ ಸತ್ಯಾಗ್ರಹಕ್ಕಾಗಿ ತಮ್ಮನ್ನು ಅರ್ಪಿಸಿಕೊಂಡುದ್ದನ್ನು ಅನಂತ್ ಬಲ್ಲರು. ಯಾವ ತ್ಯಾಗಕ್ಕೂ ಸಿದ್ಧರೆನ್ನುವ ಜನರ ಜೀವನ ಮೌಲ್ಯ ಎಳೆಯ ಅನಂತರ ಮನಸ್ಸಿನ ಮೇಲೆ ಅಪಾರ ಪರಿಣಾಮ ಬೀರಿದ್ದನ್ನು ನಾವು ಗಮನಿಸಬೇಕಾದ ಅಂಶ.



ದಿನಚರಿಯ ಇನ್ನೊಂದು ದಾಖಲೆ:

"......ಈ ಕ್ಷಣದಿಂದ ನನ್ನ ಸಂಕಲ್ಪವೆಂದರೆ, ಮಾಡಿದ ತಪ್ಪುಗಳನ್ನೇ ಮಾಡದಂತೆ ಎಚ್ಚರ ವಹಿಸಬೇಕು. ಸ್ವಲ್ಪವೇ ಮಾತಾಡಬೇಕು, ಆದರೆ ಆ ಮಾತುಗಳು ಸವಿಮಾತುಗಳಾಗಿರಬೇಕು. ಈ ಕ್ಷಣದಿಂದ ನನ್ನ ಬದುಕಿನ ಧ್ಯೇಯ, ಪ್ರತಿಯೊಂದು ನಿಮಿಷವನ್ನು ಸಮುಪಯೋಗ ಪಡಿಸುವ ದಿಶೆಯಲ್ಲಿ, ಪ್ರತಿಯೊಂದು ಔನ್ಸ್ ಚೈತನ್ಯವನ್ನು ಉಪಯುಕ್ತ ರೀತಿಯಲ್ಲಿ ವಿನಿಯೋಗಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿರಬೇಕು. ಬಹುಶಃ ಈ ಮನಸ್ಥಿತಿ ನಾನು ನನ್ನ ಬದುಕಿನಲ್ಲಿ ಹಾಕಿಕೊಂಡಿರುವ ಗುರಿ ಮತ್ತು ಧ್ಯೇಯದತ್ತ ನನ್ನನ್ನು ಕೊಂಡೊಯ್ಯಬಹುದೆಂಬ ಭರವಸೆ ನನಗಿದೆ. ಇನ್ನು ಮುಂದೆ ನಾನು ಇತರರ ಬಗೆಗೆ ಕೆಟ್ಟ ಮಾತುಗಳನ್ನು ಆಡಲಾರೆ ಮತ್ತು ಅವರನ್ನು ವಿನಾ ಕಾರಣ ನಿಂದಿಸಲಾರೆ. ಆದರೆ, ನನ್ನ ಹಕ್ಕುಗಳನ್ನು ನಾನು ಸ್ಥಾಪಿಸಿಕೊಳ್ಳುವುದರಲ್ಲಿ

ಹಿಂಜರಿಯಬಾರದು. ಯಾವುದೇ ತಪ್ಪು ನಡವಳಿಕೆಯನ್ನು ನಾನು ಸಹಿಸಿಕೊಳ್ಳದೆ ಅದನ್ನು ಖಂಡಿಸುವಂತಿರಬೇಕು. ಅದನ್ನು ಯಾವುದೇ ಪೂರ್ವಾಗ್ರಹವಿಲ್ಲದೆ ಅಹಿಂಸಾತ್ಮಕವಾಗಿ ನಾನು ಎದುರಿಸತಕ್ಕದ್ದು."

ಮತ್ತೊಂದು ದಾಖಲೆ:

"..ನಾಳೆಯಿಂದ ನಾನು ಬೇರಾವುದೇ ಚರ್ಚಾಸ್ಪದ ವಿಷಯಗಳಲ್ಲಿ ಮನಸ್ಸನ್ನು ತೊಡಗಿಸಿಕೊಳ್ಳದೆ ಸಂಪೂರ್ಣವಾಗಿ ಓದಿನಲ್ಲೇ ತನ್ಮಯನಾಗಬೇಕು. ನನ್ನ ಶಕ್ತಿಯನ್ನು ಅನ್ಯ ರೀತಿಯಲ್ಲಿ ವಿನಿಯೋಗಿಸುವುದು ಅನಿವಾರ್ಯವೆಂದಾದರೆ, ಅದನ್ನು ನಾನು ಮಾಡಿಯೇ ತೀರುತ್ತೇನೆ. ಕೆಲಸಗಳನ್ನು ತೀವ್ರಗತಿಯಿಂದ ಮಾಡಬೇಕಲ್ಲದೆ, ಗಣಿತದ ವಿಷಯದ ಕಡೆಗೆ ವಿಶೇಷ ಗಮನ ಕೊಡಬೇಕು. 'ನಿನ್ನ ಕಿವಿ ಕಣ್ಣುಗಳನ್ನು ಜಗತ್ತಿಗೆ ತೆರೆದಿಟ್ಟು ಪ್ರತಿಯೊಂದರಿಂದ ಮತ್ತು ಪ್ರತಿಯೊಬ್ಬರಿಂದ ಕಲಿತುಕೋ.' ದೇವರು ನನ್ನ ಜತೆಗಿರಲಿ."



ಇನ್ನೊಂದು ಸಂದರ್ಭ:

"..... ಈ ದಿನದ ಕೆಲಸ ನನಗೆ ತೃಪ್ತಿ ನೀಡಲಿಲ್ಲ. ಬೆಂಕಿಗೆ ನಾನು ಹೆಚ್ಚು ಇದ್ದಿಲನ್ನು ಸೇರಿಸಬೇಕಾಗಿತ್ತು ಮಾತ್ರವಲ್ಲ ಹೆಚ್ಚು ಕಠಿಣವಾಗಿ ದುಡಿಯಬೇಕಾಗಿತ್ತು. ಇನ್ನಷ್ಟು ತೀವ್ರತರ ಅಧ್ಯಯನದಿಂದ ಮಹತ್ತನ್ನು ಸಾಧಿಸುವುದಕ್ಕಿಂತ ಹೊರತಾಗಿ ನನ್ನ ಜನ್ಮ ದಿನದ ಆಚರಣೆ ಬೇರೆ ಯಾವ ರೀತಿಯಲ್ಲಿ ಆಚರಿಸಲು ಶಕ್ಯವಿದೆ? ನಾಳೆ ನನ್ನ ಜನ್ಮದಿನವಿದ್ದು ಅದನ್ನು ಹಾಗೆಯೇ ಆಚರಿಸುತ್ತೇನೆ. ಇಂತಹ ಆಚರಣೆಗೆ 'ದೇವಲೋಕದ ತಂದೆ' ನನಗೆ ಅನಂತವಾಗಿ ಹರಸಲಿ"

ಅನಂತ್ ಅವರ ಈಯೆಲ್ಲ ಸಂಕಲ್ಪದಿಂದ ಕೂಡಿದ ಹೇಳಿಕೆಗಳ ಹಿಂದೆ ಅದೊಂದು ನಿಷ್ಕಪಟ ಮನಸ್ಸು ಕೆಲಸ ಮಾಡುತ್ತಿತ್ತು ಎಂಬುದನ್ನು ಮರೆಯಬಾರದು.

'ಕೊಂಚವೇ ಮಾತನಾಡಬೇಕು ಮತ್ತು ಅದು ಸವಿಯಾಗಿರಬೇಕು' ಮುಂತಾದ ಹೇಳಿಕೆಗಳು ಅವರ ಉದಾರ ನಡವಳಿಕೆಗೆ ಉದಾಹರಣೆಗಳಾಗಬಹುದು.

ಪ್ರಾಯಶಃ ಅವರು ಮಿತಿಗಿಂತ ಹೆಚ್ಚು ಮಾತನಾಡುತ್ತಿದ್ದಿರಬೇಕು ಮತ್ತು ಅದಕ್ಕೆ ಕಡಿವಾಣ ಹಾಕುವ ದೃಷ್ಟಿಯಿಂದ ಈ ರೀತಿಯ ಆತ್ಮಾವಲೋಕನ ಮಾಡುತ್ತಲಿದ್ದಿರಬೇಕು ಎಂದು ಭಾವಿಸಬಹುದು. ಈ ಯುವ ನಾಯಕನಲ್ಲಿ ಕಂಡು ಬರುವ ಆತ್ಮ ವಿಮರ್ಶೆಯ ಛಾತಿಯನ್ನು ನಾವು ಗಮನಿಸಬೇಕಾದ್ದು ಅವಶ್ಯ.

'.... ಈ ದಿನದ ಕೆಲಸ ನನಗೆ ತೃಪ್ತಿ ನೀಡಲಿಲ್ಲ. ಬೆಂಕಿಗೆ ನಾನು ಹೆಚ್ಚು ಇದ್ದಲನ್ನು ಸೇರಿಸಬೇಕಾಗಿತ್ತು..' ಮುಂತಾದ ಹೇಳಿಕೆಗಳು, ಅಂತೆಯೇ, 'ದೇವ ಲೋಕದ ತಂದೆ ನನಗೆ ಅನಂತವಾಗಿ ಹರಸಲಿ' ಎಂಬ ಪ್ರಾರ್ಥನೆಗಳು ಅವರ ಅಂದಿನ ಮನಃಸ್ಥಿತಿಯನ್ನು ಬಿಂಬಿಸುವುದಲ್ಲದೆ, ಮುಂದಿನ ದಿನಗಳಲ್ಲಿ ಅವರು ಕೈಗೊಂಡು ಸಾಧಿಸಿದ ನಿಸ್ಪೃಹ ಕಾಯಕಗಳ ಒಂದು ವಿಹಂಗಮ ನೋಟವನ್ನು ನೀಡುತ್ತದೆ ಎಂದು ಹೇಳಬಹುದು.

ಮತ್ತೊಂದು ದಾಖಲೆ:

"ಚರ್ಚಾ ಕೂಟದಲ್ಲಿ ಭಾಗವಹಿಸುವ ಸಲುವಾಗಿ ಮಧ್ಯಾಹ್ನ ದಾದರಿಗೆ ಹೋದೆ. 'ರಮಾನಂದ್'ನಲ್ಲಿ ಚಹಾ ಕುಡಿದೆ. ಚರ್ಚಾ ಕೂಟ ದೊಡ್ಡ ಪ್ರಹಸನವೆನಿಸಿತು. ಸಭೆಯಲ್ಲಿ 15ಜನರಿಗಿಂತ ಹೆಚ್ಚಿಗೆ ಇರಲಿಲ್ಲ. ಡಿ'ಕುನ್ಹಾ ಚೆನ್ನಾಗಿ ಮಾತನಾಡಿದರು. ನನ್ನ ನಿರ್ವಹಣೆ ತೃಪ್ತಿದಾಯಕವಾಗಿತ್ತು. ನನ್ನ ವ್ಯಕ್ತಿತ್ವ ವಿಕಸನದಲ್ಲಿ ಇಂತಹ ಚರ್ಚಾ ಕೂಟಗಳು ಮಹತ್ತರ ಪಾತ್ರವಹಿಸಬಲ್ಲುದು. ಮಾನವ ಮನಃಸ್ಥಿತಿಯ ನ್ಯೂನತೆಗಳನ್ನು ಕಂಡುಕೊಳ್ಳುವಲ್ಲಿ ಇಂತಹ ಚರ್ಚಾ ಕೂಟಗಳು ಸಹಕಾರಿಯಾಗಬಲ್ಲವು......

".......ನಚ್ಚು ಮತ್ತು ವೆಂಕಟ್ರಾಯ್ ಜತೆಗೆ ಮರೀನ್ ಡ್ರೈವ್‌ನಲ್ಲಿ ಆಹ್ಲಾದಕರವಾಗಿ ಸಾಗಿದೆವು. ಬ್ಯಾಂಕಿಂಗ್ ಮತ್ತು ಇನ್ಶೂರೆನ್ಸ್ ವಿಷಯದಲ್ಲಿ ನಾವು ಪರಸ್ಪರ ನಮ್ಮ ಅನಿಸಿಕೆಗಳನ್ನು ಹಂಚಿಕೊಂಡೆವು. ಬ್ಯಾಂಕಿಂಗ್‌ಗಿಂತ ಇನ್ಶೂರೆನ್ಸ್ ಮೂಲಕ ಮಾನವ ಜನಾಂಗಕ್ಕೆ ಹೆಚ್ಚು ಸೇವೆ ಸಲ್ಲಿಸುವ ಸದವಕಾಶವಿದೆ ಎಂದು ನಾನು ಪ್ರತಿಪಾದಿಸಿದೆ. ತದನಂತರ ಸದಾಚಾರದ ಕುರಿತಾಗಿ ನಮ್ಮಲ್ಲಿ ಬಿಸಿ ಬಿಸಿ ಚರ್ಚೆಯಾಯಿತು ಮಾತ್ರವಲ್ಲ, ಸದಾಚಾರ ನಮ್ಮ ದೃಷ್ಟಿಕೋನವನ್ನು ವಿಸ್ತರಿಸಬಹುದು ಎಂದು ತೀರ್ಮಾನಿಸಿದೆವು."

ಸದಾಚಾರದ ಬಗೆಗೆ ಇನ್ನೊಂದು ದಾಖಲೆ ಈ ರೀತಿಯಿತ್ತು–

“ ‘ವಿದ್ಯಾಪತಿ’ (ಸಿನಿಮಾ)ಯನ್ನು ನೋಡಲು ಹೋಗಿದ್ದೆ. ಭಾರತೀಯ ಸಿನಿಮಾಗಳಲ್ಲೆ ಅತ್ಯಂತ ಮಹತ್ವಪೂರ್ಣ ತತ್ವಾದರ್ಶಗಳನ್ನು ಬಿಂಬಿಸುವ ಸಿನಿಮಾ ಇದು. ಪ್ರೇಮವೆಂಬುದು ಶಾಶ್ವತವೆನ್ನುವ ನೀತಿಯನ್ನು ಈ ಮೂಲಕ ತಿಳಿಯುವಂತಾಯಿತು. ಪ್ರೀತಿ ಮಾಡುವುದು ಪಾಪವೇ? ಎಂಬ ಪ್ರಶ್ನೆಯನ್ನೂ ಚಿಂತಿಸಬೇಕಾಯಿತು.”

ಅನಂತ್ ಅವರ ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುವಂಥ ಇನ್ನೊಂದು ಉದಾಹರಣೆ ಇಲ್ಲಿದೆ:

“ಕಾಲೇಜು ವಾರ್ಷಿಕೋತ್ಸವ... ‘ಕೈಗಾರಿಕಾ ಭಾರತ’ ಯಶಸ್ವಿಯಾಯಿತು. ನನ್ನ ನಟನೆ ಮತ್ತು ಪಾತ್ರ ಎಲ್ಲರ ಮೆಚ್ಚುಗೆ ಪಡೆಯಿತು. ರಾತ್ರಿ ಆಲ್ಜಿಬ್ರಾದ ಅಭ್ಯಾಸವನ್ನು ಚೆನ್ನಾಗಿ ಮಾಡಿದೆ.”

*

“ಇರೋಸ್‌ನಲ್ಲಿ ‘ಕ್ರಿಸ್ಮಸ್ ಇನ್ ಜುಲೈ’ ನೋಡಲು ಸದಾಶಿವನ ಆಮಂತ್ರಣದ ಮೇರೆಗೆ ಹೋದೆ. ನನ್ನನ್ನು ಅಧೀರನನ್ನಾಗಿ ಮಾಡುವಂಥದ್ದನ್ನು ಧಿಕ್ಕರಿಸುವೆ. ನಾಳೆ ಒಂದನೇ ತಾರೀಕು. ನನ್ನ ಕಾಯಕದಲ್ಲಿ, ನನ್ನ ಆಲೋಚನೆಯಲ್ಲಿ, ನನ್ನ ಮಾತಿನಲ್ಲಿ ಸ್ಥಿರತೆಯನ್ನೂ, ಪರಿಪೂರ್ಣತೆಯನ್ನೂ ಸಾಧಿಸಲು ದೃಢ ಸಂಕಲ್ಪಬೇಕು. ನಾಳೆಯಿಂದಲೇ ನಾನು ಇದನ್ನು ಪ್ರಾರಂಭಿಸಬೇಕು.”

*

“ಒಂದೇ ಒಂದು ನಿಮಿಷವನ್ನಾಗಲೀ, ಒಂದೇ ಒಂದು ಔನ್ಸ್ ಶಕ್ತಿಯನ್ನಾಗಲೀ, ಒಂದು ಶಬ್ಧವನ್ನಾಗಲೀ ವ್ಯರ್ಥವಾಗಿಸಬಾರದು. ನನ್ನ ಕಾರ್ಯಕ್ಷಮತೆಯ ಅತ್ಯಂತ ಹೆಚ್ಚು ಉಪಯೋಗವಾಗುವುದು ಅನಿವಾರ್ಯ. ಗಂಭೀರವಾಗಿಯೂ, ಅದೇ ವೇಳೆ ಸದಾ ಕಾಲ ಮಂದಸ್ಮಿತನಾಗಿಯೂ ಇರಲು ಪ್ರಯತ್ನಿಸಬೇಕು.”

*

“ಗಣಿತ ಪರೀಕ್ಷೆ ಸಮಾಧಾನಕರವಾಗಿತ್ತು. ನಾನು ನನ್ನಷ್ಟಕ್ಕೆ ಸ್ವಸ್ಥಚಿತ್ತನಾಗಿದ್ದಿದ್ದರೆ ನೂರಕ್ಕೆ ನೂರು ಅಂಕಗಳು ಬರುತ್ತಿದ್ದವೇನೋ!”

ವರ್ಷದ ಕೊನೆಯಲ್ಲಿ ತೆಗೆದುಕೊಂಡ ನಿರ್ಧಾರ ಪ್ರಾಯಶಃ ಅತ್ಯಂತ ಮಹತ್ವಪೂರ್ಣವಾದುದು:

"ವರ್ಷದ ಕೊನೆಯ ಸಂಕಲ್ಪವೊಂದನ್ನು ಮಾಡುತ್ತಿದ್ದೇನೆ– ಇದರಿಂದ ನಾನು **ಎಂದೆಂದಿಗೂ, ಎಂದೆಂದಿಗೂ,** ವಿಚಲಿತನಾಗಲಾರೆ. ನನ್ನ ಪ್ರತಿಜ್ಞಾ ಪೂರ್ವಕ ಶರ್ತವೆಂದರೆ, ನಾನು ನನ್ನ ಬದುಕಿನಲ್ಲಿ ಎಂದಿಗೂ ಏನನ್ನೂ ವ್ಯರ್ಥಮಾಡಲಾರೆ–ಅದು ನನ್ನ ಚೈತನ್ಯವಿರಲಿ ಅಥವಾ ನನ್ನ ಪಾಲಿಗೆ ಬರುವ ಸಮಯವಿರಲಿ– ಅವೆಲ್ಲವನ್ನೂ ನಾನು ಮಾನವ ಜನಾಂಗದ ಉನ್ನತ ಬದುಕಿನ ಒಳಿತಿಗಾಗಿ ವಿನಿಯೋಗಿಸಬೇಕು."

*

ಸಿಂಡಿಕೇಟ್ ಬ್ಯಾಂಕಿನ ಜವಾಬ್ದಾರಿಯುತ ಸ್ಥಾನದಲ್ಲಿದ್ದಾಗ, ತಾನೊಬ್ಬ ಚಿಂತಕ ಎನ್ನುವ ವಿಷಯವನ್ನು ಹೊರಗೆಡಹುವ ದಿನಚರಿಯ ಪುಟಗಳು ಇಂತಿವೆ:

"ಆ ಎಳೆಯ ಹುಡುಗ ತನ್ನ ತಾಯಿಯೊಂದಿಗೆ ಬಂದು ಆ ಬಾಗಿಲ ಸಂದಿಯಲ್ಲಿ ಇಣುಕಿದ. ನಾನು ಒಳಗೆ ಕರೆದೆ. ಆಕೆ, ಈತನಿಗೆ 16ವರ್ಷವೆಂದೂ, ಹೈಸ್ಕೂಲನ್ನು ಮುಗಿಸಿದ್ದಾನೆ ಎಂದೂ ಹೇಳಿದಳು. ಅವನಿಗೆ ಬ್ಯಾಂಕಿನಲ್ಲಿ ಯಾವುದೇ ಕೆಲಸ ನೀಡಿದರೂ ಮಾಡುತ್ತಾನೆ ಎಂದಳು. ತಮ್ಮ ಕುಟುಂಬದ ಆದಾಯ ದಿನಕ್ಕೆ ಕೇವಲ ಒಂದೂವರೆ ರೂಪಾಯಿಯೆಂದೂ, ತನ್ನ ಗಂಡ ಅದನ್ನು ಬ್ರೆಡ್ ಮಾರಿ ಸಂಪಾದಿಸುತ್ತಾನೆ, ತಮ್ಮ ಕುಟುಂಬದಲ್ಲಿ ಆರು ಜನರ ಹೊಟ್ಟೆ ಹೊರೆಯಬೇಕಾಗಿದೆ ಎಂದೂ ಆಕೆ ಹೇಳಿದಳು. ಟಿ.ಎ. ಆ ಹುಡುಗನಿಗೆ 10ರೂಪಾಯಿ ನೋಟೊಂದನ್ನು ನೀಡಿ, ಉಡುಪಿಯಲ್ಲಿ ಸ್ಟೆನೋಗ್ರಾಫಿ ಕಲಿಯುವಂತೆ ಸಲಹೆ ನೀಡಿದರು. ಅವರು ಅಲ್ಲಿಂದ ಹೊರಟುಹೋದರು. 'ನಾನೀಗ ಆ ಹುಡುಗನಿಗೆ ಪ್ರತಿ ತಿಂಗಳು ಹಣ ಪಾವತಿಸಬೇಕಾಗಿದೆ.' ಟಿ.ಎ.ಅಂದುಕೊಂಡರು. 'ಏನು ಮಾಡಲಿ? ನಾನು ಎಷ್ಟೇ ಬಯ್ಯಲಿ, ಹೆದರಿಸಲಿ ಅವರು ಮತ್ತೆ ನನ್ನಲ್ಲಿಗೇ ಬರುತ್ತಾರೆ. ಇದು ನಾನಿಲ್ಲಿ ಜೀವಿಸಿರುವ ಕಾಲದವರೆಗೆ ನಡೆಯುತ್ತದೆ.

"ಒಂದು ಬೆಳಿಗ್ಗೆ ಕೆಲಸ ಕೇಳಿಕೊಂಡು ಒಬ್ಬ ಹುಡುಗಿ ನನ್ನಲ್ಲಿಗೆ ಬಂದಳು. ಕೆಲಸವಿಲ್ಲ ಎಂದು ನಾನು ಅವಳಿಗೆ ಹೇಳಬೇಕಾಯಿತು. ಅದೇ ಸಂಜೆ ಆಕೆ ಆತ್ಮಹತ್ಯೆ ಮಾಡಿಕೊಂಡಳು. ಆ ಮೇಲೆ ನಾನು ಇಂಥ ವಿಷಯಗಳಲ್ಲಿ ಹೆಚ್ಚು ಎಚ್ಚರಿಕೆಯಿಂದ ವ್ಯವಹರಿಸಬೇಕಾಯಿತು. ನಾನೀಗ ಹತ್ತೋ ಹನ್ನೆರಡೋ ಅಥವಾ ಇನ್ನೂ ಹೆಚ್ಚು ಹುಡುಗ ಹುಡುಗಿಯರಿಗೆ ಶಾಲಾ ಫೀಸನ್ನು ಕೊಡುತ್ತಿದ್ದೇನೆ."

ಕಾಲೇಜಿನಲ್ಲಿ ಅನಂತರಿಗೆ ಅನೇಕ ಗೆಳೆಯರು ದೊರೆತರು. ಹೆಸರಾಂತ ವಸ್ತ್ರೋದ್ಯಮಿ ಅರವಿಂದ ಮಫತ್ ಲಾಲ್, ಡಾ. ಆರ್.ಸಿ.ಕೂಪರ್ ಮತ್ತು ಊರಿನವರೇ ಆದ ಎಚ್.ವಿ.ಕಾಮತ್, ಎಚ್.ಎನ್.ರಾವ್ ಹಾಗೂ ಕೆ.ಕೆ.ಪೈ. ಕೊನೆಯ ಮೂವರು ಸಿಂಡಿಕೇಟ್ ಬ್ಯಾಂಕಿನಲ್ಲಿ ಉದ್ಯೋಗಸ್ಥರಾಗಿ, ಮುಂದೆ ಅವರ ಬದುಕಿನುದ್ದಕ್ಕೂ ಸ್ನೇಹಿತರಾಗಿಯೂ, ಸಹಾಯಕರಾಗಿಯೂ ಇದ್ದವರು. ಕೆ.ಕೆ.ಪೈಯವರು ಅನಂತ್ ಅವರ ಸಹೋದರಿಯನ್ನು ವಿವಾಹವಾಗಿ ಅವರ ಬಂಧುವರ್ಗದಲ್ಲಿ ಸೇರ್ಪಡೆಗೊಂಡರು.

1943ರಲ್ಲಿ ಸಿಡೆನ್ ಹ್ಯಾಂ ಕಾಲೇಜಿನಿಂದ ಪದವೀಧರರಾಗಿ ತಾಯ್ನಾಡಿಗೆ ಹಿಂದಿರುಗುವ ವೇಳೆಗೆ ಅನಂತ ಹಿಂದಿನ ಅನಂತ್ ಆಗಿರಲಿಲ್ಲ. ಅವರ ವ್ಯಕ್ತಿತ್ವವೇ ಬದಲಾಗಿತ್ತು. ತುಂಬಿದ ಮುಖದ, ಆಜಾನುಬಾಹು ದೇಹದ, ಎತ್ತರ ನಿಲುವಿನ ಗೌರವರ್ಣದ, ಗುಡುಗಿನ ಕಂಠದ ಅನಂತ್ ಆಗಿದ್ದರು. ಅಪಾರ ಆತ್ಮವಿಶ್ವಾಸದಿಂದ ಮಹತ್ವದ್ದನ್ನು ಸಾಧಿಸಬೇಕೆಂಬ ಉತ್ಸಾಹೀ ಯುವಕರಾಗಿದ್ದರು.



## ಪ್ರಯೋಗಶೀಲ ಬ್ಯಾಂಕರ್

ಟಿ.ಎ.ಪೈ ಅವರ ಬ್ಯಾಂಕಿಂಗ್ ಕ್ಷೇತ್ರದ ಪ್ರಯೋಗಶೀಲತೆ ಅನ್ಯಾದೃಶ. ತಮ್ಮ ಸೇವಾವಧಿಯ ಪ್ರಾರಂಭದ ದಿನಗಳಲ್ಲೇ ಅವರು ಬ್ಯಾಂಕಿಂಗ್ ಉದ್ದಿಮೆಯಲ್ಲಿ ಪಳಗಿದ್ದರು. ಅಂದಿನ ದಿನಗಳಲ್ಲೇ ಅವರು 'ವರ್ಗೀಯ ಬ್ಯಾಂಕಿಂಗ್'ನ್ನು 'ಸಾಮೂಹಿಕ ಬ್ಯಾಂಕಿಂಗ್' ಆಗಿ ಪರಿವರ್ತಿಸಿದರು. ಬ್ಯಾಂಕಿಂಗ್ ಅಂದು ಕೆಲವೇ ಮಂದಿಯ ಹಿಡಿತದಲ್ಲಿ ನಲುಗಿಹೋಗಿತ್ತು; ಕೆಲವೇ ಜನರ ಏಕಸ್ವಾಮ್ಯಕ್ಕೆ ಒಳಗಾಗಿತ್ತು. ಅಂದರೆ

ಉನ್ನತ ಮಧ್ಯಮ ವರ್ಗ ಮತ್ತು ಐಶ್ವರ್ಯವಂತರ ಅಥವಾ ಉದ್ದಿಮೆದಾರರ ವಶವಾಗಿತ್ತು. ಬ್ಯಾಂಕಿಂಗ್‌ನ್ನು ಸಾಮಾನ್ಯ ಜನರ ಸಮೀಪಕ್ಕೆ, ಅದರಲ್ಲೂ ಕೃಷಿ ಕಾರ್ಮಿಕರು, ಸಣ್ಣ ಹಿಡುವಳಿದಾರರು ಮತ್ತು ಸಣ್ಣ ವ್ಯಾಪಾರಸ್ಥರ ಬಳಿಗೆ ಒಯ್ದ ಶ್ರೇಯಸ್ಸು ಟಿ.ಎ.ಪೈ ಅವರಿಗೆ ಸಲ್ಲುತ್ತದೆ.



ರಿಸರ್ವ್ ಬ್ಯಾಂಕಿನ ಗವರ್ನರ್ ಶ್ರೀಬೆನಗಲ್ ರಾಮರಾಯರು ಕೆನರಾ ಇಂಡಸ್ಟ್ರಿಯಲ್ ಮತ್ತು ಬ್ಯಾಂಕಿಂಗ್ ಸಿಂಡಿಕೇಟ್ ಲಿಮಿಟೆಡ್(ಸಿಂಡಿಕೇಟ್ ಬ್ಯಾಂಕ್)ನ ಪ್ರಧಾನ ಕಚೇರಿಗೆ ಸಂದರ್ಶನ ನೀಡಿದ ಸಂದರ್ಭ. ಡಾ.ಟಿ.ಎಂ.ಎ.ಪೈ, ಶ್ರೀ ಉಪೇಂದ್ರ ಪೈ, ಶ್ರೀ ಟಿ.ಎ.ಪೈ ಹಾಗೂ ಬ್ಯಾಂಕಿನ ಡೈರೆಕ್ಟರುಗಳನ್ನು ಕಾಣಬಹುದು.

ಬ್ಯಾಂಕಿಂಗ್‌ನ್ನು ತಮ್ಮ ವೃತ್ತಿ ಜೀವನದ ಪ್ರಾರಂಭದ ದಿನಗಳಲ್ಲೇ ಆಯ್ದುಕೊಂಡು ಅವರೊಬ್ಬ ಪ್ರಯೋಗಶೀಲ ಬ್ಯಾಂಕರ್ ಆಗಿ ರೂಪುಗೊಂಡ ಆಖ್ಯಾಯಿಕೆ ಅದೊಂದು ರೋಮಾಂಚಕ ಕಥನ.



1925ರಿಂದ 1949ರವರೆಗೆ ಸಿಂಡಿಕೇಟ್ ಬ್ಯಾಂಕಿನ ಪ್ರಧಾನ ಕಚೇರಿ

1943ರಲ್ಲಿ ಮುಂಬಯಿಯಲ್ಲಿ ಕಾಲೇಜು ಮುಗಿಸಿ ಬಂದ ತಕ್ಷಣ ಅನಂತ್, ಸಿಂಡಿಕೇಟ್ ಬ್ಯಾಂಕಿನಲ್ಲಿ ಡೆಪ್ಯುಟಿ ಮ್ಯಾನೇಜರ್ ಆಗಿ ತಮ್ಮ ವೃತ್ತಿ ಜೀವನ ಆರಂಭಿಸಿದರು. 1925ರಲ್ಲಿ ತಮ್ಮ ತಂದೆ, ಚಿಕ್ಕಪ್ಪ ಡಾ.ಟಿ.ಎಂ.ಎ.ಪೈ ಮತ್ತು ಶ್ರೀ ವಿ.ಎಸ್.ಕುಡ್ವ –ಈ ಮೂವರ ಮುಂದಾಳ್ತನದಲ್ಲಿ ಸ್ಥಾಪಿತವಾದ ಸಿಂಡಿಕೇಟ್ ಬ್ಯಾಂಕ್, ಅನಂತ್ ಸೇರುವ ವೇಳೆಗೆ ಸಾಕಷ್ಟು ಪ್ರಗತಿಯನ್ನು ಸಾಧಿಸಿತ್ತು. 'ಯಾವ ಮನುಷ್ಯನೂ ಸಣ್ಣವನಲ್ಲ' ಎಂಬ ವಿಶೇಷ ಘೋಷಣೆಯೊಂದಿಗೆ ಸಣ್ಣ ಪ್ರಮಾಣದಲ್ಲಿ ಪ್ರಾರಂಭವಾದ ಬ್ಯಾಂಕು ತನ್ನ ದೈತ್ಯ ಹೆಜ್ಜೆಯೊಂದಿಗೆ ಬೃಹದಾಕಾರವಾಗಿ ಬೆಳೆಯಲು ಸನ್ನದ್ಧವಾಗಿತ್ತು. 'ಪಿಗ್ಮಿ'ಯಂಥ ಠೇವಣಿ ಸಂಗ್ರಹಿಸುವ ಯೋಜನೆಗಳು ಬ್ಯಾಂಕನ್ನು ಇನ್ನಷ್ಟು ಜನಪ್ರಿಯವಾಗಿಸಿತ್ತು.

ಸಿಂಡಿಕೇಟ್ ಬ್ಯಾಂಕ್ ಕೃಷಿಕರಿಗೆ, ನೇಕಾರರೇ ಮುಂತಾದ ಕುಶಲಕರ್ಮಿಗಳಿಗೆ ನೆರವು ನೀಡುವ ಯೋಜನೆಯನ್ನು ಹಮ್ಮಿಕೊಂಡು ಗ್ರಾಮಾಂತರ ಪ್ರದೇಶದಲ್ಲಿ ಆರ್ಥಿಕ ಅಭಿವೃದ್ಧಿಗೆ ಕಾರಣವಾಯಿತು. 1942ರಲ್ಲಿ ಸಿಂಡಿಕೇಟ್ ಬ್ಯಾಂಕಿನ ಠೇವಣಿಗಳ ಒಟ್ಟು ಮೊತ್ತ ರೂ.59ಲಕ್ಷ. ಒಟ್ಟು ಶಾಖೆಗಳ ಸಂಖ್ಯೆ 44. ಟಿ.ಎ.ಪೈಯವರು ಅಧಿಕಾರ ವಹಿಸಿಕೊಂಡ ವರ್ಷವೇ ಅಭಿವೃದ್ಧಿಯ ಉಜ್ವಲ ಹೊಸ ಅಧ್ಯಾಯ ಪ್ರಾರಂಭವಾಯಿತು. ವರ್ಷಾಂತ್ಯದಲ್ಲಿ ಠೇವಣಿ ಒಂದು ಕೋಟಿ ದಾಟಿತು. ಇತರ ವಿಭಾಗಗಳಲ್ಲೂ ಅದೇ ಪ್ರಮಾಣದ ಪ್ರಗತಿ ಕಂಡಿತು. ಒಂದೆಡೆ ಡಾ.ಟಿ.ಎಂ.ಎ.ಪೈಯವರ ಮಾರ್ಗದರ್ಶನ, ಇನ್ನೊಂದೆಡೆ, ಹೊಸ ಹೊಸ ಯೋಜನೆ, ಹೊಸ ಹೊಸ ವಿಚಾರಗಳಿಂದ ತುಂಬಿ ತುಳುಕುತ್ತಿದ್ದ ತಾರುಣ್ಯ. ಪೈಯವರ ಪ್ರತಿಭೆಗೆ, ಕಾರ್ಯಕೌಶಲ್ಯತೆಗೆ ವಿಪುಲ ಅವಕಾಶ ದೊರೆತಂತಾಯಿತು.

1949ರಿಂದ 1964ರವರೆಗೆ ಸಿಂಡಿಕೇಟ್ ಬ್ಯಾಂಕಿನ ಪ್ರಧಾನ ಕಚೇರಿ ಮುಕುಂದ ನಿವಾಸವೇ ಆಗಿತ್ತು. ಅಂದಿನ ಕೇಂದ್ರ ಆಹಾರ ಮತ್ತು ಕೃಷಿ ಸಚಿವರೂ, ಟಿ.ಎ.ಪೈಯವರ ಆತ್ಮೀಯರೂ ಆಗಿದ್ದ ಶ್ರೀ ಸಿ.ಸುಬ್ರಹ್ಮಣ್ಯಂ ಅವರು ಬ್ಯಾಂಕಿನ ನೂತನ ಕಚೇರಿಯನ್ನು ಉದ್ಘಾಟಿಸಿದರು. ಈ ಕಾಲಾವಧಿಯಲ್ಲಿ ಪೈಗಳು ಕೈಗೊಂಡ ಗ್ರಾಮಾಂತರ ಶಾಖೆಗಳ ಪ್ರಯೋಗ ಯಶಸ್ವಿಯಾಯಿತು. ಕಾರ್ಕಳ ತಾಲೂಕಿನ ನಿಟ್ಟೆ ಕಾಡೊಳಗಿರುವ ಒಂದು ಸಣ್ಣ ಊರು. ಅಲ್ಲಿನ ಒಂದು ಅಂಗಡಿಯ ಉಪ್ಪರಿಗೆಯ ಮೇಲೆ ಸಿಂಡಿಕೇಟ್ ಬ್ಯಾಂಕಿನ ಶಾಖೆಯೊಂದು ಆರಂಭವಾಯಿತು. ಹೊರನೋಟಕ್ಕೆ ಸಾಮಾನ್ಯವಾಗಿದ್ದ ಈ ಶಾಖೆ



ಎಂಟೂವರೆ ಲಕ್ಷ ರೂಪಾಯಿಯ 1,600 ಠೇವಣಿಗಳನ್ನು ಹೊಂದಿದ್ದವು. ಬ್ಯಾಂಕಿನ ಕಟ್ಟಡಕ್ಕೆ ನೀಡುತ್ತಿದ್ದುದು ಕೇವಲ 17 ರೂಪಾಯಿ ಬಾಡಿಗೆ. ಬೈಲೂರಿನ ಶಾಖೆಯಲ್ಲಿ 10ಲಕ್ಷ ರೂಪಾಯಿ ಠೇವಣಿ ಇತ್ತು. 4.5 ಲಕ್ಷ ರೂಪಾಯಿ ಸಾಲ ವಿತರಣೆಯಾಗಿತ್ತು. ಶಿರ್ವ ಶಾಖೆಯಲ್ಲಿ ಇಪ್ಪತ್ತು ಲಕ್ಷ ಠೇವಣಿ ಇತ್ತು. ಈ ಎಲ್ಲ ಯಶಸ್ಸು ಹೊಸ ಪ್ರಯೋಗಗಳಿಗೆ ನಾಂದಿಯಾಯಿತು.

ಬೆಳಗಾವಿ ನಗರದಲ್ಲಿ ತರಕಾರಿ ಮಾರುವ ಹೆಂಗಸರ ವ್ಯಾಪಾರೀ ಚಟುವಟಿಕೆಗಳನ್ನು ಮನಗಂಡ ಪೈಯವರು, ಅವರ ಖಾತೆಗಳನ್ನು ಬ್ಯಾಂಕಿನಲ್ಲಿ ತೆರೆಯುವಂತೆ ಪ್ರೇರೇಪಿಸಿದರು. ಅವರಿಗೆ ಅವಶ್ಯವಿದ್ದ ಸಾಲಗಳನ್ನು ನೀಡುವಂತೆ ಆದೇಶ ನೀಡಿದರು. ಉಡುಪಿ ತಾಲೂಕಿನ ಮಟ್ಟು ಗ್ರಾಮದ ಗುಳ್ಳ ಬೆಳೆಯುವ ಗೇಣಿದಾರರಿಗೂ ಸಾಲ ಸೌಲಭ್ಯಗಳನ್ನು ವಿಸ್ತರಿಸಿದರು. ಶಂಕರಪುರದ ಮಲ್ಲಿಗೆ ಹೂವಿನ ಬೇಸಾಯಗಾರರಿಗೆ ನೆರವಿನ ಹಸ್ತ ಚಾಚಿದರು. ಇಂತಹ ಸಾಲ ಸೌಲಭ್ಯಗಳನ್ನು ನೀಡಲು ಅವಶ್ಯವಿದ್ದ ರಿಸರ್ವ್ ಬ್ಯಾಂಕಿನ ಕಾನೂನು ಪರವಾನಗಿಗಳನ್ನು ಚಾಕಚಕ್ಯತೆಯಿಂದ ನಿಭಾಯಿಸಿದರು. 'ಅಧಿಕಾರ ಶಾಶ್ವತವಲ್ಲ, ಅದನ್ನು ಅನ್ಯರಿಗೆ ಸಹಾಯಮಾಡಲು ಬಳಸುವಂತಾಗಬೇಕು' ಎಂಬುದೇ ಅವರ ಸಿದ್ಧಾಂತವೂ, ಆದರ್ಶವೂ ಆಗಿತ್ತು.

'ಮಲಯಾಳ ಮನೋರಮಾ' ಪತ್ರಿಕೆಯ ಸಂಪಾದಕರಾದ ಕೆ.ಎಂ.ಚೆರಿಯನ್ ಟಿ.ಎ.ಪೈಯವರ ಈಯೆಲ್ಲ ಕಾರ್ಯಚಟುವಟಿಕೆಗಳನ್ನು ಕುರಿತು ಉದ್ಗರಿಸಿದ್ದು ಹೀಗೆ:

"ಸಿಂಡಿಕೇಟ್ ಬ್ಯಾಂಕಿನ ವಿಸ್ತರಣಾ ಕಾರ್ಯಕ್ರಮದ ಅಂಗವಾಗಿ ಟಿ.ಎ.ಪೈಯವರು ಕೊಟ್ಟಾಯಂಗೆ ಬಂದಿದ್ದರು. ದೇಶದ ಮುಂಚೂಣಿಯಲ್ಲಿರುವ ಬ್ಯಾಂಕುಗಳಲ್ಲಿ ಇದೂ ಒಂದು. ಎಂ.ಎಂ.ಹಾಲ್‌ನಲ್ಲಿ ಪೈಗಳು ತಮ್ಮ ವಿದ್ವತ್ಪೂರ್ಣ ಭಾಷಣವನ್ನು ನೀಡಿದರು. ಅವರ ಭಾಷಣವನ್ನು ಕೇಳುತ್ತಿದ್ದಂತೆ ನನಗನಿಸಿತು, ಉಡುಪಿಯ ಪೈ ಮನೆತನದವರು, ಉಜ್ವಲ ಅರ್ಥಶಾಸ್ತ್ರ ನಿಪುಣರು ಮಾತ್ರವಲ್ಲ, ದೇಶದ ನೇತಾರರಾಗುವುದಕ್ಕೆ ಅರ್ಹತೆಯುಳ್ಳವರು."

1962ನೇ ಇಸವಿಯಲ್ಲಿ ಸಿಂಡಿಕೇಟ್ ಬ್ಯಾಂಕಿನ ಆಡಳಿತ ನಿರ್ದೇಶಕರಾಗಿ ನೇತೃತ್ವ ವಹಿಸಿಕೊಂಡ ಅನಂತರ ಮುಂದಿನ ಹತ್ತು ವರ್ಷಗಳಲ್ಲಿ ಸಿಂಡಿಕೇಟ್ ಬ್ಯಾಂಕ್ ಸಾಮಾನ್ಯ ಜನರ ಅಸಾಮಾನ್ಯ ವಿತ್ತ ಸಂಸ್ಥೆಯಾಗಿ ರೂಪುಗೊಂಡು ರಾಷ್ಟ್ರದ ಗಮನ ಸೆಳೆಯಿತು. ಸ್ವತಃ ಆರ್ಥಿಕ ತಜ್ಞರಾದ ಟಿ.ಎ.ಪೈ ಅವರು ಅದ್ಭುತ ಮ್ಯಾನೇಜ್‌ಮೆಂಟ್ ತಜ್ಞರಾಗಿ ಸಣ್ಣ ಊರಿನಲ್ಲೇ ಇದ್ದುಕೊಂಡು, ಇಂಥ ಬ್ಯಾಂಕ್ ಹೇಗೆ ಕಟ್ಟಬಹುದೆಂದು ರಾಷ್ಟ್ರಕ್ಕೆ ತೋರಿಸಿಕೊಟ್ಟರು. ಹೊಸ ಹೊಸ ಯೋಜನೆಗಳನ್ನು ರೂಪಿಸಿ ಎಲ್ಲ ವರ್ಗದ ಜನರಿಗೆ ಆರ್ಥಿಕ ನೆರವನ್ನು ನೀಡಿ ಬ್ಯಾಂಕಿಂಗ್ ಇತಿಹಾಸದಲ್ಲಿ ಹೊಸ ಅಧ್ಯಾಯ ಬರೆದರು. ಅಂದು 60ರ ದಶಕದಲ್ಲಿ ಟಿ.ಎ.ಪೈಯವರ ಮಾರ್ಗದರ್ಶನದಲ್ಲಿ ರೂಪಿಸಿದ ಎಲ್ಲಾ ಯೋಜನೆಗಳು ಮುಂದೆ ರಾಷ್ಟ್ರೀಯ ಧೋರಣೆಗಳಾದವು. ಟಿ.ಎ.ಪೈಯವರನ್ನು ಒಬ್ಬ ಅಸಾಮಾನ್ಯ ಆರ್ಥಿಕ ಮುತ್ಸದ್ದಿಯೆಂದು ದೇಶ ಗುರುತಿಸಿತು. ಸರಕಾರದ ಎಲ್ಲ ಹಂತಗಳಲ್ಲಿ, ಆರ್.ಬಿ.ಐ., ಹಾಗೂ ವಿವಿಧ ಮ್ಯಾನೇಜ್‌ಮೆಂಟ್ ಸಂಸ್ಥೆಗಳಲ್ಲಿ ಅವರಿಂದ ಮಾರ್ಗದರ್ಶನಕ್ಕೆ ಅಪಾರ ಬೇಡಿಕೆ ಬಂತು. ರಾಷ್ಟ್ರೀಯ ಸಾಲ ನೀತಿ ನಿರೂಪಣೆ ಸಂಸ್ಥೆ, ಬ್ಯಾಂಕಿಂಗ್ ಕಮಿಷನ್, ಕೃಷಿ ಆಯೋಗಗಳಲ್ಲಿ ಅವರ ನಾಯಕತ್ವಕ್ಕೆ ಮನ್ನಣೆ ಸಿಕ್ಕಿತು.

## ಆಹಾರ ನಿಗಮಕ್ಕಾಗಿ ಉಚಿತ ಸೇವೆ

1964 ಜನವರಿ 1ರಂದು ಭಾರತೀಯ ಆಹಾರ ನಿಗಮವನ್ನು ತಮ್ಮ ಅಧ್ಯಕ್ಷತೆಯಲ್ಲಿ ಪ್ರಾರಂಭಿಸಿದ್ದು ಪೈಯವರ ಬದುಕಿನ ಇನ್ನೊಂದು ಅಧ್ಯಾಯ.

ಅಂದಿನ ಕೇಂದ್ರ ಆಹಾರ ಮಂತ್ರಿಗಳಾದ ಶ್ರೀ ಸಿ.ಸುಬ್ರಹ್ಮಣ್ಯಂ ಅವರ ಆಪ್ತ ಸ್ನೇಹಿತರಾದ ಪೈಗಳು ನಿಗಮವನ್ನು ಸಶಕ್ತವಾಗಿ ಮುನ್ನಡೆಸಿಕೊಂಡು ಹೋಗಬಲ್ಲರು ಎಂಬ ಆತ್ಮ ವಿಶ್ವಾಸದಿಂದ ಅವರಿಗೆ ಈ ಹೊಣೆಯನ್ನು ವಹಿಸಿದ್ದರು. ಇನ್ನೊಂದು ವಿಶೇಷವೆಂದರೆ, ಅವರು ತಮ್ಮ ಈ ಅವಧಿಯ ದುಡಿಮೆಗೆ ಸಂಬಳವನ್ನೇ ತೆಗೆದುಕೊಳ್ಳಲಿಲ್ಲ. ಭಾರತದ ಆಹಾರ ಸಮಸ್ಯೆಯನ್ನು ನೀಗಿಸುವ ನಿಟ್ಟಿನಲ್ಲಿ ರೂಪುಗೊಂಡ ಆಹಾರ ನಿಗಮವನ್ನು ತಳಮಟ್ಟದಿಂದಲೇ ಕಟ್ಟಿ ಬೆಳೆಸಬೇಕಾದ ಜವಾಬ್ದಾರಿಯನ್ನು ಪೈಗಳು ಬಹಳ ಆತ್ಮವಿಶ್ವಾಸದಿಂದ ಪ್ರಾರಂಭಿಸಿದರು. ಅದಕ್ಕೋಸ್ಕರ ದೇಶ ವಿದೇಶಗಳನ್ನು ಸುತ್ತಾಡಿದರು. ಆಹಾರ ಸಮಸ್ಯೆಯನ್ನು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಿಸಿದರು. ಕೂಲಂಕಷವಾಗಿ ಅಧ್ಯಯನ ಮಾಡಿದರು. ಒಟ್ಟಿನಲ್ಲಿ ದೇಶದಲ್ಲಿ ಹಸಿರು ಕ್ರಾಂತಿಯಾಗುವಂತೆ ಪಣತೊಟ್ಟರು. ಪೈಗಳ ದುಡಿಮೆ ಸಾರ್ಥಕವಾಯಿತು.

1966ರಲ್ಲಿ ಆಹಾರ ನಿಗಮವನ್ನು ಬಿಟ್ಟು ಮತ್ತೆ ಸಿಂಡಿಕೇಟ್ ಬ್ಯಾಂಕಿಗೆ ತೆರಳುವ ಸಮಯದಲ್ಲಿ ಅವರ ಸೇವೆಯನ್ನು ಕೊಂಡಾಡುವ ಹಿನ್ನೆಲೆಯಲ್ಲಿ ಭಾರತ ಸರಕಾರ ಒಂದು ವಿಶೇಷ ಗಜ಼ೆಟ್ ಪ್ರಕಟಣೆಯನ್ನು ಹೊರಡಿಸಿತು:

"ಭಾರತೀಯ ಆಹಾರ ನಿಗಮದ ಪ್ರಥಮ ಗೌರವ ಅಧ್ಯಕ್ಷರಾಗಿ ದುಡಿದ ಶ್ರೀ ಟಿ.ಅನಂತ ಪೈ ಅವರ ಅನುಪಮ ಸೇವೆಯನ್ನು ಭಾರತ ಸರಕಾರ ತನ್ನ ಅತೀವ ಪ್ರಶಂಸೆಯೊಂದಿಗೆ ದಾಖಲಿಸುತ್ತಿದೆ. ಅವರು ತಮ್ಮ ಹುದ್ದೆಯನ್ನು 1966 ಜನವರಿ ತಿಂಗಳ 3ರಂದು ತೆರವುಗೊಳಿಸಿರುತ್ತಾರೆ. ಸಂಸ್ಥೆಯ ಸ್ಥಾಪನೆಯ ಕಾಲದಿಂದ ಅದರ ಪ್ರಥಮ ವರ್ಷ ಪೂರ್ತಿ ಶ್ರೀ ಪೈಯವರು ಅದಕ್ಕಾಗಿ ದುಡಿಯುತ್ತಿದ್ದು, ಅವರ ಸೇವೆ ಅಪ್ಯಾಯವೂ ಅರ್ಪಣಾಭಾವದಿಂದ ಕೂಡಿದ್ದೂ ಆಗಿತ್ತು." ಆಹಾರ ನಿಗಮವನ್ನು ಕಟ್ಟಿ ಬೆಳೆಸಿದ ಶ್ರೇಯಸ್ಸಿಗೆ ಸಂದ ಗೌರವ ಅದಾಗಿತ್ತು.

## ಇನ್ನಷ್ಟು ಪ್ರಯೋಗಗಳು

1966ರಲ್ಲಿ ಭಾರತೀಯ ಆಹಾರ ನಿಗಮದಿಂದ ಹೊರಬಂದ ಹೊಸತರಲ್ಲಿ ಪೈಯವರಲ್ಲಿ ಹೊಸ ಹೊಸ ಯೋಜನೆಗಳ ಕಲ್ಪನೆ ಮೂರ್ತೀಭವಿಸಿದಂತೆ ತೋರಿತು. ಅವರ ಸೇವೆಯನ್ನು ಸಿಂಡಿಕೇಟ್ ಬ್ಯಾಂಕ್ ಸ್ವೀಕರಿಸಲು ಸನ್ನದ್ಧವಾಗಿತ್ತು.

ಅವರು ಮೊದಲು ಕೈಗೊಂಡ ಪ್ರಯೋಗವೆಂದರೆ, ಬ್ಯಾಂಕಿನಲ್ಲಿ ಮಕ್ಕಳ ಖಾತೆಯ ಆರಂಭ. ಇದರ ಮೂಲ ಉದ್ದೇಶ ಮಕ್ಕಳಲ್ಲಿ ಬ್ಯಾಂಕಿಂಗ್ ಅಭ್ಯಾಸವನ್ನು ಬೆಳೆಸುವುದಾದರೂ, ಅವರ ಮನಸ್ಸಿನಲ್ಲಿ ಉಳಿತಾಯದ ಹವ್ಯಾಸವನ್ನು ಉದ್ದೀಪನಗೊಳಿಸುವುದೂ ಆಗಿತ್ತು. ಇನ್ನೊಂದು ಪ್ರಯೋಗವೆಂದರೆ, 'ಮಹಿಳೆಯರ ಉಳಿತಾಯ ಸಪ್ತಾಹ'. ಆಶ್ಚರ್ಯವೆಂದರೆ, ಒಂದೇ ಸಪ್ತಾಹದಲ್ಲಿ ಬ್ಯಾಂಕು ಒಂದು ಲಕ್ಷ ಖಾತೆಗಳನ್ನು ಮಹಿಳೆಯರಿಂದಲೇ ತೆರೆದದ್ದು!

ಅಗ್ರಿ-ಕಾರ್ಡ್ ಸ್ಕೀಮಿನ ಅನ್ವಯ ಕೃಷಿಕರಿಗೆ ಹಣದ ರೂಪದಲ್ಲಿ ಸಾಲ ನೀಡುವ ಬದಲು ಗೊಬ್ಬರ ಮತ್ತು ಇನ್ನಿತರ ಸಾಮಗ್ರಿಗಳ ರೂಪದಲ್ಲಿ ಸಾಲ ನೀಡಲು ಸಜ್ಜಾಯಿತು. ಬ್ಯಾಂಕಿಂಗ್ ಇತಿಹಾಸದಲ್ಲಿ ಇದೊಂದು ಮಹತ್ವದ ಹೆಜ್ಜೆ.

ದಿಲ್ಲಿಯ ಸಿಂಡಿಕೇಟ್ ಬ್ಯಾಂಕಿನ ಮೂಲಕ ವಾಣಿಜ್ಯ ಮಳಿಗೆಗಳಲ್ಲಿ ನೇರ ಹಣ ಪಾವತಿಸುವ ಕ್ರಮದ ಬದಲು ಚೆಕ್‌ಗಳ ರೂಪದಲ್ಲಿ ಪಾವತಿ ಮಾಡುವ ಕ್ರಮವನ್ನು ಜಾರಿಗೆ ತಂದರು.



ದಿಲ್ಲಿಯಲ್ಲಿ ಸಿಂಡಿಕೇಟ್ ಬ್ಯಾಂಕಿನ ನೂತನ ಶಾಖೆಯ ಶುಭಾರಂಭಕ್ಕಾಗಿ ಪಯಣ ಬೆಳೆಸಿದ ಸಂದರ್ಭ

ಅಂತೆಯೇ, ಮಹಿಳೆಯರಿಗೆ ಬ್ಯಾಂಕಿಂಗ್ ಉದ್ಯೋಗದಲ್ಲಿ ಸದವಕಾಶವನ್ನು ಕಲ್ಪಿಸಿ ಕೊಡುವ ನಿಟ್ಟಿನಲ್ಲಿ ಅವರು ಕಾರ್ಯ ಪ್ರವೃತ್ತರಾದರು. ಮೊದಲ ಹೆಜ್ಜೆಯಾಗಿ ಬೆಂಗಳೂರಿನ ಶೇಷಾದ್ರಿಪುರಂನಲ್ಲಿ ಮಹಿಳೆಯರಿಂದಲೇ ನಡೆಸಲ್ಪಡುವ ಶಾಖೆಯನ್ನು ಆರಂಭಿಸಿ ಹೊಸ ಪ್ರಯೋಗ ನಡೆಸಿದರು. ಅದು ಯಶಸ್ವಿಯಾದಾಗ ಇನ್ನೂ 4 ಶಾಖೆಗಳನ್ನು ತೆರೆಯಲಾಯಿತು.

ಪೈಯವರಿಗೆ ಬ್ಯಾಂಕು ಬೆಳೆಯುವುದು, ಲಾಭಗಳಿಸುವುದಷ್ಟೇ ಮುಖ್ಯ ಉದ್ದೇಶವಾಗಿರಲಿಲ್ಲ. ಬ್ಯಾಂಕಿನ ಮೂಲಕ ಎಷ್ಟು ಜನರಿಗೆ ಯಾವ ಬಗೆಯಲ್ಲಿ ಸಹಾಯವಾಗುತ್ತದೆ ಎಂಬುದು ಮುಖ್ಯವಾಗಿತ್ತು. ಜನಕೋಟಿಯ ಅಭಿವೃದ್ಧಿಯೇ ಬ್ಯಾಂಕಿನ ಅಭಿವೃದ್ಧಿ ಎಂದು ಅವರು ಸದಾ ಕಾಲ ಹೇಳುತ್ತಲೇ ಇದ್ದರಲ್ಲದೆ ಅದನ್ನು ಕಾರ್ಯರೂಪಕ್ಕೆ ತರುತ್ತಲೂ ಇದ್ದರು. "ಬ್ಯಾಂಕಿಂಗ್ ವ್ಯವಹಾರದಲ್ಲಿ ಗ್ರಾಹಕನೇ ದೇವರು. ಆತ ದೊಡ್ಡ ಮನುಷ್ಯನಿಲ್ಲದೆ ಇರಬಹುದು. ಕೃಷಿಕನೋ, ಕೂಲಿಕಾರ್ಮಿಕನೋ, ಕಮ್ಮಾರನೋ, ನೇಕಾರನೋ, ಮೂರ್ತೆದಾರನೋ, ಮೀನುಗಾರನೋ ಇರಬಹುದು. ಅವನ ಸಮಸ್ಯೆಗಳನ್ನು ಅರಿತುಕೊಳ್ಳದೆ ವ್ಯವಹರಿಸಿದರೆ ಅದು ಬರಿಯ ವ್ಯವಹಾರವಾದೀತೇ ಹೊರತು ಸೇವೆ ಎನಿಸಲಾರದು" ಎಂಬುದು ಅವರ ಅಭಿಪ್ರಾಯವಾಗಿತ್ತು. 1964ರಲ್ಲಿ ಸಿಂಡಿಕೇಟ್ ಬ್ಯಾಂಕಿನಲ್ಲಿ ಕೃಷಿಗೆ ಆರ್ಥಿಕ ನೆರವಿನ ವಿಭಾಗವನ್ನು ಆರಂಭಿಸಿ ಕೃಷಿ ತಜ್ಞರನ್ನು ನೇಮಿಸಿದರು. ಕೃಷಿಕರ ಸಹಕಾರ ಪಡೆಯುವ ದೃಷ್ಟಿಯಿಂದ ದ.ಕ.ಕೃಷಿ ಅಭಿವೃದ್ಧಿ ಸಹಕಾರಿ ಸಂಘವನ್ನು ಸ್ಥಾಪಿಸಿದರು. ಈ ಎಲ್ಲಾ ಕಾರ್ಯಗಳಿಗೆ ರಿಸರ್ವ್ ಬ್ಯಾಂಕಿನ ಸಮ್ಮತಿ ದೊರೆಯದಿದ್ದಾಗ 'ಸಿಂಡಿಕೇಟ್ ಕೃಷಿ ಪ್ರತಿಷ್ಠಾನ' ಎಂಬ ಪ್ರತ್ಯೇಕ ಸಂಸ್ಥೆಯನ್ನೆ ಹುಟ್ಟುಹಾಕಿದರು.

ಗೋಬರ್ ಗ್ಯಾಸ್ ಸ್ಥಾವರ, ಪವರ್ ಟಿಲ್ಲರ್, ಕೀಟನಾಶಕ, ಸ್ಪ್ರೇಯರ್‌ಗಳ ಉಪಯೋಗಕ್ಕಾಗಿರುವಂಥ, ಕೋಳಿ ಸಾಕಾಣಿಕೆ ಮತ್ತು ಹೈನುಗಾರಿಕೆಗೆ ಅನುಕೂಲವಾಗುವಂಥ ಯೋಜನೆಗಳನ್ನು ಅವರು ರೂಪಿಸಿದರು. ಕೃಷಿ ಚಿಕಿತ್ಸಾಲಯ ಮತ್ತು ಅದಕ್ಕೆ ಪೂರಕವಾಗಿ 'ಕೃಷಿ ಲೋಕ' ಎಂಬ ಪತ್ರಿಕೆಯನ್ನೂ ಪ್ರಾರಂಭಿಸುವಂತಾಯಿತು.

## ಸಿಂಡಿಕೇಟ್ ಮಾದರಿ ಬ್ಯಾಂಕ್

1968ರಲ್ಲಿ ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾಗಿ ಪೈಯವರು ನೇಮಕಗೊಂಡಾಗ ಅವರು ಅದಾಗಲೇ ದೇಶದ ಅತ್ಯಂತ ನುರಿತ ಅರ್ಥಶಾಸ್ತ್ರಜ್ಞರಾಗಿ ಪ್ರಸಿದ್ಧರಾಗಿದ್ದರು. ಈವೊತ್ತು ವಿಶ್ವವಿಖ್ಯಾತ ಸಂಸ್ಥೆಯಾಗಿ ರೂಪುಗೊಂಡ ರಿಲಯನ್ಸ್ ಸಂಸ್ಥೆಯ ಅಭಿವೃದ್ಧಿ ಚಟುವಟಿಕೆಗಳಿಗೆ ಪ್ರಾರಂಭದಲ್ಲಿ ನೀಡಿದ ಸಹಾಯ ಹಸ್ತ ಅವಿಸ್ಮರಣೀಯ. ಅದೊಂದು ದಿಟ್ಟ ಹೆಜ್ಜೆ. ಅವರ ಹೊಸ ಪ್ರಯೋಗಗಳಿಗೆ ಮೊದಲಲ್ಲಿ ಆಕ್ಷೇಪಣೆಯ ರಾಗ ಎಳೆದ ಸರಕಾರ, ರಿಸರ್ವ್ ಬ್ಯಾಂಕ್ –ಎಲ್ಲವೂ ಮುಂದೆ ಆ ಪ್ರಯೋಗಗಳನ್ನೆ ತನ್ನ ಧೋರಣೆಗಳನ್ನಾಗಿ ಸ್ವೀಕರಿಸುವಂತಾಯಿತು. ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಶಾಖೆಗಳನ್ನು ತೆರೆದದ್ದೆ ತಪ್ಪಾಯಿತೆಂದು ಆಕ್ಷೇಪಣೆಯನ್ನು ಹೇಳಿದ ರಿಸರ್ವ್ ಬ್ಯಾಂಕ್, ಮುಂದೆ ನಗರ ಪ್ರದೇಶಗಳಲ್ಲಿ ಶಾಖೆಗಳನ್ನು ತೆರೆಯಬೇಕಿದ್ದಲ್ಲಿ ಇಂತಿಷ್ಟು ಗ್ರಾಮೀಣ ಶಾಖೆಗಳು ಅನಿವಾರ್ಯವೆನ್ನುವ ಶರತ್ತು ಹಾಕಿದಾಗ, ಸಿಂಡಿಕೇಟ್ ಬ್ಯಾಂಕಿನ ಹಾದಿಯನ್ನೆ ಇತರ ಬ್ಯಾಂಕುಗಳು ತುಳಿಯುವಂತಾಯಿತು. ಮೊರಾರ್ಜಿ ದೇಸಾಯಿಯವರು ದೇಶದ ಅರ್ಥ ಮಂತ್ರಿಗಳಾಗಿದ್ದಾಗ ಡಾ. ಪಣಂದೀಕರ್ ಆಯೋಗವನ್ನು ನೇಮಿಸಿದಾಗ, ಸಿಂಡಿಕೇಟ್ ಬ್ಯಾಂಕಿಗೆ ಮಾದರಿ ಬ್ಯಾಂಕ್ ಎಂಬ ವಿಶೇಷ ಅಭಿನಂದನೆ ಲಭಿಸಿತು.

ಈ ಎಲ್ಲಾ ಹಿನ್ನೆಲೆಯಲ್ಲಿ, ಟಿ.ಎ.ಪೈಯವರು ನ್ಯಾಶನಲ್ ಕ್ರೆಡಿಟ್ ಕೌನ್ಸಿಲ್‌ಗೆ ಬ್ಯಾಂಕಿಂಗ್ ಕ್ಷೇತ್ರದ ಏಕೈಕ ಸದಸ್ಯರಾಗಿ ಆಯ್ಕೆಯಾದರು. ಬ್ಯಾಂಕಿಂಗ್ ಕಮಿಷನ್‌ಗೂ ಸದಸ್ಯರಾದರು. ಕೇಂದ್ರ ಸರಕಾರದ ರಾಷ್ಟ್ರೀಯ ಕೃಷಿ ಆಯೋಗದ ಸದಸ್ಯರಾಗಿಯೂ ದುಡಿಯುವಂತಾಯಿತು. ಮಾತ್ರವಲ್ಲ ಆ ಸಂಸ್ಥೆಯ ಆರ್ಥಿಕ ಸಮಿತಿಯ ಅಧ್ಯಕ್ಷರಾಗಿಯೂ ಆರಿಸಲ್ಪಟ್ಟರು. ಅವರ ಶಿಫಾರಸ್ಸಿನ ಅನ್ವಯ ರಾಷ್ಟ್ರೀಯ ಕೃಷಿ ಗ್ರಾಮಾಭಿವೃದ್ಧಿ ಬ್ಯಾಂಕು (ನಬಾರ್ಡ್)ಸ್ಥಾಪಿಸಲ್ಪಟ್ಟಿತು. 1969 ಬ್ಯಾಂಕಿಂಗ್ ಇತಿಹಾಸದಲ್ಲಿ ಒಂದು ಪ್ರಶಸ್ತ ಅಧ್ಯಾಯ. ಕೇಂದ್ರ ಸರಕಾರ ದೇಶದ 14ಬ್ಯಾಂಕುಗಳನ್ನು ರಾಷ್ಟ್ರೀಕರಿಸಿತು. ಸಿಂಡಿಕೇಟ್ ಬ್ಯಾಂಕು ಅವುಗಳಲ್ಲಿ ಒಂದಾದಾಗ ಪೈಗಳು ಅದನ್ನು ಸಂತೋಷದಿಂದಲೇ ಸ್ವಾಗತಿಸಿದರು. ನಿಜಹೇಳಬೇಕೆಂದರೆ, ರಾಷ್ಟ್ರೀಕರಣದ ಮೂಲ ಪ್ರೇರಣೆ ಸಿಂಡಿಕೇಟ್ ಬ್ಯಾಂಕಿನ ಮಾದರಿ ಚಟುವಟಿಕೆಗಳಿಂದಾದುದು ಎಂಬುದನ್ನು ಮರೆಯುವಂತಿಲ್ಲ.

## ಜೀವ ವಿಮೆಗೆ ಹೊಸ ಆಯಾಮ



1970ರ ಮಾರ್ಚ್ 2ರಂದು ಪೈಯವರನ್ನು ಭಾರತೀಯ ಜೀವ ವಿಮಾ ನಿಗಮದ ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಅವರ ಮುಂದಾಳ್ತನದಲ್ಲಿ ನಿಗಮ ತನ್ನ ಸಂಪನ್ಮೂಲಗಳನ್ನು ಜನತೆಯ ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸುವ ನಿಟ್ಟಿನಲ್ಲಿ ಅತ್ಯಂತ ಪರಿಣಾಮಕಾರೀ ರೀತಿಯಲ್ಲಿ ಬಳಸುವ ತೀರ್ಮಾನ ಕೈಗೊಂಡಿತು. ಅದಕ್ಕೂ ಮೊದಲೇ ಸಾಮಾಜಿಕ ಯೋಜನೆಯುಡಿಯುಲ್ಲಿ ವಸತಿ, ಕೃಷಿ, ಸಾರಿಗೆ, ನಗರ ಮತ್ತು ಗ್ರಾಮೀಣ ನೀರು ಸರಬರಾಜು, ಒಳಚರಂಡಿ ಯೋಜನೆ ಹಾಗೂ ಗ್ರಾಮೀಣ ವಿದ್ಯುದೀಕರಣಗಳಿಗೆಲ್ಲ ನಿಗಮ ತನ್ನ ಸಂಪತ್ತನ್ನು ತೊಡಗಿಸಲು ಪ್ರಾರಂಭಿಸಿದ್ದರೂ ಅದು ಸೂಕ್ತ ಕ್ರಮದಲ್ಲಿ ವಿನಿಯೋಗವಾಗುತ್ತಿದ್ದಿರಲಿಲ್ಲ. ಈ ಕಾರ್ಯಕ್ರಮಗಳಿಗೆ ಹೊಸ ಆಯಾಮ ನೀಡುವ ಅಭಿಯಾನವನ್ನು ಪೈಯವರು ಕೈಗೊಂಡರು. ಅದರಲ್ಲಿ ಮುಖ್ಯವಾಗಿ ವಸತಿ ಯೋಜನೆಗಳು. ದೇಶದ ವಸತಿ ಯೋಜನೆಗಳ ಅನುಷ್ಠಾನದಲ್ಲಿ ಜೀವವಿಮಾ ನಿಗಮದ ಪಾಲು ಅನನ್ಯವಾದುದು.

ಅಧಿಕಾರ ವಹಿಸಿಕೊಂಡ ಮೂರೇ ತಿಂಗಳಲ್ಲಿ ನೌಕರರ ಸಮಸ್ಯೆಗಳಿಗೆ ಮಂಗಳ ಹಾಡಿದರು. ವ್ಯವಹಾರದ ಅಭಿವೃದ್ಧಿಯ ಜತೆಗೆ ಪಾಲಿಸಿದಾರರ



ಜೀವವಿಮಾ ನಿಗಮದ ಮೊದಲ ಮಹಿಳಾ ಏಜೆಂಟ್‌ನ ನೇಮಕ

ಸೇವಾ ದಕ್ಷತೆಗೆ ಸೂಕ್ತ ಕ್ರಮಗಳನ್ನು ಆರೋಪಿಸಿದರು. ಅವರ ಅನುಕೂಲಕ್ಕಾಗಿ ಕೆಲವು ನಿಯಮಗಳನ್ನು ಸಡಿಲುಗೊಳಿಸಿದರು. ಪಾಲಿಸಿದಾರರು ತೀರಿಕೊಂಡಾಗ ಅವರ ವಾರಸುದಾರರಿಗೆ ಸಲ್ಲಬೇಕಾದ ಹಣವನ್ನು ಅತಿ ಕ್ಷಿಪ್ರ ಗತಿಯಲ್ಲಿ ಸಂದಾಯವಾಗುವಂತೆ ನಿಯಮಗಳನ್ನು ಉದಾರೀಕರಿಸಿದರು. ಅತೀ ಹೆಚ್ಚು ಕ್ಲೈಮನ್ನು ಸಂದಾಯ ಮಾಡಿದವರಿಗೆ ಸೂಕ್ತ ಬಹುಮಾನವನ್ನು ಘೋಷಿಸಿ ಪ್ರೋತ್ಸಾಹಿಸಿದರು.



ಪ್ರಧಾನಿಯವರನ್ನು ಕರೆತಂದ ಶ್ರೀಪೈ

ನಿಗಮದ ಶತಮಾನೋತ್ಸವವನ್ನು ಆಚರಿಸುವಂಥ ಸುಯೋಗ ಟಿ.ಎ.ಪೈಯವರ ಅಧಿಕಾರದ ಅವಧಿಯಲ್ಲಿ ಸಂಭವಿಸಿತು. 1970ರ ಡಿಸೆಂಬರ್ 9ರಂದು ದೆಹಲಿಯಲ್ಲಿ ನಡೆದ ಸಮಾರಂಭವನ್ನು ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ಉದ್ಘಾಟಿಸಿದರು. ದೇಶದ ಜೀವವಿಮೆಯ ನೂರು ವರ್ಷಗಳ ಇತಿಹಾಸವನ್ನು ದಾಖಲಿಸುವ 'ಸಾಗಾ ಆಫ್ ಸೆಕ್ಯೂರಿಟಿ' ಎಂಬ ಗ್ರಂಥವನ್ನು ಈ ಸಂದರ್ಭದಲ್ಲಿ ಬಿಡುಗಡೆ ಮಾಡಲಾಯಿತು.

ಸಾಕ್ಷ್ಯಚಿತ್ರವನ್ನೂ ವಿಶೇಷ ಅಂಚೆ ಚೀಟಿಯನ್ನೂ ಬಿಡುಗಡೆಮಾಡಲಾಯಿತು. ಈ ಸಂದರ್ಭದಲ್ಲಿ ಪೈಯವರು ಮಾಡಿದ ಭಾಷಣ ಅಮೋಘವೆನಿಸಿತು.

"ನಮ್ಮ ದೇಶದಲ್ಲಿ ಸ್ವಲ್ಪವೇ ಮಂದಿ ಶ್ರೀಮಂತರು ಮಾತ್ರ ಅನುಭವಿಸುತ್ತಿರುವ ಈ ಸವಲತ್ತುಗಳನ್ನು ಕೋಟ್ಯಾಂತರ ಸಾಮಾನ್ಯ ಜನರೂ ಪಡೆಯುವಂತೆ ಮಾಡಲು ನಾವು ಹೊಸ ಪ್ರಯೋಗಗಳನ್ನೂ ಹೊಸ ಸಂಶೋಧನೆಗಳನ್ನೂ ಮಾಡಬೇಕಾಗಿದೆ. ದೇಶವು ಬೆಳೆಯಬೇಕಾದರೆ, ಬಲಿಷ್ಠವಾಗಬೇಕಾದರೆ ಇಂಥ ಕ್ರಮಗಳು ಅನಿವಾರ್ಯ. ಈ ಉದ್ದೇಶವಿಟ್ಟುಕೊಂಡು ಇನ್ನು ಮುಂದೆ ಜೀವವಿಮಾ ನಿಗಮವು ವ್ಯಕ್ತಿಗಳಿಗೆ ಹೆಚ್ಚು ಹೆಚ್ಚು ವಿಮೆ

ನೀಡುವುದಷ್ಟೇ ಜನಸಮೂಹಗಳಿಗೂ ವಿಮಾ ರಕ್ಷಣೆ ನೀಡಲು ದೃಢವಾದ ಹೆಜ್ಜೆಗಳನ್ನು ಇಡಲಿದೆ. ಈ ರೀತಿ ಜನಸಾಮಾನ್ಯರಿಗೆ ಜೀವವಿಮೆಯ ಸಂದೇಶವನ್ನು ತಲುಪಿಸಬೇಕಾದರೆ ಅವರ ಭಾಷೆಯಲ್ಲೇ ವ್ಯವಹರಿಸುವುದು ಉಚಿತ. ಅದಕ್ಕಾಗಿ ರಾಷ್ಟ್ರದ ಜನರಾಡುವ ಹದಿನಾಲ್ಕು ಭಾಷೆಗಳನ್ನೂ ನಾವು ಸಮರ್ಪಕವಾಗಿ ಬಳಸಲಿದ್ದೇವೆ."

ಈ ಮಾತುಗಳಲ್ಲಿ ಪೈಯವರಲ್ಲಿದ್ದ ಜನಪರ ಕಾಳಜಿ ಎಷ್ಟಿತ್ತೆಂದರೆ ತಮ್ಮ ಸಂಕಲ್ಪದಂತೆ ಅವರು ಸಮೂಹ ವಿಮೆ ಯೋಜನೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದರು. ಶತಮಾನೋತ್ಸವ ವರ್ಷದಲ್ಲಿ ರೈತರಿಗಾಗಿ 'ಶತಮಾನೋತ್ಸವ ಪಾಲಿಸಿ' ಎಂಬ ಹೊಸ ಬಗೆಯ ಪಾಲಿಸಿಯನ್ನು ರೂಪಿಸಲಾಯಿತು. ರೈತರ ಬಗ್ಗೆ ಪೈಯವರಿಗಿದ್ದ ಅಪಾರ ಕಾಳಜಿಯೇ ಇದಕ್ಕೆ ಮೂಲ ಪ್ರೇರಣೆಯಾಗಿತ್ತು.



ಈ ಸಂದರ್ಭದಲ್ಲಿ ಶ್ರೀಮತಿ ಗಾಂಧಿಯವರು ಆಡಿದ ಮಾತುಗಳನ್ನು ಪೈಯವರು ಮಂತ್ರಮುಗ್ಧರಾಗಿ ಆಲಿಸಿದರು.

ಎರಡು ವರ್ಷಗಳ ಪೈಯವರ ಆಡಳಿತ ಕಾಲದಲ್ಲಿ ಜೀವವಿಮಾ ನಿಗಮ ಹೊಸ ಎತ್ತರಕ್ಕೆ ಏರಿತು. ಹೊಸ ವಿಸ್ತಾರ ಪಡೆಯಿತು. ನೂತನ ಆಯಾಮಗಳನ್ನು ಹೊಂದಿತು. ನವೀನ ರೀತಿಯ ಪ್ರತಿಷ್ಠೆ ಪಡೆಯಿತು. ಹೊಸ ಯೋಜನೆಗಳಿಗೆ ನಾಂದಿ ಹಾಡಿತು.



ರಾಷ್ಟ್ರಾಧ್ಯಕ್ಷರಿಂದ ಪದ್ಮಭೂಷಣ ಪ್ರಶಸ್ತಿ

ಪೈಯವರ ಈ ಅಸಾಧಾರಣ ಆಡಳಿತ ಸಾಮರ್ಥ್ಯ ಭಾರತ ಮಟ್ಟದಲ್ಲಿ ಗುರುತಿಸಿಕೊಳ್ಳುವ ರೀತಿಯಲ್ಲಿ ಸಾಗಿತು. ಜೀವವಿಮೆಗಾಗಿ ಸಂದ ಸೇವೆಯನ್ನು ಪರಿಗಣಿಸಿ 1972ರಲ್ಲಿ ಸರಕಾರ ಅವರಿಗೆ ಪದ್ಮಭೂಷಣ ಪ್ರಶಸ್ತಿಯನ್ನು ಘೋಷಿಸಿತು. ತಮಗೆ ಸಂದ ರಾಷ್ಟ್ರಮಟ್ಟದ ಈ ಪ್ರಶಸ್ತಿಯನ್ನು ಅವರು ಅಷ್ಟೇ ವಿನಮ್ರತೆಯಿಂದ ಸ್ವೀಕರಿಸಿದರು–

"ನಮ್ಮಂಥವರಿಗೆ ಈ ಅವಕಾಶ ಅದೃಷ್ಟವಶಾತ್ ಅಥವಾ ಆಕಸ್ಮಿಕವಾಗಿ ದೊರಕಿದೆಯೇ ಹೊರತು ಇತರ ಸಹಸ್ರಾರು ಜನರಿಗಿಂತ ನಾವು ಹೆಚ್ಚು ಸಮರ್ಥರು ಎಂದಲ್ಲ. ಆದರೆ ನಾವು ಈ ಅಧಿಕಾರ ಅಥವಾ ಅವಕಾಶವನ್ನು ಹೇಗೆ ಉಪಯೋಗಿಸಿದ್ದೇವೆ, ಅದರಿಂದ ದೇಶಕ್ಕಾಗಿ ಏನು ಮಾಡಿದ್ದೇವೆ, ಏನು ನೀಡಿದ್ದೇವೆ ಎನ್ನುವ ಪ್ರಶ್ನೆಗಳಿಗೆ ಉತ್ತರಿಸಬೇಕಾಗಿದೆ. ನಾನು ಮಾಡಿರಬಹುದಾದ ಅಲ್ಪಸ್ವಲ್ಪ ಕೆಲಸಗಳ ಬಗ್ಗೆಯೂ ಮೆಚ್ಚುಗೆ ವ್ಯಕ್ತಪಡಿಸುತ್ತಿರುವುದು ಜನರ ದೊಡ್ಡ ಗುಣ. ಅದಕ್ಕಾಗಿ ನಾನು ಆಭಾರಿಯಾಗಿದ್ದೇನೆ."

ಜೀವವಿಮಾ ನಿಗಮದಿಂದ ಎರಡು ವರ್ಷಗಳ ಬಳಿಕ 27.3.1972ರಂದು ಅವರು ನಿರ್ಗಮಿಸಿದರು. ಕೇಂದ್ರ ಸರಕಾರಕ್ಕೆ ಅವರಂಥ ಸಮರ್ಥ ನಾಯಕರ ಅವಶ್ಯಕತೆ ಇತ್ತು.

## ಕೈಬೀಸಿ ಕರೆದ ಸಚಿವ ಪದ

1972ರಲ್ಲಿ ಟಿ.ಎ.ಪೈಯವರು ತಮ್ಮ ಬದುಕಿನ ಮತ್ತೊಂದು ಮಜಲಿಗೆ ಏರಿದರು. ಅವರ ಘನತೆ ಗೌರವಕ್ಕೆ ತಕ್ಕ ಹಾಗೆ ಕೇಂದ್ರ ಸರಕಾರದ ರೇಲ್ವೇ ಸಚಿವ

ಪದವಿ ಅವರನ್ನು ಕೈಬೀಸಿ ಕರೆಯಿತು. ಶ್ರೀಮತಿ ಇಂದಿರಾ ಗಾಂಧಿಯವರಿಗೆ ರೇಲ್ವೇ ಮಂತ್ರಿ ಸ್ಥಾನಕ್ಕೆ ಸಮರ್ಥ ವ್ಯಕ್ತಿಯೊಬ್ಬರು ಬೇಕಾಗಿದ್ದರು. ಭಾರತೀಯ ಜೀವವಿಮಾ ನಿಗಮದಲ್ಲಿ ಅವರ ಕಾರ್ಯ ವೈಖರಿ, ಆಡಳಿತ ಸಾಮರ್ಥ್ಯ ಮತ್ತು ನಾಯಕತ್ವದ ವರ್ಚಸ್ಸಿನ ಪರಿಚಯವಿದ್ದ ಶ್ರೀಮತಿ ಗಾಂಧಿಯವರು ಹೆಚ್ಚು ತಡಮಾಡದೆ ತಮ್ಮ ಮಂತ್ರಿ ಮಂಡಲಕ್ಕೆ ಅವರನ್ನು ಸೇರಿಸಿಕೊಂಡರು. ಅವರು ರಾಜ್ಯಸಭೆಗೆ ಚುನಾಯಿತರಾಗಿ ರೇಲ್ವೇ ಸಚಿವರಾಗಿ ಪದಗ್ರಹಣ ಮಾಡಿದರು.

## ಬದುಕಿನ ಸುವರ್ಣ ವರ್ಷಗಳು

ನಿಜಹೇಳಬೇಕೆಂದರೆ, 1972–77ರ ಅವಧಿ ಪೈಯವರ ಬದುಕಿನ ಸುವರ್ಣ ವರ್ಷಗಳು. ಅವರು ಈ ಮೊದಲು ಯಶಸ್ಸು ಮತ್ತು ಜನಪ್ರಿಯತೆಯ ಸವಿಯನ್ನು ಉಂಡಿದ್ದರೂ, ಅಧಿಕಾರದ ರುಚಿಯನ್ನು ಸವಿದಿರಲಿಲ್ಲ. ಅದೂ ನಿಜವಾದ ಅಧಿಕಾರ. ಸಿಂಡಿಕೇಟ್ ಬ್ಯಾಂಕಿನ ಜನರಲ್ ಮ್ಯಾನೇಜರ್, ಮ್ಯಾನೇಜಿಂಗ್ ಡೈರೆಕ್ಟರ್ ಹಾಗೂ ಕಸ್ಟೋಡಿಯನ್ ಪದಗಳಲ್ಲಿ ಅವರಿಗೆ ಒಂದು ಬಗೆಯ ಅಧಿಕಾರದ ಅನುಭವವಾಗಿತ್ತೇನೋ ನಿಜ. ಭಾರತೀಯ ಆಹಾರ ನಿಗಮ ಮತ್ತು ಭಾರತೀಯ ಜೀವವಿಮಾ ನಿಗಮಗಳ ಅಧ್ಯಕ್ಷ ಸ್ಥಾನದಿಂದ ಇನ್ನೊಂದು ತೆರನಾದ ಅಧಿಕಾರದ ಅನುಭವವಾಗಿತ್ತು. ಇದೀಗ ಪ್ರಧಾನಿ ಇಂದಿರಾ ಗಾಂಧಿಯವರ ಮಂತ್ರಿ ಮಂಡಲದಲ್ಲಿ ಪೂರ್ಣ ಪ್ರಮಾಣದ ಸ್ವತಂತ್ರ ಕ್ಯಾಬಿನೆಟ್ ದರ್ಜೆಯ ಮಂತ್ರಿ ಪದವಿ! ಯಾವುದನ್ನು ಕಲ್ಪಿಸಿಕೊಳ್ಳುವುದಕ್ಕೂ ಅಸಾಧ್ಯವೋ ಅದನ್ನು ಅವರು ಸಾಧಿಸಿದ್ದರು.



ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರೊಂದಿಗೆ ಗಹನ ಚರ್ಚೆಯಲ್ಲಿ ಶ್ರೀ ಪೈಯವರು



ರೇಲ್ವೇ ಮಂತ್ರಿಯಾಗಿ ಅಧಿಕಾರ ಸ್ವೀಕಾರ

ರೇಲ್ವೇ ಮಂತ್ರಿಯಾಗಿ ಅಧಿಕಾರ ವಹಿಸಿಕೊಳ್ಳುವ ಸಮಯಕ್ಕೆ ಇಲಾಖೆ ಗೊಂದಲಗಳ ಗೂಡಾಗಿತ್ತು. ಅವರಿಗಿಂತ ಹಿಂದಿನ ಮಂತ್ರಿಗಳ ವಿವಾದಾಸ್ಪದ ಧೋರಣೆಗಳಿಂದಾಗಿ ಅನೇಕ ಕ್ಲಿಷ್ಟ ಸಮಸ್ಯೆಗಳನ್ನು ಪೈಗಳು ಪರಿಹರಿಸಬೇಕಾಗಿತ್ತು. ಅನೇಕ ವರ್ಷಗಳಿಂದ ನೆನೆಗುದಿಗೆಗೆ ಬಿದ್ದಿದ್ದ ಬಹಳಷ್ಟು ಸಮಸ್ಯೆಗಳನ್ನು ಅವರು ಶೀಘ್ರದಲ್ಲೇ ಪರಿಹರಿಸಿದರು. ನೌಕರರಲ್ಲಿ ಹೊಸ ಹುಮ್ಮಸ್ಸನ್ನು ತುಂಬಿದರು. ರೇಲ್ವೇ ಇಲಾಖೆಗೆ ಆದಾಯದ ಪ್ರಮುಖ ಮೂಲವಾದ ಸರಕು ಸಾಗಾಣಿಕೆಗೆ ಪ್ರಥಮ ಪ್ರಾಶಸ್ತ್ಯ ನೀಡಿದರು.

ಹಾಗೆಂದು ಪ್ರಯಾಣಿಕ ರೈಲಿಗೂ ಅಷ್ಟೇ ಪ್ರಾಮುಖ್ಯತೆ ಲಭ್ಯವಾಯಿತು. ಅವರು ಹೋದಲೆಲ್ಲ ಅವರಿಗೆ ಪ್ರಚಾರ, ಜನಪ್ರಿಯತೆ ತಂದುಕೊಟ್ಟಿತು.



ಮುಂಬಯಿ ನಗರದ ಸಬರ್ಬನ್ ರೈಲುಗಳಲ್ಲೂ ಸಾದಾ ಪ್ರಯಾಣಿಕರಂತೆ, ಅಂತಹ ಪ್ರಯಾಣಿಕರ ಜೊತೆಯಲ್ಲೇ ಪ್ರಯಾಣ ಬೆಳೆಸಿ, ಹೊಸ ಮನ್ವಂತರಕ್ಕೆ ಅವರು ನಾಂದಿ ಹಾಡಿದರು. ಅವರ ಈ ಸರಳತೆಯನ್ನು ಗುರುತಿಸುವಂತೆ ನಾಡಿನ ಪತ್ರಿಕೆಗಳಲ್ಲಿ ಅಂತಹ ಫೋಟೋಗಳು ಅಚ್ಚಾದವು.

## ಕೊಂಕಣ ರೈಲಿನ ಕನಸು

ಹೊಸ ರೈಲು ಮಾರ್ಗಗಳ ರಚನೆಗೆ, ಅದರಲ್ಲೂ ಕೊಂಕಣ ರೇಲ್ವೇ ಯೋಜನೆಗೆ ತಾತ್ವಿಕ ನೆಲೆಯಲ್ಲಿ ಸರಕಾರದ ಅನುಮೋದನೆ ಲಭ್ಯವಾಗುವಂತೆ ಅದನ್ನು ಸಶಕ್ತವಾಗಿ ಪ್ರತಿಪಾದಿಸಿದರು-ಪೈಯವರು. 22 ನವೆಂಬರ್ 1972ರಂದು ಸಂಸತ್ತಿನಲ್ಲಿ ಅವರು ಪ್ರತಿಪಾದಿಸಿದ ವಿಚಾರ ವೈಖರಿ ಈ ತೆರನಾಗಿತ್ತು:

"........ಯೋಜಿತ ಅಭಿವೃದ್ಧಿಯಿದ್ದಲ್ಲಿ ರೇಲ್ವೇ ಪೂರಕವಾಗಿ ಕೆಲಸಮಾಡುತ್ತದೆ. ಉದಾಹರಣೆಗೆ ಕೊಂಕಣ ರೇಲ್ವೇಯನ್ನೇ ತೆಗೆದುಕೊಳ್ಳಿ. ನಾನು ವೈಯಕ್ತಿಕವಾಗಿ ಇದರ ಬಗ್ಗೆ ಆಸಕ್ತನಾಗಿದ್ದೇನೆ. ನಾನು ಭಾರತದ ರೇಲ್ವೇ ನಕ್ಷೆಯನ್ನು ನೋಡುವಂಥ ವೇಳೆ ಈ 'ಗ್ಯಾಪ್'ನ್ನು ಯಾಕೆ ಹಾಗೆಯೇ ಬಿಡಬೇಕು ಅಂತ ಚಿಂತಿಸುತ್ತಿರುತ್ತೇನೆ. ನಾನು ಮಹಾರಾಷ್ಟ್ರ ಸರಕಾರಕ್ಕೆ ನಿವೇದನೆ ಸಲ್ಲಿಸಿದ್ದೇನೆ-ಏನಂದ್ರೆ, ಅವರು ರತ್ನಗಿರಿ ಜಿಲ್ಲೆಯಲ್ಲಿ ಗೊಬ್ಬರ ಅಥವಾ ಅಲ್ಯುಮಿನಿಯಂ ಕಾರ್ಖಾನೆಯೊಂದನ್ನು ಸ್ಥಾಪಿಸಲು ಸಾಧ್ಯವೆ? ಅಂತ. ಈ ರೀತಿಯ ಪೂರಕ ಯೋಜನೆಯಿಂದ ಕೆಲಸ ಸುಗಮವಾಗುತ್ತದೆ. ಕೊಂಕಣ ರೇಲ್ವೇ ಬಂದೇ ಬರುತ್ತದೆ ಎಂಬುದಂತೂ ಖಾತ್ರಿ. ಮಂಗಳೂರಿನಿಂದ ಮತ್ತು ಆಪಾಟದಿಂದ -ಎರಡೂ ಕಡೆಗಳಿಂದ ಕೆಲಸ ಪ್ರಾರಂಭಿಸಬೇಕಾಗಿದೆ. ಇದಕ್ಕೆ 20ವರ್ಷಗಳ ಕಾಲಾವಕಾಶವಾದರೂ ಬೇಕಾಗುತ್ತದೆ.

"ಇದನ್ನು ಎಷ್ಟು ಬೇಗನೆ ಸಾಧ್ಯವೋ ಅಷ್ಟು ಬೇಗನೇ ಮಾಡಿ ಮುಗಿಸುವ ಆಶಯ ನನ್ನದು. ಅಂತೆಯೇ ಯಾರೆಲ್ಲ ಸದಸ್ಯರು ಈ ಯೋಜನೆಯ ಪ್ರಾಮುಖ್ಯತೆಯನ್ನು ಕಂಡುಕೊಂಡಿರುತ್ತಾರೆಯೋ, ಅವರೆಲ್ಲ ನನಗೆ ಸಹಾಯ ಮಾಡಬೇಕು- ಯಾಕಂದರೆ ಇದು ಆರ್ಥಿಕವಾಗಿ ಫಲಪ್ರದವಾಗಬೇಕಾಗಿದ್ದು ಯಾವುದೇ ರೀತಿಯಲ್ಲಿ ನಷ್ಟದ ದಾರಿಗೆ ಎಡೆಮಾಡಿಕೊಡುವಂತೆ ಆಗಬಾರದು."

ಕೊಂಕಣ ರೇಲ್ವೇಯ ಅವರ ಕನಸು ಅವರ ಕಾಲಾವಧಿಯಲ್ಲಿ ಕನಸಾಗಿಯೇ ಉಳಿಯಿತು. ಏಳು ತಿಂಗಳ ಅವಧಿಯಲ್ಲಿ ಪೈಯವರ ಖಾತೆ ಬದಲಾಯಿತು. ಅವರು ಭಾರೀ ಉದ್ದಿಮೆಗಳ ಮಂತ್ರಿ ಸ್ಥಾನವನ್ನು ವಹಿಸಿಕೊಳ್ಳಬೇಕಾಯಿತು. ನಷ್ಟದಲ್ಲಿ ನಡೆಯುತ್ತಿದ್ದ ಅನೇಕ ಭಾರೀ ಉದ್ಯಮಗಳನ್ನು ಸರಿದಾರಿಗೆ ತರುವ ಮತ್ತಷ್ಟು ಜವಾಬ್ದಾರಿಯನ್ನು ಅವರ ಮೇಲೆ ಹೊರಿಸಲಾಯಿತು. ಮಹತ್ತರ ಆತ್ಮ ವಿಶ್ವಾಸದಿಂದ ಅವರು ಈ ಕಾರ್ಯವನ್ನು ಹೆಗಲೇರಿಸಿಕೊಂಡರು.

'ಇಂಥ ಸಮರ್ಥ ನಾಯಕರನ್ನು ನೀವೇಕೆ ಅರ್ಥ ಮಂತ್ರಿಯನ್ನಾಗಿ ಮಾಡಬಾರದು?' ಎಂದು ಯಾರೋ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರಿಗೆ ಪ್ರಶ್ನಿಸಿದಾಗ, ಅವರು ನೀಡಿದ ಉತ್ತರ ಮಾರ್ಮಿಕವಾಗಿತ್ತು-

'ಭಾರೀ ಉದ್ಯಮ ಖಾತೆಯನ್ನು ನೋಡಿಕೊಳ್ಳುವುದಕ್ಕೆ ಇನ್ನೋರ್ವ ಟಿ.ಎ.ಪೈಯವರನ್ನು ನಾನು ಎಲ್ಲಿಂದ ಕರೆತರಲಿ!'

## ಕೈಗಾರಿಕಾ ಕ್ಷೇತ್ರಕ್ಕೆ ನವಚೈತನ್ಯ

ಭಾರತದ ಕೈಗಾರಿಕಾ ವಲಯಕ್ಕೆ ನೂತನ ದಿಕ್ಕನ್ನು ತೋರಿಸಿ, ಅದರ ಪ್ರಗತಿಗೆ ವಿಶೇಷ ವೇಗೋತ್ಕರ್ಷವನ್ನು ನೀಡಿದವರು ಟಿ.ಎ.ಪೈ. ನುರಿತ ಬ್ಯಾಂಕರರೂ, ಖ್ಯಾತ ಅರ್ಥಶಾಸ್ತ್ರಜ್ಞರೂ ಆಗಿದ್ದ ಅವರಿಗೆ ಕೇಂದ್ರ ಕೈಗಾರಿಕಾ ಸಚಿವರಾಗಿ ಮತ್ತು ಕೇಂದ್ರ ಘನ ಉದ್ದಿಮೆಗಳ ಸಚಿವರಾಗಿ ಕೈಗಾರಿಕಾ ಕ್ಷೇತ್ರಕ್ಕೆ ಹೊಸ ಆಯಾಮವನ್ನು ಒದಗಿಸುವ ಅಪಾರ ಅವಕಾಶ ಒದಗಿ ಬಂದುದು ವಿಶೇಷವೆನ್ನಬೇಕು. ಕೈಗಾರಿಕಾ ಖಾತೆಯನ್ನು ವಹಿಸಿಕೊಳ್ಳುವ ಮೊದಲೇ ಪೈಯವರಿಗೆ ಭಾರತದ ಕೈಗಾರಿಕಾ ವಲಯದ ಮತ್ತು ಅದರ ಸಮಸ್ಯೆಗಳ ಕುರಿತಾದ ತಿಳುವಳಿಕೆ ಇದ್ದವು. ಮಾತ್ರವಲ್ಲ ಕೈಗಾರಿಕಾ ಕ್ಷೇತ್ರದಲ್ಲಿ ಕೈಗೊಳ್ಳಬೇಕಾದ ಪರಿಹಾರೋಪಾಯಗಳನ್ನು ಕುರಿತಂತೆ ಸ್ವತಃ ಅಧ್ಯಯನವನ್ನು ಕೂಡಾ ಅವರು ಕೈಗೊಂಡಿದ್ದರು. ಸ್ವತಃ ಆರ್ಥಿಕ ವಿಶ್ಲೇಷಕರಾಗಿ ಅನುಭವವಿದ್ದ ಅವರು ಕೈಗಾರಿಕೋದ್ಯಮದಲ್ಲಿ ಹೆಚ್ಚಿನ ಆಸಕ್ತಿ ವಹಿಸಲು ಕಾರಣವಾಯಿತು.

ಸಿಂಡಿಕೇಟ್ ಬ್ಯಾಂಕಿನ ಆಡಳಿತ ನಿರ್ದೇಶಕರಾಗಿ ಮತ್ತು ತರುವಾಯ ಅಧ್ಯಕ್ಷರಾಗಿ ಬ್ಯಾಂಕಿನ ಶಾಖೆಗಳನ್ನು ಸಂದರ್ಶಿಸುತ್ತಿದ್ದ ಅವರು ಶಾಖೆಗಳ ಕಾರ್ಯವ್ಯಾಪ್ತಿಯಲ್ಲಿ ಬರುತ್ತಿದ್ದ ವಿವಿಧ ಉದ್ದಿಮೆಗಳನ್ನು ಕೂಡಾ ಅವರು

ಸಂದರ್ಶಿಸುತ್ತಿದ್ದರು. ಅವುಗಳ ಕಾರ್ಯಕ್ಷಮತೆಗೆ ಸಂಬಂಧಿಸಿದ ಮಾಹಿತಿಗಳನ್ನು ಸಂಗ್ರಹಿಸುತ್ತಿದ್ದರು. ಮಾತ್ರವಲ್ಲದೆ ಆ ಉದ್ದಿಮೆಗಳ ಸಾಲದ ಬೇಡಿಕೆಗಳ ಕುರಿತಾಗಿಯೂ ಅಧ್ಯಯನ ಮಾಡುತ್ತಿದ್ದರು. ಸಣ್ಣ ಸಣ್ಣ ಗುಡಿಕೈಗಾರಿಕೆಗಳಿಂದ ಹಿಡಿದು ರಿಲಾಯನ್ಸ್ ನಂಥ ಬೃಹತ್ ಉದ್ಯಮಗಳಿಗೂ ಸಾಲ ನೀಡಿ ಅನುಭವವಿದ್ದ ಪೈಯವರು, ಕೈಗಾರಿಕೆಗಳ ಕುರಿತಾಗಿ ಬಹಳಷ್ಟು ಅರಿತುಕೊಂಡಿದ್ದರು ಮಾತ್ರವಲ್ಲ ಕೈಗಾರಿಕಾ ಕ್ಷೇತ್ರ ಮತ್ತು ಕೈಗಾರಿಕೆಗಳ ವಿಷಯಗಳಿಗೆ ಸಂಬಂಧಿಸಿದಂತೆ ಸಂಪೂರ್ಣ ಪ್ರಭುತ್ವವನ್ನು ಹೊಂದಿದ್ದರು. ಕೈಗಾರಿಕಾ ಕ್ಷೇತ್ರದ ಕುರಿತಾದ ತಾವು ಹೊಂದಿದ್ದ ವಿಶೇಷ ಮಾಹಿತಿ ಮತ್ತು ಪರಿಣತಿ ಕೈಗಾರಿಕಾ ಸಚಿವರಾದ ಬಳಿಕ ಪೈಯವರಿಗೆ ಬಹಳಷ್ಟು ನೆರವಿಗೆ ಬಂದಿತು. ಕೇಂದ್ರ ಉದ್ಯಮ ಸಚಿವರಾದ ಬಳಿಕ ಇಡೀ ಕೈಗಾರಿಕಾ ರಂಗವನ್ನು ತಾವೇ ಅಳವಡಿಸಿಕೊಂಡಿದ್ದ ನೀಲಿ ನಕಾಶೆ ಮತ್ತು ಯೋಜನೆಗಳಿಗೆ ಅನುಗುಣವಾಗಿ ಪ್ರಗತಿಪಥದಲ್ಲಿ ಒಯ್ಯಲು ಸಾಧ್ಯವಾಯಿತು.

## ಘನ ಉದ್ದಿಮೆಗಳ ಮಂತ್ರಿ

ಘನ ಉದ್ಯಮಗಳ ಕುರಿತಾಗಿ ಆಳವಾಗಿ ಅಧ್ಯಯನ ನಡೆಸಿದ್ದ ಪೈಯವರಿಗೆ ಈ ಗುರುತರ ಜವಾಬ್ದಾರಿಯ ನಿರ್ವಹಣೆ ಅಷ್ಟೇನೂ ದುಸ್ತರದ ಕೆಲಸವಾಗಿರಲಿಲ್ಲ. ಆಗ ಘನ ಉದ್ದಿಮೆಗಳು ನಷ್ಟದಲ್ಲಿದ್ದವು. ಅವುಗಳನ್ನು ಲಾಭದಾಯಕ ಉದ್ದಿಮೆಗಳನ್ನಾಗಿ ಪರಿವರ್ತಿಸುವುದು ಒಂದು ಸವಾಲಾಗಿತ್ತು. ಯಾವುದೇ ಜವಾಬ್ದಾರಿಯನ್ನು ವಹಿಸಿಕೊಂಡರೂ ಅದನ್ನು ಸಶಕ್ತವಾಗಿ ನಿರ್ವಹಿಸುವ ಚಾಕಚಕ್ಯತೆ ಅವರಿಗಿತ್ತು. ಹಿಂದಿನ ವರ್ಷ 19ಕೋಟಿ ರೂಪಾಯಿ ನಷ್ಟ ತೋರಿಸಿದ್ದ 14 ಭಾರೀ ಉದ್ದಿಮೆಗಳು ಒಂದೇ ವರ್ಷದಲ್ಲಿ 65ಕೋಟಿ ರೂಪಾಯಿ ಲಾಭಗಳಿಸಿದವು. ಇಡೀ ಕೈಗಾರಿಕಾ ರಂಗವನ್ನು ತಾನೇ ಅಳವಡಿಸಿಕೊಂಡಿದ್ದ ನೀಲಿ ನಕಾಶೆ ಮತ್ತು ಯೋಜನೆಗಳಿಗನುಗುಣವಾಗಿ ಪ್ರಗತಿ ಪಥದಲ್ಲಿ ಒಯ್ಯಲು ಅವರಿಗೆ ಸಾಧ್ಯವಾಯಿತು.

ಔದ್ಯಮಿಕ ಕ್ಷೇತ್ರದ ನಿರ್ವಹಣೆ ಮತ್ತು ಆಡಳಿತದ ಕುರಿತಾಗಿ ಪೈಯವರಿಗೆ ತಮ್ಮದೇ ಆದ ಅನುಭವ, ನಿಲುವು ಮತ್ತು ಅಭಿಪ್ರಾಯಗಳಿದ್ದವು. ಸಾರ್ವಜನಿಕ ರಂಗದ ಉದ್ದಿಮೆಗಳ ನಿರ್ವಹಣೆಯನ್ನು ಸಮರ್ಪಕವಾಗಿ ನಡೆಸಿದರೆ ಅವುಗಳನ್ನು ಲಾಭದಾಯಕ ಸಂಸ್ಥೆಗಳನ್ನಾಗಿ ಬೆಳೆಸಲು ಸಾಧ್ಯವಿದೆ ಮಾತ್ರವಲ್ಲ ಅವುಗಳನ್ನು ಬಡತನ ನಿವಾರಣೆಯ ಅಸ್ತ್ರಗಳನ್ನಾಗಿ ಕೂಡಾ ಬಳಸಬಹುದು ಎಂಬುದು ಪೈಯವರ ದೃಢವಾದ ನಂಬಿಕೆಯಾಗಿತ್ತು.

ಸಾರ್ವಜನಿಕ ರಂಗದ ಉದ್ದಿಮೆಗಳ ಹಿರಿಯ ಅಧಿಕಾರಿಗಳು ಸಂಸತ್ತಿನಲ್ಲಿ ಆಗಾಗ ಟೀಕೆಗಳಿಗೆ ಗುರಿಯಾಗುತ್ತಿದ್ದರು. ಅವರಿಗೆ ಸರಕಾರದಿಂದ ಯಾವ ತೆರನಾದ ಬೆಂಬಲವೂ ದೊರೆಯುತ್ತಿರಲಿಲ್ಲ. ಯಾವ ಬಗೆಯ ಪ್ರೋತ್ಸಾಹ ಪ್ರೇರಣೆಗಳೂ ಇಲ್ಲದೆ ಆ ಹಿರಿಯ ಅಧಿಕಾರಿಗಳು ತಮ್ಮ ಸಂಸ್ಥೆಗಳಲ್ಲಿ ನಿರಪೇಕ್ಷರಾಗಿ ಕಾಲಕಳೆಯುತ್ತಿದ್ದರು. ಇದನ್ನು ಬಲ್ಲ ಪೈಯವರು ತನ್ನ ಸಚಿವಾಲಯದ ಅಧೀನದಲ್ಲಿದ್ದ ಎಲ್ಲ ಸಂಸ್ಥೆಗಳ ಮುಖ್ಯಸ್ಥರೊಂದಿಗೆ ಮತ್ತು ಹಿರಿಯ ಅಧಿಕಾರಿಗಳೊಂದಿಗೆ ಆತ್ಮೀಯ ಸಂಬಂಧ ಬೆಳೆಸಿದರು. ಸಮಸ್ಯೆಗಳ ಕುರಿತಂತೆ ಅವರೊಂದಿಗೆ ಚರ್ಚಿಸಿದರು. ಅವರಿಗೆಲ್ಲ ಸೂಕ್ತ ಮಾರ್ಗದರ್ಶನ ನೀಡಿದರು. ಎಲ್ಲಾ ಸಾರ್ವಜನಿಕ ಉದ್ದಿಮೆಗಳ ಕಾರ್ಯಕ್ಷಮತೆಯನ್ನು ವೃದ್ಧಿಸುವ ದೃಷ್ಟಿಯಿಂದ ಸರ್ವ ಪ್ರಯತ್ನ ಕೈಗೊಂಡರು. ಎಲ್ಲ ಸಂಸ್ಥೆಗಳಲ್ಲಿ ಅಧಿಕಾರಿಗಳ ಮತ್ತು ನೌಕರರ ನಡುವಿನ ಸೌಹಾರ್ದ ಭಾವನೆಯನ್ನು ಮೂಡಿಸಲು ಕ್ರಮ ಕೈಗೊಂಡರು.

ಕೇಂದ್ರ ಉದ್ಯಮ ಸಚಿವರಾಗಿ ಅವರು ನಾಯಕತ್ವ ನೀಡಿದ ಅವಧಿ ನಿಜಕ್ಕೂ ಕೈಗಾರಿಕಾ ಕ್ಷೇತ್ರದ ಸ್ವರ್ಣ ಯುಗವಾಗಿತ್ತು ಎಂದರೂ ತಪ್ಪಾಗಲಿಕ್ಕಿಲ್ಲ. ಭಾರತೀಯ ಕೈಗಾರಿಕಾ ಕ್ಷೇತ್ರಕ್ಕೆ ಹೊಸ ಧೋರಣೆ ಮತ್ತು ನೀತಿಗಳ ರೂಪದಲ್ಲಿ ಹಾಗೂ ಪರವಾನಗಿಗಳ ನೀಡಿಕೆಯ ಉದಾರೀಕರಣದಲ್ಲಿ ಹೊಸ ಮನ್ವಂತರಕ್ಕೆ ನಾಂದಿ ಹಾಡಿದ ಪೈಯವರ ಈ ಮಹತ್ತರ ಕೊಡುಗೆ ದೇಶ ಎಂದೆಂದಿಗೂ ಸ್ಮರಿಸುವಂಥದ್ದು.

ಸಂಸದೀಯ ಪಟುವಾಗಿ ಪೈಯವರು ತೋರಿದ ಅಸಾಧಾರಣ ಕಾರ್ಯಕ್ಷಮತೆ ಅನನ್ಯವಾದುದು. ಸಂಸತ್ತಿನಲ್ಲಿ ನಿರ್ದಿಷ್ಟವಾಗಿ, ಕರಾರುವಾಕ್ಕಾಗಿ ಅವರು ಮಂಡಿಸಿದ ವಾದ, ಚರ್ಚೆ ಎಲ್ಲವೂ ವಿಶಿಷ್ಟವಾಗಿದ್ದವು. 1972–77ರ ಅವಧಿಯ ಅವರ ಸಾರ್ವಜನಿಕ ಬದುಕು ಜನರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುವಂತಾಯಿತು.

## ವೈಯಕ್ತಿಕ ಬದುಕು

ಪ್ರಾರಂಭದ ದಿನಗಳಿಂದಲೂ ಪೈಯವರ ವೈಯಕ್ತಿಕ ಬದುಕು ನಿರಾಳವಾಗಿರಲಿಲ್ಲ. ಪ್ರತಿಷ್ಠಿತ ಕುಟುಂಬದಿಂದ ಬಂದ, ತಾವೇ ಬಯಸಿ ಮದುವೆಯಾದ, ಸಂಗೀತ ಸಹಪಾಠಿ, ಅವರ ಮೊದಲ ಪತ್ನಿ ಪ್ರೇಮಾ ಜೊತೆಗೆ

ಹೊಂದಾಣಿಕೆ ಆಗಲಿಲ್ಲ. ಪೈಯವರು ತಮ್ಮ ಮೊದಲ ಪತ್ನಿಯವರಿಂದ ವಿಚ್ಛೇದನ ಬಯಸಿದರು. ಮುಂಬಯಿಯ ಅವರ ಮಿತ್ರರಾದ ರಜನಿ ಪಟೇಲ್ ಉಡುಪಿಯ ನ್ಯಾಯಾಲಯದಲ್ಲಿ ವಾದಿಸಿದರು. 22 ಜುಲೈ 1972ರಂದು ಪ್ರೇಮಾ ಜತೆಗಿನ ಸಂಬಂಧ ಕಡಿಯಿತು. ಅಗಲುವಿಕೆಯ ಆ ಕ್ಷಣಗಳು ಹೃದಯಂಗಮವಾಗಿದ್ದವು ಎನ್ನಲಾಗುತ್ತಿದೆ. ಪ್ರೇಮಾ ನೇರವಾಗಿ ಪೈಯವರ ಬಳಿಗೆ ಸಾರಿ, ಅವರ ಪಾದಗಳನ್ನು ಮುಟ್ಟಿ 'ನನ್ನ ತಪ್ಪಾಯಿತು' ಎಂದು ಉಸುರಿದರಂತೆ. 'ದೇವರು ನಿನಗೆ ಒಳ್ಳೆಯದು ಮಾಡಲಿ' ಎಂದಷ್ಟೇ ಪೈಯವರಿಗೆ ಪ್ರತ್ಯುತ್ತರವಾಗಿ ಹೇಳಲು ಸಾಧ್ಯವಾಯಿತೆಂದು ಹೇಳುತ್ತಾರೆ.



ಅದಾಗಲೇ ಅವರ ಎರಡನೇ ಪತ್ನಿ ವಸಂತಿ ಮಂಜೇಶ್ವರ್, ಪೈಯವರ ಬದುಕಿನಲ್ಲಿ ಪ್ರವೇಶಿಸಿದ್ದರು. ರೇಲ್ವೇ ಸಚಿವರಾಗಿ ಪದಗ್ರಹಣ ಮಾಡುವ ವೇಳೆಗೆ ಇನ್ನೂ ವಿಚ್ಛೇದನ ಪತ್ರಗಳು ಪೈಯವರ ಕೈಸೇರಿರಲಿಲ್ಲ. ಹಾಗಾಗಿ ವಸಂತಿಯವರ ಜತೆಗಿನ ಅವರ ಸಂಬಂಧ ಊರ್ಜಿತವಾಗಿರಲಿಲ್ಲ. 1972 ಸಪ್ಟೆಂಬರ್ ತಿಂಗಳ ಮೊದಲ ವಾರದಲ್ಲಿ ವಸಂತಿ–ಅನಂತ್ ತಿರುಪತಿಯಲ್ಲಿ ತಮ್ಮ ಆತ್ಮೀಯ ಗೆಳೆಯರಾದ ಶ್ರೀ ಧೀರೂಭಾಯಿ ಅಂಬಾನಿ ದಂಪತಿ ಮತ್ತು ಸರ್ ಶಾಂತಿದಾಸ್ ಅಸ್ಕುರನ್ ಅವರ ಸೊಸೆ ಚಂದ್ರಿಕಾ ಶಹಾ ಸಮಕ್ಷಮದಲ್ಲಿ ವಿವಾಹವಾದರು. ವಸಂತಿಯವರು ಪೈಯವರಿಗೆ ಹೇಳಿ ಮಾಡಿಸಿದ ಯೋಗ್ಯ ಸಹಧರ್ಮಿಣಿಯಾದರು. ಪೈಯವರ ಎಲ್ಲಾ ಕಾರ್ಯಕಲಾಪಗಳಲ್ಲಿ ವಸಂತಿಯವರು ಸಕ್ರಿಯವಾಗಿ ಪಾಲ್ಗೊಂಡು, ಅವರಿಗೆ ಪ್ರೀತಿಯ ಜತೆಗೆ ಶಕ್ತಿಯನ್ನೂ ತುಂಬಿದರಲ್ಲದೆ, ಪೈಯವರ ಬಲಗೈಯಾಗಿ ದುಡಿದರು.

## ತುರ್ತುಪರಿಸ್ಥಿತಿಯ ನಂತರದ ದಿನಗಳು

1975ರಲ್ಲಿ ದೇಶದಲ್ಲಿ ತುರ್ತುಪರಿಸ್ಥಿತಿಯನ್ನು ಹೇರಲಾಯಿತು. ತದನಂತರದ 1977ರ ಮಹಾಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಹೀನಾಯವಾದ ಸೋಲನ್ನು ಅನುಭವಿಸಿದರೂ ಪೈಯವರು ಉಡುಪಿ ಕ್ಷೇತ್ರದಿಂದ ಸಂಸತ್

ಸದಸ್ಯರಾಗಿ ಆಯ್ದು ಬಂದರು. ಸಂಸತ್ತಿನಲ್ಲಿ ಕಾಂಗ್ರೆಸ್ ವಿರೋಧ ಪಕ್ಷವಾಯಿತು. ಪೈಯವರು ವಿರೋಧ ಪಕ್ಷದಲ್ಲಿದ್ದುಕೊಂಡೇ ಸಮರ್ಥವಾಗಿ ತಮ್ಮ ಪಾತ್ರವನ್ನು ನಿರ್ವಹಿಸಿದರು. ಅಂದಿನ ರಾಜಕೀಯ ಪರಿಸ್ಥಿತಿ ಅವರನ್ನು ಜನತಾಪಕ್ಷವನ್ನು ಸೇರುವಂತೆ ಪ್ರೇರೇಪಿಸಿತು. ಮತ್ತೊಮ್ಮೆ ಅವರು ರೇಲ್ವೇ ಸಚಿವರಾದರು. ಶ್ರೀಚರಣ್ ಸಿಂಗ್ ಅವರ ಈ ಸಮ್ಮಿಶ್ರ ಸರಕಾರ ಹೆಚ್ಚು ದಿನ ಅಧಿಕಾರದಲ್ಲಿ ಉಳಿಯಲಿಲ್ಲ.

ಮುಂದಿನ ದಿನಗಳು ಪೈಯವರ ಬದುಕನ್ನು ಬೇರೆಯೇ ದಿಶೆಗೆ ಕರೆದೊಯ್ದಿತು. 1980ರ ಮಹಾಚುನಾವಣೆಯಲ್ಲಿ ಅವರು ಪರಾಜಿತರಾದರು. ತಮ್ಮ ಹುಟ್ಟು ಜಿಲ್ಲೆಗೆ ತಮ್ಮ ಮುಂದಿನ ಬದುಕನ್ನು ಮುಡಿಪಾಗಿಸುವಂತೆ ನಿರ್ಧಾರ ಕೈಗೊಂಡರು. ಅವರ ಹಿರಿಯರ ಕಾರ್ಯಚಟುವಟಿಕೆಗಳ ಆಡುಂಬೊಲವಾಗಿದ್ದ ಮಣಿಪಾಲಕ್ಕೆ ಅವರು ಹಿಂದಿರುಗಿದರು. ತಾವು ಕಟ್ಟಿಸಿದ ಮನೆ 'ವಿನಾಯಕ ವಿಹಾರ' ಅವರ ತಂಗುದಾಣವಾಯಿತು. ಒಂದು ಬಗೆಯಲ್ಲಿ ಅವರು ರಾಜಕೀಯ ಸನ್ಯಾಸವನ್ನು ಕೈಗೊಂಡರು ಎಂದರೂ ಸರಿಹೋದೀತು. ಮಣಿಪಾಲದಲ್ಲಿ ಇಂದಿಗೂ ಪ್ರಗತಿಪಥದಲ್ಲಿ ಮುನ್ನಡೆ ಸಾಧಿಸಿರುವ 'ಭಾರತ ವಿಕಾಸ ಟ್ರಸ್ಟ್' ಮುಂತಾದ ಸಂಸ್ಥೆಗಳು ಅವರ ಗ್ರಾಮೋದ್ಯೋಗಗಳ ಬಗೆಗಿನ ಕಾಳಜಿ, ಕಳಕಳಿಗಳಿಗೆ ರಹದಾರಿಗಳಾದವು; ಜೀವಂತ ನಿದರ್ಶನಗಳಾದವು.

ಟಿ.ಎ. ಪೈಯವರ ತಂದೆಯವರ ನಿಕಟವರ್ತಿಗಳಾದ ಶ್ರೀ ಎ.ಜೆ ಅಲ್ಸೆ ಅನಂತ್ ಅವರ ಏಳ್ಗೆಯನ್ನು ಹತ್ತಿರದಿಂದ ಕಂಡವರು. 'ಪರಮಾತ್ಮನ ಅನುಜ್ಞೆಯಿಲ್ಲದೆ ಒಂದು ತೃಣ ಕೂಡಾ ಅಲ್ಲಾಡದು' ಎನ್ನುವ ಉದ್ಗಾರವನ್ನು ಪೈಯವರಿಗೆ ಅನ್ವಯಿಸುತ್ತಾ, ಅವರ ಆಧ್ಯಾತ್ಮಿಕ ಅವಲಂಬನೆ ಕುರಿತು ಅಲ್ಸೆಯವರು ಹೇಳುತ್ತಿದ್ದರು. ಗಣಪತಿ ದೇವರ ಅತೀವ ಭಕ್ತರಾಗಿದ್ದ ಅನಂತ್ ಅವರ ಸಂಗ್ರಹದಲ್ಲಿ 600ಕ್ಕೂ ಮಿಕ್ಕು ಗಣೇಶ ವಿಗ್ರಹಗಳಿದ್ದವು. ಶೃಂಗೇರಿ ಶ್ರೀ ಶಾರದಾ ಪೀಠದ ಜಗದ್ಗುರುಗಳು ನೀಡಿದ ಗಣೇಶ ಸ್ತೋತ್ರ, ಲಲಿತಾ ಸಹಸ್ರನಾಮ ಮತ್ತು ದೇವಿ ಸ್ತೋತ್ರಗಳನ್ನು ಅವರು ಸದಾ ಪಾರಾಯಣ ಮಾಡುತ್ತಿದ್ದರು.

ಭಗವಾನ್ ಶ್ರೀ ಸತ್ಯಸಾಯಿ ಬಾಬಾ ಅವರ ಅನನ್ಯ ಭಕ್ತರಾಗಿದ್ದ ಪೈಯವರು, ಯಾವುದೇ ಮಹತ್ವದ ನಿರ್ಣಯ ತೆಗೆದುಕೊಳ್ಳುವ ಸಂದರ್ಭಗಳಲ್ಲಿ ಬಾಬಾ ಅವರ ದರ್ಶನ ಪಡೆದು ತೀರ್ಮಾನ ಕೈಗೊಳ್ಳುತ್ತಿದ್ದರು. 1980ರ

ಲೋಕಸಭೆಯ ಮಹಾಚುನಾವಣೆಗೆ ಮುನ್ನ ಪೈಯವರು ಶ್ರೀ ಬಾಬಾ ಅವರ ದರ್ಶನ ಪಡೆದಿದ್ದರು. ಮಂಗಳೂರು ಕ್ಷೇತ್ರದಿಂದ ಚುನಾವಣೆಯಲ್ಲಿ ಸ್ಪರ್ಧಿಸುವಂತೆ ಸ್ವಾಮಿ ಅನುಗ್ರಹಿಸಿದ್ದರಂತೆ. ಆದರೆ ವಿಧಿಲಿಖಿತ ಬೇರೆಯೇ ಇದ್ದಿತು.

## ಮಹಾ ಪ್ರಸ್ಥಾನ



ಎಳೆಯ ಪ್ರಾಯದಲ್ಲಿ
ಡಾ.ಪೈಯರವರ ಜತೆಗೆ
ಸಮಾರಂಭವೊಂದರಲ್ಲಿ

29 ಮೇ 1981 ರಂದು ತೀವ್ರ ಹೃದಯಾಘಾತದಿಂದ ಪೈಗಳು ತೀರಿಕೊಂಡರು. ಇಡೀ ದೇಶ ಈ ಧೀಮಂತ ನಾಯಕನ ಅಗಲಿಕೆಗೆ ಕಣ್ಣೀರು ಮಿಡಿಯಿತು. ಇದೇ ದಿನ ಎರಡು ವರ್ಷಗಳ ಹಿಂದೆ ತಮ್ಮ ಪ್ರೀತಿಯ ಚಿಕ್ಕಪ್ಪ ಡಾ.ಟಿ.ಎಂ.ಎ.ಪೈಯವರು ಸ್ವರ್ಗಸ್ಥರಾಗಿದ್ದರು. ಆ ಪುಣ್ಯ ತಿಥಿಯಂದೇ ಟಿ.ಎ.ಪೈಯವರೂ ಇಹಲೋಕ ತ್ಯಜಿಸುವಂಥಾದದ್ದು ಯೋಗಾಯೋಗವೆಂದರೂ ಸರಿಹೋದೀತು. ಈ ಇಬ್ಬರ ಸ್ಮೃತಿ ದಿನವನ್ನು ಒಂದೇ ದಿನ ಆಚರಿಸುವಂತಾದುದು ಈ ನಾಡಿನ ಪುಣ್ಯ ವಿಶೇಷವೆನ್ನುವಂತಾಯಿತು.



ಟಿ.ಎ.ಪೈಯವರ ಬದುಕಿನ ಅಂತಿಮ 15 ದಿನಗಳ ದಿನಚರಿ: (ಡಾ.ಎಂ.ವಿ.ಕಾಮತ್ ಅವರ ಗ್ರಂಥ 'ದಿ ಇನ್ನೊವೇಟಿವ್ ಬ್ಯಾಂಕರ್'ನಲ್ಲಿ ನಮೂದಿಸಲಾದ ದಾಖಲೆಯ ಆಧಾರ:–ಶ್ರೀಮತಿ ವಸಂತಿ ಪೈಯವರು ಹೇಳಿದಂತೆ)

**ಮೇ 15:** ಶ್ರೀಮತಿ ವಸಂತಿ ಪೈಯವರು ಬುದ್ಧಿಮಾಂದ್ಯ ಮಕ್ಕಳ ಸಲುವಾಗಿ ಅವರ ಹೆತ್ತವರು

ಮತ್ತು ಅಧ್ಯಾಪಕರಿಗೋಸ್ಕರ ಕಾರ್ಯಾಗಾರವೊಂದನ್ನು ಆಯೋಜಿಸಿದ್ದರು. ದೇಶಾದ್ಯಂತದಿಂದ ಸುಮಾರು 200 ಅಧ್ಯಾಪಕರು ಸೇರಿದ್ದರು. ಅಂದು ಕೊನೆಯ ದಿನ. ಪೈಯವರು ಆ ಅಧ್ಯಾಪಕರನ್ನು ಉದ್ದೇಶಿಸಿ 80ನಿಮಿಷಗಳ ಭಾಷಣ ನೀಡಿದರು.

**ಮೇ 16:** ಪೈಯವರು ಶ್ರೀ ಸತ್ಯ ಸಾಯಿ ಬಾಬಾ ಅವರನ್ನು ಭೇಟಿಮಾಡುವ ಪ್ರಯುಕ್ತ ಬೆಂಗಳೂರಿಗೆ ತೆರಳಿದರು. ಅಧ್ಯಾಪಕ ಮತ್ತು ವಿದ್ಯಾರ್ಥಿಗಳ ಒಂದು ಕೂಟದಲ್ಲೂ ಅವರು ಭಾಗವಹಿಸಬೇಕಿತ್ತು. ಅನಂತರ ಮಿತ್ರರಾದ ಶ್ರೀ ಬಿ.ಡಿ. ಜತ್ತಿ, ಗವರ್ನರ್ ಗೋವಿಂದ ನಾರಾಯಣ್, ಶ್ರೀ ಪಿ. ಚಂದ್ರಕಾಂತ್ ನಾಯಕ್ ಮತ್ತು ಶ್ರೀ ದೇವರಾಜ್ ಅರಸ್ ಅವರನ್ನು ಭೇಟಿಮಾಡಿದರು. ಮಣಿಪಾಲಕ್ಕೆ 18ರಂದು ಹಿಂದಿರುಗಿದರು.

**ಮೇ 18:** ಸಂಜೆ ಮಣಿಪಾಲದ ಪೆರಂಪಳ್ಳಿ ಗ್ರಾಮದಲ್ಲಿ ನಿವೇಶನವೊಂದನ್ನು ನೋಡಲು ಹೋದರು. ಅಲ್ಲಿ ತಾವು ಪ್ರಾರಂಭಿಸಿದ 'ಭಾರತ್ ವಿಕಾಸ್ ಟ್ರಸ್ಟ್'ನ ಅಂಗವಾಗಿ ಹೈನುಗಾರಿಕೆಯ ಸಂಶೋಧನೆ, ಒಣ ಬೇಸಾಯ ಮತ್ತು ಅಂಗವಿಕಲ ಮಕ್ಕಳಿಗೋಸ್ಕರ ಮನೆಯೊಂದನ್ನು ಸ್ಥಾಪಿಸಲು ಉದ್ದೇಶಿಸಿದ್ದರು. ಆ ನಿವೇಶನದಲ್ಲಿ ಬಾವಿ ತೋಡಿಸಿದಾಗ ಪವಾಡ ಸದೃಶ ರೀತಿಯಲ್ಲಿ 14ಅಡಿ ಆಳದಲ್ಲೇ ನೀರು ಸಿಕ್ಕು ಅದೊಂದು ಅದೃಷ್ಟವೆಂದು ಪರಿಗಣಿಸಿದರು.

**ಮೇ 19:** ಗ್ರಾಮೀಣ ಅಭಿವೃದ್ಧಿಯ ಅಂಗವಾಗಿ ಅವರು ರೂಪಿಸಿದ ಯೋಜನೆಯ ಪ್ರಕಾರ ಅತ್ಯಂತ ಒಳಪ್ರದೇಶದ ಹಳ್ಳಿಗಳಲ್ಲಿ ಪ್ರವಾಸ ಕೈಗೊಂಡರು. ಅಂದು 60 ಹಳ್ಳಿಗಳಿಗೆ ಭೇಟಿ ನೀಡಬೇಕೆಂದಿದ್ದ ಕಾರಣ ಬಹಳ ಮುಂಜಾನೆಯೆ ಎದ್ದು ಹೊರಟಿದ್ದರು. ಶಿಸ್ತುಬದ್ಧ ರೀತಿಯಲ್ಲಿ ಆ ಯೋಜನೆಯನ್ನು ಆಯೋಜಿಸಿದ್ದು ಸಂಬಂಧಿಸಿದ ಎಲ್ಲ ಅಭ್ಯಾಗತರಿಗೆ ಮುಂಚಿತವಾಗಿ ತಿಳಿಸಿದ್ದರು. ಕಾರನ್ನು ಸ್ವತಃ ಚಾಲನೆ ಮಾಡಿ, ಹಿಂದಿರುಗುವಾಗ ರಾತ್ರಿಯಾಗಿತ್ತು.

**ಮೇ 20:** ವಸಂತಿಯುವರ ಜತೆಗೂಡಿ ಕೈತೋಟದಲ್ಲಿ ಕೆಲಸ ಮಾಡಿದರು. ಪೆರಂಪಳ್ಳಿಯಲ್ಲಿ ತೋಟಗಾರಿಕೆಯನ್ನು ಆಯೋಜಿಸುವ ಕುರಿತು ಚರ್ಚಿಸಿದರು. ಇದ್ದಕ್ಕಿದ್ದಂತೆ, ವಸಂತಿಯುವರಲ್ಲಿ, ಕೇಳಿದರು– 'ಟ್ರಸ್ಟ್‌ನ ಬಳಕೆಗೆ ನಿನ್ನ ಚಿನ್ನಾಭರಣಗಳನ್ನು ಕೊಡುತ್ತೀಯಾ?' ವಸಂತಿ ಒಪ್ಪಿದರು. ಮಣಿಪಾಲದಲ್ಲಿ ಅದಕ್ಕೆ ತಕ್ಕ ಕ್ರಯ ಸಿಗದು ಎಂಬ ಕಾರಣದಿಂದ ಮುಂಬೈಗೆ

ಜೂನ್ ಒಂದರಂದು ಒಯ್ದು ಮಾರಲು ತೀರ್ಮಾನಿಸಿದರು. ನಾಲ್ಕೈದು ಆಭರಣಗಳನ್ನು ಹೊರತುಪಡಿಸಿ – ವಸಂತಿಯವರ ಮಂಗಳ ಸೂತ್ರ , ಒಂದು ರುದ್ರಾಕ್ಷಿ ಮಾಲೆ, ಗೆಳೆಯ ಶ್ರೀ ಡಿ.ಪಿ.ಧರ್ ಉಡುಗೊರೆಯಾಗಿ ನೀಡಿದ ಎರಡು ಸರ ಮತ್ತು ಒಂದು ಉಂಗುರ ಹಾಗೂ ಭಗವಾನ್ ಬಾಬಾ ಅವರು ನೀಡಿದ ಒಂದು ಹವಳದ ಗಣೇಶ ಮತ್ತು ವಜ್ರದ ಉಂಗುರ– ಮಿಕ್ಕೆಲ್ಲ ಆಭರಣಗಳನ್ನು ವಿಕ್ರಯಿಸಲು ತೀರ್ಮಾನಿಸಿದರು.

**ಮೇ 21:** ವಸಂತಿಯವರು ಅಂದು ಚೈನೀಸ್ ಅಡುಗೆ ತಯಾರಿಸಿದರು. ಮಧ್ಯಾಹ್ನ ಅವರನ್ನು ನೋಡಲು ಸೊಸೆಯಂದಿರು ಆಗಮಿಸಿದರು. ಅವರಿಗೆಲ್ಲ ಶ್ರೀ ರಾಮಕೃಷ್ಣ ಪರಮಹಂಸರ ಪ್ರಖ್ಯಾತ ನೀತಿಕಥೆಯೊಂದನ್ನು (ಮಗು–ತಾಯಿ–ಬೆಲ್ಲ ತಿನ್ನುವ ಚಟವನ್ನು ಬಿಡಿಸಿದ್ದು) ಹೇಳಿದರು. ನೀತಿಯನ್ನು ಬೋಧಿಸಿದಾಗ ಅವರೆಲ್ಲ ಕಿಲಕಿಲನೆ ನಕ್ಕರು. ಸಂಜೆ ಇನ್ನೋರ್ವ ಪುಟ್ಟ ಸೊಸೆ, ಶೈಲಾ ಬಂದಳು. ಮೇ 30ರ ಅವಳ ಹನ್ನೊಂದನೇ ಹುಟ್ಟುಹಬ್ಬಕ್ಕೆ ಬರಲೇಬೇಕೆಂದು ಹಠಹಿಡಿದಳು. ಎರಡು ವರ್ಷಗಳ ಹಿಂದೆ ಅಜ್ಜ ಡಾ.ಟಿ.ಎಂ.ಎ.ಪೈಯವರು ತೀರಿಕೊಂಡಿದ್ದರಿಂದ ತನ್ನ ಹುಟ್ಟುಹಬ್ಬವನ್ನು ಆಚರಿಸಲು ಸಾಧ್ಯವಾಗದ್ದನ್ನು ಅವಳು ಹೇಳಿ ಬೇಸರಪಟ್ಟಳು. ಅವಳಿಗೆ ಹನ್ನೊಂದು ಗುಲಾಬಿಗಳನ್ನು ಆ ದಿನ ಕಳುಹಿಸಲು ಜ್ಞಾಪಿಸಬೇಕೆಂದು ವಸಂತಿಯವರಿಗೆ ಅನಂತ್ ಹೇಳಿದರು. 'ಯಾಕೆ ಕಳುಹಿಸಬೇಕು? ನಾವು ಆ ದಿನ ಬರ್ತ್‌ಡೇಗೆ ಹೋಗ್ತೀವಲ್ಲ?' ಅಂದರೆ, ಅವರು ಮುಗುಳ್ನಕ್ಕರು. ಅದಕ್ಕೂ ಮುಂಚೆ 29ರಂದು ತಾನು ಈ ಇಹಲೋಕವನ್ನೇ ಬಿಟ್ಟು ತೆರಳುತ್ತೇನೆ ಎಂದು ಅವರಿಗೆ ಮೊದಲೇ ತಿಳಿದಿತ್ತೆ?



**ಮೇ 22:** ಹಾಲು ಉತ್ಪಾದಕರ ಸಹಕಾರಿ ಸಂಘದ ಅಧಿಕಾರಿಗಳೊಂದಿಗೆ ಕೆಲವು ಸಮಯ ಕಳೆದರು. ಬಿಸಿನೆಸ್ ಮ್ಯಾನೇಜ್‌ಮೆಂಟ್ ಸಂಬಂಧವಾಗಿ ಬಂದ ಡಾ.ಎಂ.ಶ್ರೀನಿವಾಸನ್ ಅವರೊಂದಿಗೆ ಸ್ವಲ್ಪ ಸಮಯ ಸಾಗಿತು. ಮಿತ್ರರಾದ ಶ್ರೀ ವಿ.ಎಸ್.ಆಚಾರ್ ಜತೆಗೆ ವಿಚಾರ ವಿನಿಮಯ ನಡೆಸಿದರು. ಬೆಲೆಯೇರಿಕೆ ಮತ್ತು ಭ್ರಷ್ಟಾಚಾರದ ಕುರಿತು ಒಂದು ಲೇಖನವನ್ನು ಬರೆದು ಪತ್ರಿಕೆಗೆ

ಕಳುಹಿಸಿದರು. ಆ ದಿನ ಸಂಜೆ ಮಂಗಳೂರಿಗೆ ತೆರಳಿ ಆತ್ಮೀಯ ಗೆಳೆಯರಾದ ಶ್ರೀ ಬಾಬುಭಾಯಿ ಚಂದ್ರಾನಾ ಅವರೊಂದಿಗೆ ಕೊಂಚ ಕಾಲ ಕಳೆದರು. ಅವರು ಬರೆದ ಲೇಖನ ಮೂರು ದಿನಗಳಾದರೂ ಪ್ರಕಟವಾಗಲಿಲ್ಲ. ಆ ಕುರಿತು ಬಹಳವಾಗಿ ದುಃಖಿಸಿದರು. ಮಣಿಪಾಲಕ್ಕೆ ತಾನು ಮರಳಿ ಬರಲೇಬಾರದಿತ್ತು ಎಂದು ಅಲವತ್ತುಕೊಂಡರು.

**ಮೇ 23:** ಹಾಲು ಸಹಕಾರೀ ಸಂಘದ ಸದಸ್ಯರೊಂದಿಗೆ ಮಾತುಕತೆ ನಡೆಯಿತು. ಮಧ್ಯಾಹ್ನ ಎಡನೀರು ಶ್ರೀಕೇಶವಾನಂದ ಭಾರತಿ ಸ್ವಾಮೀಜಿಯವರ ಸನ್ಮಾನ ಸಮಾರಂಭದಲ್ಲಿ ಪಾಲ್ಗೊಳ್ಳುವ ಸಲುವಾಗಿ ಪುತ್ತೂರಿಗೆ ಹೋದರು. ಅಂದು ರಾತ್ರಿಯೇ ಅವರು ಮಣಿಪಾಲಕ್ಕೆ ಹಿಂದಿರುಗಿದರು.

**ಮೇ 24:** ಕರಾಡ ದೇಶಸ್ಥರ ಸಮುದಾಯಕ್ಕೆ ಸೇರಿದ ಮಣಿಪಾಲದ ಸಮೀಪದ ಸುವರ್ಣಾ ನದಿ ದಂಡೆಯ ಮೇಲಿನ ಪುರಾತನ ಗಣಪತಿ ದೇವಸ್ಥಾನದ ಜೀರ್ಣೋದ್ಧಾರ ನಡೆದು ಅದರ ಪ್ರಾರಂಭೋತ್ಸವಕ್ಕೆ ಅಧ್ಯಕ್ಷರಾಗಿ ತೆರಳಿದರು. ಭಾವ ಶ್ರೀಕೆ.ಕೆ.ಪೈಯವರು ಮುಖ್ಯ ಅತಿಥಿಯಾಗಿದ್ದರು. ತನ್ನ ಆರಾಧ್ಯ ದೈವ ಗಣಪತಿಯ ಪ್ರತಿಷ್ಠಾಪನೆಯ ಕುರಿತಂತೆ ಅವರು ಅತೀವ ಸಂತಸಪಟ್ಟರು. ಆ ದಿನ ಮಧ್ಯಾಹ್ನ ವಿದ್ಯಾರ್ಥಿಗಳಿಂದ ಮರ ನೆಡುವ ಕಾರ್ಯಕ್ರಮ ನೆರವೇರಿಸಿ, ತದನಂತರ ಮಣಿಪಾಲದ ರಸ್ತೆಗಳಿಗೆ ಸಾಧು ಸಂತರ ಹೆಸರಿಡುವ ಯೋಜನೆಯನ್ನು ಹಮ್ಮಿಕೊಂಡರು. ಉರುಳಿ ಕಾಂಚನದಿಂದ ನರ್ಸರಿ ಗಿಡಗಳನ್ನು ತಂದಿದ್ದರು. ಅವನ್ನೂ ಕುಬಾಬುಲ್ ಮರಗಳನ್ನೂ ನೆಡುವ ಕುರಿತು ಆಸಕ್ತಿ ವ್ಯಕ್ತಪಡಿಸಿದರು.

**ಮೇ 25:** ಅವರನ್ನು ನೋಡಲು ಸಹೋದರರಾದ ರಮೇಶ್ ಮತ್ತು ಸತೀಶ್ ಮನೆಗೆ ಬಂದರು. ಹಾಲು ಸಹಕಾರೀ ಸಂಘದ ಸದಸ್ಯರೊಂದಿಗಿನ ಚರ್ಚೆಯಲ್ಲಿ ಬಹಳ ವ್ಯಸ್ತರಾಗಿದ್ದರು. ರಾತ್ರಿ ಅವರ ಬೆಂಗಳೂರಿನ ಮಿತ್ರರೊಬ್ಬರು ಫೋನ್ ಮಾಡಿದರು. ಮಿತ್ರರು ಹನ್ನೆರಡು ಮಂದಿಯೊಂದಿಗೆ ಬರುವುದಾಗಿಯೂ ಹೇಳಿದರು. ಮರುದಿನ ಬೆಳಗ್ಗಿನ ಉಪಾಹಾರಕ್ಕೆ ಅವರನ್ನು ಆಹ್ವಾನಿಸಿದರು.

**ಮೇ 26:** ಕೊಂಚ ತಲೆನೋವು ಶೀತ ಜ್ವರದ ಅನುಭವವಾಯಿತು. ಅನಂತ್ ಅವರ ಸಹೋದರಿಯ ಅಳಿಯ ಡಾ.ರಮಾನಾಥ್ ಕಾಮತ್ ಅವರು ಬಂದು ತಪಾಸಣೆ ಮಾಡಿ ಪೂರ್ತಿ ವೈದ್ಯಕೀಯ ಚೆಕ್ ಅಪ್

ಮಾಡಿಸುವಂತೆ ಸಲಹೆ ನೀಡಿದರು. ಮಾತ್ರವಲ್ಲ ವಿಶ್ರಾಂತಿಯ ಅಗತ್ಯವನ್ನೂ, ಎಲ್ಲಾ ಕಾರ್ಯಕ್ರಮಗಳನ್ನು ರದ್ದುಪಡಿಸುವಂತೆಯೂ ಸಲಹೆ ನೀಡಿದರು. ಅದನ್ನು ಲೆಕ್ಕಿಸದೆ ಡಾ. ಶ್ರೀನಿವಾಸನ್ ಜತೆಗೆ ಚರ್ಚಿಸಿದರು. ಜೂನ್ 8ರಂದು ಕಾಲೇಜು ಪ್ರಿನ್ಸಿಪಾಲರುಗಳ ಸಮಾವೇಶವೊಂದರ ಆಯೋಜನೆಯ ಕುರಿತಂತೆ ಮಾತುಕತೆಯಾಯಿತು. ಅದಕ್ಕೆ ಸಂಬಂಧಿಸಿದ ಎಲ್ಲಾ ವ್ಯವಸ್ಥೆಗಳನ್ನು ಸ್ವತಃ ವಸಂತಿಯವರು ಮಾಡಲಿ ಎಂದು ಸಲಹೆ ನೀಡಿದರು. ವಸಂತಿಯವರು ತಮ್ಮ ಚಟುವಟಿಕೆಗಳನ್ನು ಅಂಗವಿಕಲ ಮಕ್ಕಳಿಗಷ್ಟೇ ಸೀಮಿತಗೊಳಿಸದೆ, ಇತರ ಮಕ್ಕಳ ಕಾರ್ಯಚಟುವಟಿಕೆಗಳಿಗೂ ವಿನಿಯೋಗಿಸುವಂತೆ ಉಪದೇಶಿಸಿದರು. ಮಧ್ಯಾಹ್ನ ಒಂದು ತಾಸು ವಿಶ್ರಾಂತಿ ಪಡೆದರು. ಅನಂತರ ಹೂದೋಟದಲ್ಲಿ ತಮ್ಮ ಸಮಯ ಕಳೆದರು.

**ಮೇ 27:** ನಿತ್ರಾಣವಿದ್ದರೂ ತುಸು ಆರಾಮವೆನಿಸಿತು. ಪ್ರೊ| ಕು.ಶಿ.ಹರಿದಾಸ ಭಟ್ಟರು ಬಂದು ಶ್ರೀಸತ್ಯನಾರಾಯಣ ಪೂಜೆಗೆ ಆಮಂತ್ರಣವಿತ್ತರು. ಸಹೋದರರು, ಭಾವ ಮೈದುನರು ಮತ್ತು ಕೆಲವು ಗೆಳೆಯರು ಬಂದು ಯೋಗಕ್ಷೇಮ ವಿಚಾರಿಸಿದರು. ದಕ್ಷಿಣ ಕನ್ನಡ ಜಿಲ್ಲೆಯ ಕೆಲವೊಂದು ಸಮಸ್ಯೆಗಳ ವಿಷಯವಾಗಿ ಬಂದವರಲ್ಲಿ ಚರ್ಚಿಸಿದರು. ತುಸು ಹೊತ್ತಿನ ಬಳಿಕ ವಸಂತಿಯವರಿಗೆ 'ಎಂದೂ ನಿನ್ನ ಕೈ ಕೆಳಗಿರಬಾರದು. ನಿನ್ನದು ನೀಡುವ ಕೈಗಳಾಗಲಿ' ಎಂದರು.

**ಮೇ 28:** (ಅಗಲುವಿಕೆಯ ಮುನ್ನಾ ದಿನ) ಬೆಳಗ್ಗಿನಿಂದ ಮಧ್ಯಾಹ್ನದವರೆಗೂ ಬಹಳ ಸಂಖ್ಯೆಯಲ್ಲಿ ಬಂದಿದ್ದ ಹಾಲು ಉತ್ಪಾದಕರ



ಸಂಘದ ಸದಸ್ಯರೊಂದಿಗೆ ಚರ್ಚಿಸಿದರು. ತಾರಾ ಅವರ ಅವಳಿಮಕ್ಕಳೊಂದಿಗೆ ಸಹೋದರಿಲಿಲ್ಲಿ ಬಂದರು. 'ನನ್ನನ್ನು ಬಂದು ನೋಡಬೇಕಾದರೆ ನನಗೆ ಹುಷಾರಿಲ್ಲದೆ ಆಗಬೇಕು ಅಲ್ಲವೇ?'ಅಂತ ನಗೆಯಾಡಿದರು. ಮಧ್ಯಾಹ್ನ ತುಸು ವಿಶ್ರಾಂತಿಯ ಬಳಿಕ ಹೂದೋಟಕ್ಕೆ ತೆರಳಿ ಕೆಲವು ಬೋಗನ್‌ವಿಲ್ಲಾ ಮತ್ತು ದಾಸವಾಳದ ಹೂಗಿಡಗಳ 200 ತುಂಡುಗಳನ್ನು ಹಂಚುವುದಕ್ಕಾಗಿ

ಸಿದ್ಧಪಡಿಸಿದರು. ಬೊನ್ಸಾಯಿ ಗಿಡಗಳ ತಯಾರಿ ಕುರಿತು ಮಾಹಿತಿ ನೀಡುವುದಕ್ಕೆ ವಸಂತಿಯವರಿಗೆ ಹೇಳಿದರೂ ಕೈಗೆ ಗಾಯಮಾಡಿಕೊಂಡಿದ್ದಕ್ಕೆ ಸದ್ಯ ಬೇಡವೆಂದರು. ಇನ್ನೋರ್ವ ಸಹೋದರಿ ಸುಗುಣಾ ಅವರಿಗೆ ಬರಹೇಳಿ ಅವರ ಹಿರಿಯ ಮಗಳು ಗೀತಾಳಿಗೆ ಗುಲಾಬಿ ಗಿಡಗಳ ಕುರಿತಾದ ಪುಸ್ತಕವೊಂದನ್ನು ನೀಡಿದರು. ಸ್ವಂತ ಮಕ್ಕಳಿಲ್ಲದ ಅವರಿಗೆ ಮಕ್ಕಳೆಂದರೆ ಅತೀವ ಮಮತೆಯಿತ್ತು.

ಸಂಜೆ ಜಪಾನ್‌ಗೆ ಹೊರಡಲಿರುವ ಒಂದು ಯಕ್ಷಗಾನ ತಂಡಕ್ಕೆ ಬೀಳ್ಕೊಡುವ ಸಲುವಾಗಿ ಭಾವನೆಂಟ ಪ್ರಭಾಕರ ಪೈಗಳ ಮನೆಗೆ ಹೋದರು. ಅಲ್ಲಿ ಶ್ರೀಸತ್ಯನಾರಾಯಣ ಪೂಜೆಯ ಬಳಿಕ ತಂಡದ ಎಲ್ಲಾ ಸದಸ್ಯರಿಗೆ ಶುಭಾಶಯ ಹೇಳಿದರು. ಮನೆಗೆ ಹಿಂದಿರುಗಿದಾಗ ರಾತ್ರಿ 11 ಗಂಟೆಯಾಗಿತ್ತು. ಹಿಂದಿ ಪಾಠಗಳನ್ನು ಶ್ರೀ ಮಹಾಬಲ ನಾಯಕ್ ಅವರಿಂದ ಕಲಿಯುತ್ತಲಿದ್ದುದರಿಂದ ಅದಕ್ಕೆ ಸಂಬಂಧಿಸಿದ ಹೋಮ್ ವರ್ಕ್ ಮುಗಿಸಿದರು. ಆಮೇಲೆ ವಸಂತಿಯವರಿಗೆ ಹಿಂದಿ ಪಾಠವನ್ನು ಒಪ್ಪಿಸುವ ದೃಷ್ಟಿಯಿಂದ ಅವರ ಜತೆಗೆ ಹಿಂದಿಯಲ್ಲೆ 20 ನಿಮಿಷಗಳ ಕಾಲ ಮಾತನಾಡಿದರು. ವಿಷಯ: 'ಆರ್ಥಿಕ್ ಕಠಿಣಾಯಿ ಔರ್ ದೇಶ್ ಕಿ ದುರ್ಬಲತಾ'.

ತದನಂತರ ಗಣೇಶ ಸಹಸ್ರನಾಮ, ಲಲಿತಾ ಸಹಸ್ರನಾಮ ಮತ್ತು ದೇವಿ ಸ್ತೋತ್ರವನ್ನು ಓದಿಮುಗಿಸುವ ವೇಳೆಗೆ ಮಧ್ಯರಾತ್ರಿಯಾಗಿತ್ತು. ಬೆಳಗಿನ ಜಾವ ಒಮ್ಮೆ ಎದ್ದು ತನಗೆ ಉಸಿರಾಟದ ತೊಂದರೆಯಿದೆ ಎಂದು ಹೇಳಿದರು.

ವಸಂತಿಯವರು ತಕ್ಷಣ ಬಂಧು ಅಶೋಕ್‌ಗೆ ಫೋನ್ ಮಾಡಿ ಡಾಕ್ಟರ್‌ಗೆ ಕರೆಕಳುಹಿಸುವಂತೆ ಹೇಳಿದರು. ಕಾರು ಸಿದ್ಧವಾಗಿತ್ತು. ಆಸ್ಪತ್ರೆಗೆ ತಲಪುವವರೆಗೆ ನಾಡಿಬಡಿತ ನೋಡುತ್ತಲೇ ಇದ್ದರು ವಸಂತಿಯವರು. ಅದು ಯಥಾಪ್ರಕಾರವಾಗಿತ್ತು. ಆಸ್ಪತ್ರೆಗೆ ತಲುಪಿದ ಕೂಡಲೇ ತಕ್ಷಣ ಆಕ್ಸಿಜನ್ ನೀಡಲಾಗಿ ಡಾಕ್ಟರುಗಳು ಇ.ಸಿ.ಜಿ. ಮುಂತಾದವುಗಳಿಗೆ ತಯಾರಿ ನಡೆಸಿದರು.

ವಸಂತಿಯವರ ಗಲ್ಲವನ್ನು ಚಿವುಟಿ 'ನನಗೆ ಅಂಥದ್ದೇನೂ ಆಗುವುದಿಲ್ಲ' ಎಂದರು ಅನಂತ್. ನಂತರ 'ಓಮ್ ಗಣೇಶಾಯ ನಮಃ' ಅಂತ ಹೇಳುತ್ತಾ ಹೇಳುತ್ತಾ ತೊದಲುತ್ತಿದ್ದು ಕೊನೆಗೆ ಅಸ್ಪಷ್ಟವಾಯಿತು....

ವಸಂತಿಯವರು 'ದೇವ' 'ದೇವ' ಎನ್ನುತ್ತ ಮೊರೆಯಿಟ್ಟರು...

ಕೊನೆಗೊಮ್ಮೆ ಕಣ್ಣು ತೆರೆದು ವಸಂತಿಯವರನ್ನು ಅಮಾಯಕವಾಗಿ ನೋಡಿದರು.

ಅದೇ ತಾನೇ ಬಂದಿದ್ದ ಡಾ.ಪ್ರಭು ಕೃತಕ ಉಸಿರಾಟದ ಏರ್ಪಾಟು ಮಾಡಿದರು. ಡಾ.ಕಾಮತ್ ಇಂಜೆಕ್ಷನ್ ನೀಡಿದರು.

ವಸಂತಿಯವರು 'ದೇವ' 'ದೇವ' ಎನ್ನುತ್ತ ಗೋಗರೆದರು. ಅದಕ್ಕೆ ಯಾವುದೇ ಉತ್ತರ ದೊರೆಯಲಿಲ್ಲ.

ಪೈಯವರ ಪ್ರಾಣ ಪಕ್ಷಿ ಅದಾಗಲೇ ಹಾರಿಹೋಗಿತ್ತು.

ಬಡವರ ಬಗೆಗೆ ಸದಾ ಮಿಡಿಯುತ್ತಿದ್ದ ಆ ಹೃದಯದ ಬಡಿತ ನಿಂತು ಹೋಗಿತ್ತು. ತೋನ್ಸೆ ಅನಂತ ಪೈ ಎಂಬ ಮಧುರ ನೆನಪು ಮಾತ್ರ ಅನಂತವಾಗಿ ಉಳಿಯಿತು....

***

ಟಿ.ಎ. ಪೈಯವರು ಇಂದು ನಮ್ಮ ಜತೆಗೆ ಇಲ್ಲ. ಆದರೆ ಅವರು ನಡೆದು ತೋರಿಸಿದ ದಾರಿ ಸದಾ ಕಾಲ ನಮ್ಮ ಮಾರ್ಗದರ್ಶನಕ್ಕೆ ಇದೆ. ಅವರ ಆದರ್ಶಮಯ ಬದುಕು ನಮಗೆ ದಾರಿ ದೀಪವಾಗಿದೆ.

ಡಾ. ಎಂ.ವಿ. ಕಾಮತರು ಅಂದಂತೆ ಅವರು ಎಂದೂ ಸಣ್ಣತನವನ್ನು ಪ್ರದರ್ಶಿಸಲಿಲ್ಲ. ಅವರದು ದೊಡ್ಡ ವ್ಯಕ್ತಿತ್ವ, ದೊಡ್ಡ ವಿಚಾರ, ದೊಡ್ಡ ಯೋಚನೆ, ದೊಡ್ಡ ಯೋಜನೆ. ಅವರ ಮಧುರ ನೆನಪು ಸದಾ ಕಾಲ ಭಾರತದ ಕೋಟ್ಯಾಂತರ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿರುತ್ತದೆ.

ಜಸ್ಟಿಸ್ ಕೃಷ್ಣ ಅಯ್ಯರ್ ಅಂದಂತೆ, 'ಭ್ರಷ್ಟಾಚಾರದ ಸೋಂಕು ತಗಲದ, ನಿರ್ಮಲ ಚಾರಿತ್ರ್ಯದ ಒಬ್ಬನೇ ಓರ್ವ ರಾಜಕಾರಣಿ ಅಂದರೆ ಅದು ಅನಂತ ಪೈ ಮಾತ್ರ!'

***

'ಭ್ರಷ್ಟಾಚಾರದ ಸೋಂಕು ತಗಲದ, ನಿರ್ಮಲ್ಯ ಚಾರಿತ್ರ್ಯದ ಒಬ್ಬನೇ ಒರ್ವ ರಾಜಕಾರಣಿ ಅಂದರೆ ಅದು ಅನಂತ ಪೈ ಮಾತ್ರ!'

– ಜಸ್ಟೀಸ್ ವಿ.ಎಸ್. ಕೃಷ್ಣ ಅಯ್ಯರ್



## ಮದ್ರಾಸು ಸಂಸ್ಥಾನದ ಪ್ರಥಮ ಶಾಸನ ಸಭೆಯ ನಡಾವಳಿಗಳು

## ಸಭಾಪತಿ, ಉಪಸಭಾಪತಿಗಳ ಚುನಾವಣೆ:

## ಅಭಿನಂದನಾ ಭಾಷಣ

## 7 ಮೇ 1952

**ಶ್ರೀ ಟಿ.ಅನಂತ ಪೈ:** ಮಾನ್ಯ ಸಭಾಧ್ಯಕ್ಷರೇ, ಶಾಸನ ಸಭೆಯ ಸಭಾಪತಿಗಳಾಗಿ ಆಯ್ಕೆಯಾಗಿರುವ ತಮಗೂ ಉಪಸಭಾಪತಿಗಳಾಗಿ ಆಯ್ಕೆಯಾಗಿರುವ ಶ್ರೀ ಭಕ್ತವತ್ಸಲ ನಾಯ್ಡು ಅವರಿಗೂ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ. ನೂತನವಾಗಿ ಸಭಾಪತಿಗಳಾಗಿ ಮತ್ತೊಮ್ಮೆ ಆಯ್ಕೆಯಾಗಿರುವ ತಾವು ಈ ಮಹಾನ್ ಸಭೆಯ ಅಧ್ಯಕ್ಷ ಸ್ಥಾನವನ್ನು ಅಲಂಕರಿಸುತ್ತಿರುವುದು ನಮಗೆಲ್ಲ ಅತ್ಯಂತ ಹರ್ಷದಾಯಕ ವಿಷಯ. ಈ ಸಭೆಗೆ ಪ್ರಥಮ ಸಲದಲ್ಲಿ ಆಯ್ಕೆಗೊಂಡು ಪ್ರವೇಶ ಪಡೆದ ಸುದೈವಿಗಳಲ್ಲಿ ನಾನೂ ಒಬ್ಬ. ಹಿಂದಿನ ಸಲ ತಮ್ಮ ಕಾರ್ಯವೈಖರಿಯನ್ನು ವೀಕ್ಷಕ ಗ್ಯಾಲರಿಯಲ್ಲಿ ಕುಳಿತು ವೀಕ್ಷಿಸುವ ಸೌಭಾಗ್ಯವನ್ನು ಪಡೆದಿದ್ದು ಇದೀಗ ನೆನಪಿಗೆ ಬರುತ್ತಿದೆ. ತಾವು ಮತ್ತೊಮ್ಮೆ ಈ ಸ್ಥಾನಕ್ಕೆ ಆಯ್ಕೆಯಾಗಿರುವುದು ತಮ್ಮ ಜನಪ್ರಿಯತೆಗೆ ಸಾಕ್ಷಿಯಾಗಿದೆ ಎಂದರೂ ತಪ್ಪಾಗದು. ತಾವು ಮತ್ತೊಮ್ಮೆ ಈ ಸದನದ ಸಭಾಪತಿಗಳಾಗಿ ಕಾರ್ಯನಿರ್ವಹಿಸುವ ಅವಶ್ಯಕತೆಯಿತ್ತು ಎಂದು ನನಗನಿಸುತ್ತದೆ. ಅಂತೆಯೆ

ನಾಡಿನ ಜನತೆಯ ಪರವಾಗಿ ತಮಗೆ ಹರ್ಷೋದ್ಗಾರದ ಅಭಿನಂದನೆಯನ್ನು ಈ ಮೂಲಕ ಸಮರ್ಪಿಸುತ್ತಿದ್ದೇನೆ.

## ಸದನ ಸಂಪ್ರದಾಯ

ಸ್ವಾಮೀ, ಸಂಪ್ರದಾಯದ ಕುರಿತಂತೆ ಅನೇಕ ಸಲ ವಿಷಯಗಳನ್ನು ಪ್ರಸ್ತಾಪಿಸಿದ್ದಿದೆ. ಅದರಲ್ಲೂ ತಾವು ಸದನದ ಸಂಪ್ರದಾಯಕ್ಕೆ ಹೆಚ್ಚು ಮಹತ್ವ ಕೊಡುತ್ತೀರಿ ಹಾಗೂ ಜಗತ್ತಿನ ಅನೇಕ ಸಂಸತ್ತುಗಳ ವಿಷಯ ಜ್ಞಾನವೂ ತಮಗೆ ವೇದ್ಯವಿದೆ ಎಂದು ನಾನು ಈ ಸಂದರ್ಭದಲ್ಲಿ ಉಲ್ಲೇಖಿಸಬಯಸುತ್ತೇನೆ.

ಬ್ರಿಟಿಷ್ ಸಂಸತ್ತಿನ ಹಾಗೂ ಜಗತ್ತಿನ ಅನೇಕ ಸಂಸತ್ತುಗಳ ಕುರಿತಾದ ಅಧ್ಯಯನ ಮಾಡುವಂಥ ಅವಕಾಶ ತಮ್ಮ ಪಾಲಿಗೆ ಒದಗಿ ಬಂದಿರುವುದೂ ವೇದ್ಯ ವಿಷಯುವೇ. ಸಂಪ್ರದಾಯಕ್ಕೆ ಅದರದೇ ಆದ ಮೌಲ್ಯಗಳಿವೆ. ಅವೆಲ್ಲ ಸಾರ್ವಕಾಲಿಕ ಅನುಭವ ಜನ್ಯವಾಗಿರತಕ್ಕ ಅಂಶಗಳು. ಅಂತಹ ಸಂಪ್ರದಾಯಬದ್ಧ ಆಸನವನ್ನು ತಮ್ಮಂಥ ಅನುಭವ ಹೊಂದಿದ ವ್ಯಕ್ತಿಗಳೇ ಅಲಂಕರಿಸಬೇಕಾದ್ದು ಅನಿವಾರ್ಯವೂ, ಅವಶ್ಯಕವೂ ಎಂಬುದರಲ್ಲಿ ಎರಡು ಮಾತಿಲ್ಲ. ನಿಷ್ಪಕ್ಷಪಾತ ಮತ್ತು ಸ್ವಾತಂತ್ರ್ಯ– ಈ ಎರಡು ವಿಷಯಗಳು ಅದರದೇ ಆದ ಮೌಲ್ಯಗಳನ್ನು ಹೊಂದಿದ್ದು, ಇವೆರಡೂ ತಮ್ಮಲ್ಲಿ ಹೇರಳವಾಗಿ ಉಪಲಬ್ಧವಿದೆ ಎಂದು ನಮಗೆಲ್ಲ ತಿಳಿದಿದೆ. ಸಭಾಪತಿ ಆಗಿರುವವನು ಯಾವುದೇ ಪಕ್ಷಕ್ಕೆ ಸೇರಿದವನೂ ಆಗಿರಬಾರದು, ಅಂತೆಯೇ ಸಭಾಧ್ಯಕ್ಷರ ಆಯ್ಕೆ ಒಂದು ಪಕ್ಷದ ಕಾರ್ಯಾಚರಣೆ ಆಗಿರಕೂಡದು ಎಂಬ ಕಾರಣದಿಂದಾಗಿಯೇ ನಮ್ಮ ಪಕ್ಷ ತಮ್ಮನ್ನು ಸಭಾಪತಿಯಾಗಿ ಆರಿಸಿ ಬರುವಂತೆ ಬೆಂಬಲಿಸಿದ್ದು. ತಮ್ಮ ಮನಸ್ಸನ್ನು ನಾವು ನಿಚ್ಚಳವಾಗಿ ಬಲ್ಲವರಾಗಿರುವುದೂ ನಮ್ಮ ಈ ನಿಲುವಿಗೆ ಇನ್ನೊಂದು ಕಾರಣವೆನ್ನಲಡ್ಡಿಯಿಲ್ಲ.

## ಸಭಾಪತಿ ವಿಶೇಷ

ಸ್ವಾಮೀ, ಸಭಾಪತಿಗಳದ್ದು ಒಂದು ವಿಶೇಷವಾದ ಸ್ಥಾನಮಾನವೆಂದರೂ ಸರಿಹೋದೀತು. ಆತ ಒಬ್ಬ ಸ್ವತಂತ್ರ ಅಭ್ಯರ್ಥಿಯಾಗಿ ಚುನಾವಣೆಯಲ್ಲಿ ಸ್ಪರ್ಧಿಸುವುದು ಒಂದು ವಿಷಯುವಾದರೆ, ಆತ ಯಾವುದೇ ಪಕ್ಷದಿಂದ ಆಯ್ಕೆಯಾಗಿ ಬಂದಿದ್ದಲ್ಲೂ ಸಭಾಪತಿಯ ಸ್ಥಾನಕ್ಕೆ ಆಯ್ಕೆಯಾದ ಬಳಿಕ

ಆತನ ಪಕ್ಷೀಯ ಕಾರ್ಯಚಟುವಟಿಕೆಗಳು ಸ್ಥಗಿತಗೊಳ್ಳಬೇಕಾಗುತ್ತದೆ. ಬ್ರಿಟಿಷ್ ಸಂಸತ್ತಿನಲ್ಲಿ ಸಭಾಪತಿಯ ಆಯ್ಕೆ ನಿಜಕ್ಕೂ ಒಂದು ವಿಚಿತ್ರ ಸಮಸ್ಯೆಯದ್ದಾಗಿರುತ್ತದೆ. ಸಭಾಪತಿಯಾಗುವವನು ಯಾವುದೇ ಚುನಾವಣಾ ಕ್ಷೇತ್ರವನ್ನು ಪ್ರತಿನಿಧಿಸುವಂತಿಲ್ಲ ಹಾಗೂ ಯಾವುದೇ ಪಕ್ಷದ ಮೂಲಕವೂ ಆತ ಚುನಾವಣೆಗೆ ಸ್ಪರ್ಧಿಸಿರಬಾರದು. ಇಂಗ್ಲೆಂಡಿನಲ್ಲಿ ಸ್ಪೀಕರ್ ಸ್ಥಾನಕ್ಕೆ ಅಭ್ಯರ್ಥಿಯಾಗಿ ಪ್ರಚಾರ ಮಾಡುವ ಸಂದರ್ಭದಲ್ಲಿ ಓರ್ವ ಮತದಾರ ಹೇಳಿದ್ದ–'ಮತದಾರರೇ, ನಿಮಗೆ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇದ್ದಲ್ಲಿ ನನಗೆ ಮತ ಚಲಾಯಿಸಿ' ಎಂದು.

ಸ್ವಾಮೀ, ತಾವು ಸ್ವತಂತ್ರ ಅಭ್ಯರ್ಥಿಯಾಗಿ ಚುನಾವಣೆಯಲ್ಲಿ ಗೆದ್ದಿದ್ದೀರ ಮತ್ತು ತಾವು ಯಾವುದೇ ಪಕ್ಷದ ಸದಸ್ಯತನವನ್ನು ಹೊಂದಿಲ್ಲ. ಈ ಸಭಾಧ್ಯಕ್ಷರೆ ಚುನಾವಣೆಗೆ ತಾವು ನಿಂತಾಗ ತಾವು ಸರ್ವಾನುಮತದಿಂದ ಆಯ್ಕೆಯಾಗುತ್ತೀರಿ ಅಂದುಕೊಂಡಿದ್ದೆವು. ಆದರೆ ನಾವು ಕೆಲವು ಮಹಾನ್ ಸಂಪ್ರದಾಯಗಳನ್ನು ನಂಬಿ ಇದೀಗ ಅವನ್ನು ಮುರಿದಿದ್ದೇವೆ. ಅಂತೆಯೇ ಈ ಚುನಾವಣೆಯಲ್ಲಿ ಅಂತಹ ಸಂಪ್ರದಾಯಗಳನ್ನು ತೊರೆದಿದ್ದೇವೆ. ಇದೀಗ ತಾವು ಆಯ್ಕೆಯಾಗುವುದರೊಂದಿಗೆ ನಿಷ್ಪಕ್ಷಪಾತವಾಗಿ ಮತ್ತು ಸ್ವತಂತ್ರವಾಗಿ ತಮ್ಮ ಕಾರ್ಯವೈಖರಿಯನ್ನು ಮುಂದುವರಿಸಿಕೊಂಡು ಹೋಗುತ್ತೀರಿ ಎಂಬ ಭರವಸೆ ನಮಗಿದೆ.

ಉಪಸಭಾಪತಿಗಳ ಬಗೆಗೆ ಒಂದೇ ಒಂದು ಪ್ರಶಂಸೆಯ ನುಡಿ. ಜನಜನಿತವಾಗಿರುವಂತೆ, ಉಪಸಭಾಪತಿಗಳ ಸ್ಥಾನವನ್ನು ಸಾಮಾನ್ಯವಾಗಿ ಮಹಿಳೆಯರೇ ಅಲಂಕರಿಸುತ್ತ ಬಂದಿರುವಂಥದ್ದು ವಾಡಿಕೆ. ಸ್ವಾಮೀ, ನಾವು ಅನೇಕ ಸಂಪ್ರದಾಯಗಳನ್ನು ಮುರಿದಿರುವ ಹಿನ್ನೆಲೆಯಲ್ಲಿ ಇದೂ ಒಂದು ಅಂತಹ ಸನ್ನಿವೇಶ ಎನ್ನಬಹುದೇನೋ! 'ಮಹನೀಯರೇ' ಮತ್ತು 'ಮಾತೆಯವರೇ' ಎಂದು ಆಗಿಂದಾಗ್ಯೆ ಹೇಳುವಾಗ ಗೋಜಲಿಗೆ ಬಿದ್ದು ಸಂಬೋಧಿಸುವಂಥ ತಾಪತ್ರಯ ಇದೀಗ ತಪ್ಪಿತು ಅಂತ ಹೇಳಬಹುದು.

***

## ಮದ್ರಾಸು ಸಂಸ್ಥಾನ

## ರಾಜ್ಯಪಾಲರ ಭಾಷಣದ ಮೇಲಿನ ಚರ್ಚೆ

## 8 ಮೇ 1952

**ಸಭಾಧ್ಯಕ್ಷರು:** ಬಹಳಷ್ಟು ಮಂದಿ ಚರ್ಚೆಯಲ್ಲಿ ಭಾಗವಹಿಸುವಂತಿರುವುದರಿಂದ ಪ್ರತಿಯೊಬ್ಬ ಸದಸ್ಯನಿಗೂ ಹತ್ತು ನಿಮಿಷಗಳ ಕಾಲಾವಕಾಶವನ್ನು ಮಾತ್ರ ಕೊಡಲಾಗುತ್ತದೆ ಎಂದು ವಿಧಿಸುತ್ತೇನೆ.

**ಶ್ರೀ ಟಿ. ಅನಂತ ಪೈ:** ಸಭಾಪತಿ ಮಹೋದಯರೇ, ನಮ್ಮದು ಅನೇಕ ಜಟಿಲ ಸಮಸ್ಯೆಗಳನ್ನು ಎದುರಿಸುವ ದೇಶವೆಂದರೂ ತಪ್ಪಾಗದು. ದೇಶದ ಬೃಹತ್ ವಿಸ್ತಾರ ಒಂದೆಡೆಯಾದರೆ, ಜನಸಂಖ್ಯಾ ಸಮಸ್ಯೆ ಇನ್ನೊಂದೆಡೆ ನಮ್ಮನ್ನು ಕಾಡುತ್ತಲೇ ಇದೆ. ದೇವರು ಕರುಣಿಸಿದ ಕೆಲವು ಸಮಸ್ಯೆಗಳಾದರೆ, ನಾವು ಸ್ವತಃ ಸೃಷ್ಟಿಸಿಕೊಂಡ ಸಮಸ್ಯೆಗಳು ಅನೇಕ ಇವೆ. ಇದೀಗ ನಾವು ಸ್ವತಂತ್ರರಾಗಿರುವುದರಿಂದ ಪ್ರತಿಯೊಬ್ಬರೂ ರಾಮರಾಜ್ಯದ ಸ್ಥಾಪನೆಯ ಕನಸು ಕಾಣುತ್ತಿರುವುದು ಸರ್ವವಿಧಿತ– ಅದು ಬಂದೇ ಬರುತ್ತದೆ ಎಂಬ ಆಶಾಭಾವನೆಯೂ ನಮ್ಮಲ್ಲಿರುವುದು ಸಹಜವೇ. ಪ್ರತಿಯೋರ್ವ ಪ್ರಜೆಯೂ, ಅವನು ಸರಕಾರದ ಪ್ರತಿನಿಧಿಯಾಗಿರಲಿ ಇಲ್ಲದಿರಲಿ, ಕಳೆದ ನಾಲ್ಕು ವರ್ಷಗಳಿಂದ ನಾವು ಕಂಡುಕೊಂಡಂತೆ, ರಾಮರಾಜ್ಯದ ಸ್ಥಾಪನೆಗೆ ಪ್ರತಿಯೊಬ್ಬನೂ ಮಡಿಯಬೇಕಾದ್ದು ಅವಶ್ಯಕ.

### ಜನರ ಕೈಗೆ ಅಧಿಕಾರ!

ಭಾರತದ ಸಂವಿಧಾನದ ರಚನೆಯ ನಂತರ, ನಮ್ಮ ದೇಶದ ಇತಿಹಾಸದ ಅತ್ಯಂತ ಮಹತ್ವದ ಘಟನೆ ಏನೆಂದರೆ, ಈ ದೇಶದ 17 ಕೋಟಿ ಜನರ ಕೈಯಲ್ಲಿ ಇದೀಗ ದೇಶದ ಸಾರ್ವಭೌಮತ್ವ ಹಸ್ತಾಂತರವಾಗಿರುವುದು. ಹಾಗಾಗಿ ತಮ್ಮದೇ ಸರಕಾರವನ್ನು ಸ್ವತಂತ್ರವಾಗಿ ಹಾಗೂ ಸ್ವಇಚ್ಛೆಯಿಂದ ಆಯ್ಕೆ ಮಾಡುವಂಥ ಸನ್ನಿವೇಶ ಒದಗಿಬಂದಿರುವಂಥದ್ದು. ಈ ಅಧಿಕಾರವನ್ನು ಜನರು ಅತ್ಯಂತ ಉತ್ತಮ ರೀತಿಯಲ್ಲಿ ರಾಜಕೀಯ ಸಾಮರ್ಥ್ಯವನ್ನು ಉಪಯೋಗಿಸಿಕೊಂಡು ಆ ಮೂಲಕ ದೇಶದ ಭವಿಷ್ಯವನ್ನೂ, ಸ್ವಾತಂತ್ರ್ಯವನ್ನೂ ಎತ್ತಿ ಹಿಡಿದಿರುತ್ತಾರೆ. ಜನರ ಪ್ರತಿನಿಧಿಗಳಾಗಿ ನಮ್ಮನ್ನು ಆಯ್ಕೆ ಮಾಡಿ, ಆ ಮೂಲಕ ಅವರ

ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ನಮಗೆ ಅವಕಾಶವನ್ನು ಕಲ್ಪಿಸಿಕೊಟ್ಟಿರುತ್ತಾರೆ. ಅವರು ನಮ್ಮಲ್ಲಿ ಇಟ್ಟಿರುವ ನಂಬಿಕೆಗೆ ಅನುಗುಣವಾಗಿ ನಾವೆಲ್ಲ ಸಮರ್ಥವಾಗಿ ಅವರ ಸಮಸ್ಯೆಗಳನ್ನು ಪರಿಹರಿಸಬಲ್ಲವೇ ಎಂಬ ಕುರಿತಂತೆ ನನಗೆ ಕೆಲವೊಮ್ಮೆ ಅನುಮಾನವುಂಟಾಗುತ್ತದೆ. ಯಾಕೆಂದರೆ, ನಮ್ಮ ಮುಂದಿರುವ ಬೃಹತ್ ಸಮಸ್ಯೆಗಳನ್ನು ಜನರಿಗೆ ಚುನಾವಣೆಯ ಸಂದರ್ಭದಲ್ಲಿ ನಾವು ಮತ್ತು ವಿರೋಧ ಪಕ್ಷದವರು ವಿಷದವಾಗಿ ವಿವರಿಸಿದ್ದಿದೆ. ನಾವು ಯಾವುದೇ ಪಕ್ಷಕ್ಕೆ ಸೇರಿದ್ದರೂ, ಜನರಿಗೆ ಕೆಲವು ಆಶ್ವಾಸನೆಗಳನ್ನು ನೀಡಿದ್ದೇವೆ. ಆ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕಾದರೆ ನಾವೆಲ್ಲ ಒಗ್ಗಟ್ಟಿನಿಂದ ದುಡಿಯಬೇಕಾಗಿದೆ ಎಂದು ನನಗನಿಸುತ್ತದೆ. ಅಂತೆಯೇ ಜನರ ಒಳಿತನ್ನೇ ನಾವು ಬಯಸಬೇಕಾದ್ದು ಅನಿವಾರ್ಯವಾಗಿರುತ್ತದೆ.

## ಎಚ್ಚರಿಕೆಯ ಹೆಜ್ಜೆ ಅವಶ್ಯ

ನಾವು ಈ ಸದನದಲ್ಲಿ ಯಾವುದೇ ನಿರ್ಣಯ ಕೈಗೊಂಡರೂ ಆ ವಿಷಯ ವಿಶ್ವದ ಯಾವುದೇ ಮೂಲೆಯಲ್ಲಿ ಸುದ್ದಿಯಾಗುತ್ತದೆ ಎಂಬ ವಿಚಾರ ನನ್ನ ಮನಸ್ಸಿಗೆ ಬರುತ್ತಿದೆ. ನಮ್ಮ ವಾರ್ತಾ ಪತ್ರಿಕೆಗಳು ಇಂದು ಜನರನ್ನು ರಾಜಕೀಯವಾಗಿ ಎಚ್ಚರಗೊಳಿಸಿದೆ ಎಂದೂ ಹೇಳಬಯಸುತ್ತೇನೆ. ಅವರೆಲ್ಲ ಈ ಸದನದಲ್ಲಿ ನಡೆಯುವ ನಮ್ಮ ಪ್ರತಿಯೊಂದು ಹೆಜ್ಜೆಯನ್ನು ಗಮನಿಸುತ್ತಿದ್ದಾರೆ ಮತ್ತು ನಾವು ಉಚ್ಛರಿಸುವಂಥ ಪ್ರತಿಯೊಂದು ಶಬ್ದವನ್ನೂ ಎಚ್ಚರಿಕೆಯಿಂದ ಆಲಿಸುತ್ತಿದ್ದಾರೆ ಎಂದಾಗ ನನಗೆ ತುಸು ಭಯವೇ ಆಗುತ್ತಿದೆ. ಎಲ್ಲ ಯುವ ಜನಾಂಗದವರಂತೆ ನಾನೂ ಕೂಡಾ ಸ್ವಲ್ಪ ಆದರ್ಶವಾದಿಯಾಗಿದ್ದು, ಇಂತಹ ಸಂದರ್ಭಗಳಲ್ಲಿ ಆದರ್ಶವಾದಿಯಾಗಿ ಮುಂದುವರಿಯಬೇಕೇ ಎಂಬುದರ ಕುರಿತು ನನಗೆ ಅನುಭವವಾಗಬೇಕಾಗಿದೆ. ನಾವು ನಮ್ಮ ಸಂವಿಧಾನದ ಕುರಿತು ಇಷ್ಟೆಲ್ಲ ಪ್ರತಿಪಾದಿಸುತ್ತಿರುವಾಗ, ನಮ್ಮ ರಾಜ್ಯಪಾಲರು ಸದನದಲ್ಲಿ ಭಾಷಣ ಮಾಡುವ ವೇಳೆ ನಾನು ತುಂಬಾ ವಿಚಲಿತನಾದೆ. ಸದನದಿಂದ ಹೊರನಡೆಯಬೇಕೇ ಎಂಬ ಕುರಿತು ಯೋಚಿಸುವಂತಾದೆ.

ಸದನದಿಂದ 'ವಾಕ್ ಔಟ್' ಮಾಡುವುದು ಸರಿಯೋ ತಪ್ಪೋ ಎಂಬುದು ಬೇರೆ ಮಾತು. ಶ್ರೀ ಪ್ರಕಾಶಂ ಅವರು ಸದನವನ್ನು ಉದ್ಧೇಶಿಸಿ ಮಾತನಾಡುವ ವೇಳೆ ನನಗೆ ಅನಿಸಿದ್ದು ಇಷ್ಟು: ಒಂದೋ ರಾಜ್ಯಪಾಲರು ಭಾಷಣ ಮಾಡದೆ



H-058-6

ಹಿಂದಕ್ಕೆ ಹೋಗಬೇಕು, ಇಲ್ಲವೇ ಅವರೂ ಅವರ ಸಂಗಡಿಗರೂ 'ವಾಕ್ ಔಟ್' ಮಾಡಬೇಕು.

ಸ್ವಾಮೀ, ರಾಜ್ಯಪಾಲರ ಭಾಷಣವನ್ನೇ ತೆಗೆದುಕೊಳ್ಳಿ– ಅಧಿಕಾರದಲ್ಲಿರುವ ಪಕ್ಷದ ಕಾರ್ಯನೀತಿಯನ್ನೇ ಅವರು ಪ್ರತಿಪಾದಿಸಬೇಕಾಗಿತ್ತು. ಅವರ ಭಾಷಣ ಯಾವುದೇ ನಿಶ್ಚಿತ ಸಮಸ್ಯೆಯ ಕುರಿತು ನಿಶಾನೆಯನ್ನು ನೀಡಲಿಲ್ಲ. ಅಂತೆಯೇ ಆ ಸಮಸ್ಯೆಗಳನ್ನು ಹೇಗೆ ಎದುರಿಸುವುದೆಂಬುದನ್ನೂ ಸೂಚಿಸಲಿಲ್ಲ. ಸಮಸ್ಯೆಗಳ ಬೃಹತ್ ಸ್ವರೂಪವನ್ನು ಇದು ತೋರಿಸುತ್ತದೆಯಲ್ಲದೆ ಸರಕಾರ ಅದನ್ನು ಹೇಗೆ ನಿಭಾಯಿಸಬಲ್ಲುದು ಎಂಬುದೇ ಸಮಸ್ಯೆಯಾಗಿದೆ. ರಾಜ್ಯಪಾಲ ಮಹಾಶಯರು ಮತ್ತೆ ಜೂನ್ ತಿಂಗಳಲ್ಲಿ ನಮ್ಮನ್ನು ಉದ್ದೇಶಿಸಿ ಭಾಷಣ ಮಾಡುವರೆಂದು ಆಶ್ವಾಸನೆ ನೀಡಿದ್ದಾರೆ. ಕೆಲವೊಂದು ವಿಷಯಗಳನ್ನು ಸೂಚ್ಯವಾಗಿ ಈ ಸಂದರ್ಭದಲ್ಲಿ ಹೇಳಬೇಕೆಂಬುದೇ ನಮ್ಮ ಆಶಯ. ನಮ್ಮ ಆಹಾರ ಸಮಸ್ಯೆಯೇ ಇಂದಿನ ಬೃಹತ್ ಸಮಸ್ಯೆ ಎನ್ನಬಹುದು. ಸ್ವಾತಂತ್ರ್ಯ ಪಡೆದ ಬಳಿಕವೂ ನಮ್ಮ ದಯನೀಯ ಪರಿಸ್ಥಿತಿ ಅಂದರೆ, ನಮ್ಮ ಆಹಾರ ನಿಭಾವಣೆಗಾಗಿ ನಾವು ಪರದೇಶಗಳನ್ನು ಅವಲಂಬಿಸಬೇಕಾದ ಪ್ರಮೇಯ ಒದಗಿರುವಂಥದ್ದು. ಆಹಾರಕ್ಕಾಗಿ ನಾವು ಪರದೇಶಗಳಾದ ಅಮೆರಿಕಾ ಮತ್ತು ರಷ್ಯಾವನ್ನು ಅವಲಂಬಿಸಿರುವುದು ತರವಲ್ಲ. ನಮ್ಮ ಸಮಸ್ಯೆಯನ್ನು ನಮ್ಮೊಳಗೇ ಪರಿಹರಿಸಿಕೊಳ್ಳಬೇಕಲ್ಲದೆ, ಜನರ ಸಹಕಾರದ ಸಹಾಯ ಹಸ್ತವಿರದಿದ್ದಲ್ಲಿ ಯಾವುದೇ ಸರಕಾರ ಇಂತಹ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಶಕ್ತವಾಗಲಾರದು. ಈ ಸಂದರ್ಭದಲ್ಲಿ ಎಲ್ಲಾ ಸರಕಾರೀ ನೌಕರರಲ್ಲಿ ನನ್ನದು ಒಂದೇ ಒಂದು ನಿವೇದನೆ ಅಂದರೆ, ರಾಷ್ಟ್ರ ಪ್ರೇಮದಲ್ಲಿ ನಮಗಿಂತ ಎಷ್ಟಕ್ಕೂ ಕಡಿಮೆಯಿರದ ಅವರು, ಈ ಬೃಹತ್ ಸಮಸ್ಯೆಯ ಪರಿಹಾರದಲ್ಲಿ ಅತ್ಯಂತ ಶೀಘ್ರವಾಗಿ ನಮ್ಮೊಂದಿಗೆ ಸಹಕರಿಸಬೇಕು.

## ಭೂಸುಧಾರಣೆ ಕಾಯಿದೆ

ಸ್ವಾಮೀ, ನಾನು ನನ್ನ ಕ್ಷೇತ್ರವನ್ನು ಸಂದರ್ಶಿಸುವ ಸಂದರ್ಭದಲ್ಲಿ ನನಗೆ ಅನ್ನಿಸಿದ್ದೇನೆಂದರೆ, ಯಾವಾಗಿನಿಂದಲೂ ಅದು ಅನ್ನಿಸುತ್ತಲೇ ಇತ್ತು, ಭೂ ಸುಧಾರಣೆಯ ಕಾಯಿದೆಯನ್ನು ಸರಕಾರ ಅತೀ ಬೇಗನೇ ಜಾರಿಗೆ ತರುವುದರಲ್ಲಿ ಕಾರ್ಯಪ್ರವೃತ್ತವಾಗಬೇಕೆಂದು. ಆಹಾರ ಕೊರತೆಯ ಸಮಸ್ಯೆಯುನ್ನು ಪರಿಹರಿಸಬೇಕಾದಲ್ಲಿ ಭೂಸುಧಾರಣೆ ಕಾನೂನನ್ನು ಜಾರಿಗೆ ತರಬೇಕು. ಭೂಮಿ

ಉಳುವವನಿಗೆ ದೇಶದ ಆರ್ಥಿಕ ಬೆಳವಣಿಗೆಯಲ್ಲಿ ತನ್ನದೂ ಒಂದು ಪಾತ್ರವಿದೆ ಎಂಬ ಭಾವನೆ ಬರಬೇಕು. ಕೃಷಿಯಲ್ಲಿ ಆತನ ಪಾತ್ರವೇನೂ ಇರದಿದ್ದಲ್ಲಿ ಅವನು ತನ್ನ ಕಾರ್ಯವನ್ನು ಚೆನ್ನಾಗಿ ನಿರ್ವಹಿಸಲಾರ. ಆದ್ದರಿಂದ ಸರಕಾರ ಹೆಚ್ಚು ಸಮಯ ತೆಗೆದುಕೊಳ್ಳದೆ ಭೂಮಸೂದೆಯ ಕಾಯಿದೆಯನ್ನು ಜಾರಿಗೆ ತರಬೇಕು. ಜಮೀನುದಾರ ಮತ್ತು ಹಿಡುವಳಿದಾರ ಅಥವಾ ಮಾಲೀಕ ಮತ್ತು ಗೇಣಿದಾರ ಇವರೊಳಗಿನ ಜಂಝಾಟದಿಂದಾಗಿ, ಸಾಮನ್ಯ ಜನತೆ ಕಷ್ಟಕ್ಕೆ ಈಡಾಗಬಾರದು. ಆದ್ದರಿಂದ ಎಲ್ಲಾ ವಿಷಯಗಳನ್ನು ಈ ಬಗೆಯ ವಿಭಾಗೀಯ ದೃಷ್ಟಿಯಿಂದ ನೋಡದೆ ಸಮುದಾಯದ ಸಮಷ್ಠಿಯಿಂದ ನೋಡಬೇಕು. ಬಹುದೊಡ್ಡ ಬೇಸಾಯದ ಜಾಗಗಳನ್ನು ಜಮೀನ್ದಾರರು ಸುಮ್ಮನೆ ಬಿಟ್ಟಿರುವುದನ್ನು ನಾನು ನೋಡಿದ್ದೇನೆ. ಇಂಗ್ಲೆಂಡಿನಲ್ಲಿರುವಂತೆ, ಜಮೀನುದಾರನನ್ನು ಆತನ ಆಸ್ತಿಯ ಒಂದು ಪಾರುಪತ್ಯಗಾರ ಎಂಬ ನೆಲೆಯಲ್ಲಿ ಮಾತ್ರ ನೋಡಬೇಕು. ಅವನು ತನ್ನ ಭೂಮಿಯ ಫಲವತ್ತತೆಯನ್ನು ಹೆಚ್ಚಿಸುವಂತೆಯೂ, ಹೊಸ ಬೇಸಾಯ ಕ್ರಮಗಳನ್ನು ಅಳವಡಿಸಿ ಸಮಾಜದ ಉಪಯೋಗಕ್ಕಾಗಿ ಹೆಚ್ಚು ಇಳುವರಿಯನ್ನು ತೆಗೆಯುವಂತೆ ಪ್ರೇರಿಸಬೇಕು.

ವಯಸ್ಕ ಶಿಕ್ಷಣದ ಬಗ್ಗೆ ಬಹಳಷ್ಟು ವಿಷಯಗಳನ್ನು ಹೇಳಿದ್ದಾಗಿದೆ. ನನ್ನ ಪ್ರಕಾರ ವಯಸ್ಕ ಶಿಕ್ಷಣ ನಮ್ಮ ರಾಜ್ಯ ಎದುರಿಸುವಂಥ ಮಹತ್ವದ ಸಮಸ್ಯೆ ಎನ್ನಬಹುದು. ಈ ಸಮಸ್ಯೆಯನ್ನು ಜನರಿಗೆ ಬಿಟ್ಟುಬಿಡುವುದು ಲೇಸೆಂದು ನನ್ನ ಭಾವನೆ. ಸರಕಾರ ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡುವಂತಾಗಲಿ. ವಯಸ್ಕ ಶಿಕ್ಷಣದ ಸಮಸ್ಯೆ ಮುಂದುವರಿಯುತ್ತಲೇ ಹೋಗುವುದರಲ್ಲಿ ಸಂದೇಹವಿಲ್ಲ. ಮತ್ತು ಸರಕಾರ ಆ ಕುರಿತು ವ್ಯಯ ಮಾಡುತ್ತಲೇ ಇರುವಂತಾಗಿದೆ.

## ಕೈಗಾರಿಕೆಗೆ ಕಾಯಕಲ್ಪ

ಈಗ ನಾನು ಕೈಗಾರಿಕೆ ಬಗ್ಗೆ ಮಾತನಾಡಬೇಕಾಗಿದೆ. ರಾಜ್ಯಪಾಲರು ತಮ್ಮ ಭಾಷಣದಲ್ಲಿ ಕೈಮಗ್ಗ ಉದ್ದಿಮೆ ಕುರಿತು ಪ್ರಸ್ತಾಪ ಮಾಡಿದರು ನನ್ನ ಪ್ರಕಾರ ಕೈಮಗ್ಗದ ಉದ್ದಿಮೆಯಲ್ಲಿ ಆತಂಕವುಂಟಾಗಲು ಕಾರಣ ಅದರ ಮೇಲೆ ಹೇರಲಾದ ಹತೋಟಿ ಎನ್ನಬಹುದು. ಭಾರತದಲ್ಲಿ ಅರ್ಥವ್ಯವಸ್ಥೆ ಎಷ್ಟರ ಮಟ್ಟಿಗೆ ಸಡಿಲವಾಗಿದೆ ಅಂದರೆ ಯಾವ ಬಗೆಯಲ್ಲಿ ಅದನ್ನು ಸರಿಪಡಿಸುವುದೆಂಬ ವಿಚಾರ ಮಾಡಲೂ ಸಾಧ್ಯವಾಗಲಾರದು. ಒಂದು ಹಂತದಲ್ಲಿ ನನಗೆ ಮನದಟ್ಟಾದಂತೆ,

ನೂಲಿನಿಂದ ನೇಯ್ದ ಬಟ್ಟೆ ನೂಲಿಗಿಂತಲೂ ಅಗ್ಗವಾಗಿಯೂ, ಹತ್ತಿಯಿಂದ ನೂತ ನೂಲು ಹತ್ತಿಗಿಂತಲೂ ಅಗ್ಗವಾಗಿರುವಂಥ ವಿದ್ಯಮಾನ ನಮ್ಮಲ್ಲಿದೆ. ಉದ್ಯೋಗದ ಸಂದರ್ಭದಲ್ಲಿಯೂ ಹಾಗೆಯೇ. ವಿದ್ಯಾವಂತ ಯುವಕರ ವೇತನಕ್ಕಿಂತ ಅವಿದ್ಯಾವಂತ ವ್ಯಕ್ತಿಯ ವೇತನ ಹೆಚ್ಚಾಗಿದೆ. ಮಧ್ಯಮ ವರ್ಗದವರ ಒಂದು ಸೀಮಿತವಾದ ಆರ್ಥಿಕ ಸ್ಥಿತಿಯೇ ನಮ್ಮ ರಾಜ್ಯವನ್ನು ಕಾಡುವಂಥ ಮಹತ್ವದ ಸಮಸ್ಯೆ. ಆರು ಮಂದಿಯ ಒಂದು ಸಂಸಾರ, ಅದರ ಒಂದೋ ಎರಡೋ ಸದಸ್ಯರ ಸಂಪಾದನೆಯನ್ನು ಅವಲಂಬಿಸಿರುತ್ತದೆ. ಬೆಲೆಗಳು ಏರಲಿ ಅಥವಾ ಇಳಿಯಲಿ, ಮಧ್ಯಮ ವರ್ಗದ ಕುಟುಂಬದ ಮೂಲಭೂತ ಸಮಸ್ಯೆಯನ್ನು ಅದು ನಿವಾರಿಸಲಾಗದು. ಸರಕಾರ ಈ ಮಧ್ಯಮ ವರ್ಗದವರ ಕೈಗಳಿಗೆ ಒಂದು ಆರ್ಥಿಕ ಬಲವನ್ನು ನೀಡದೆ ಹೋದಲ್ಲಿ, ಇಂತಹ ಕುಟುಂಬಗಳು ಉಳಿಯುವುದು ಕಷ್ಟಸಾಧ್ಯವೆಂದೇ ನನ್ನ ಭಾವನೆ. ಎಷ್ಟೆಂದರೂ ಮಧ್ಯಮ ವರ್ಗವೇ ನಮ್ಮ ಪ್ರಜಾಪ್ರಭುತ್ವದ ಬೆನ್ನೆಲುಬು ಎಂಬುದನ್ನು ನಾವು ಮರೆಯಬಾರದು.

## ರಾಯಲ ಸೀಮೆಯ ಬರ ನಮ್ಮೆಲ್ಲರ ಬರ

ಸ್ವಾಮೀ, ರಾಯಲ ಸೀಮೆಯ ಪರಿಸ್ಥಿತಿ ನನಗೆ ತಿಳಿದಿದೆ. ನಾನು ದಕ್ಷಿಣ ಕನ್ನಡ ಜಿಲ್ಲೆಯವನಾಗಿದ್ದು, ಅದು ಹಸಿರಿನಿಂದ ತುಂಬಿ ತುಳುಕಾಡುವ ಪರಿಸರವನ್ನು ಹೊಂದಿದ್ದು, ಮಳೆಯ ಪ್ರಮಾಣ ಸಾಕಷ್ಟಿದೆ. ವಿಪರ್ಯಾಸವೆಂದರೆ, ಎಲ್ಲಿ ನೀರು ಬಹಳಷ್ಟು ಬೇಡವೋ, ಅಲ್ಲಿ ಮಳೆಯ ಪ್ರಮಾಣ ಅಧಿಕವಾಗಿರುತ್ತದೆ. ಎಲ್ಲಿ ನೀರು ಬೇಕೋ ಅಲ್ಲಿ ಮಳೆ ಇಲ್ಲ. ರಾಯಲ ಸೀಮೆಯ ಜನರಿಗೆ ನಮ್ಮ ವಿಶೇಷ ಅನುಕಂಪವಿದೆ. ರಾಯಲ ಸೀಮೆಯಲ್ಲಿ ಕಂಡುಬರುವ ಬರ ಕೇವಲ ರಾಯಲ ಸೀಮೆಗಷ್ಟೇ ಸೀಮಿತವಾಗಿರುವುದಲ್ಲ, ಅದು ಸಮಸ್ತ ರಾಜ್ಯಕ್ಕೇ ಅನ್ವಯವಾಗುತ್ತದೆ ಎಂಬುದು ನನ್ನ ಭಾವನೆ. ಸರಕಾರ ಈ ನಿಟ್ಟಿನಲ್ಲಿ ಯಾವುದೇ ಕ್ರಮ ಕೈಗೊಂಡರೂ ಅದು ಸಾಮಾನ್ಯ ಜನರ ದೃಷ್ಟಿಯಲ್ಲಿ ನಗಣ್ಯವಾಗುತ್ತದೆ. ಯಾಕೆಂದರೆ, ಜನರು ಸರಕಾರದಿಂದ ಬಹಳಷ್ಟನ್ನು ನಿರೀಕ್ಷಿಸುತ್ತಾರೆ. ಪ್ರಾಯಶಃ ಸರಕಾರಕ್ಕೆ ಅಷ್ಟೊಂದನ್ನು ಮಾಡಲು ಸಾಧ್ಯವಾಗದೇನೋ. ನಾನೊಂದು ಅಭಿಪ್ರಾಯವನ್ನು ಸೂಚಿಸಬಲ್ಲೆ. ಯಾವ ಭಾಗ ಹೆಚ್ಚು ಬರಪೀಡಿತವೋ ಅಂತಹ ಸ್ಥಳಗಳಲ್ಲಿ ಸರಕಾರ ಶಾಶ್ವತವಾದ ಪರಿಹಾರೋಪಾಯವನ್ನು ಕಂಡುಹಿಡಿಯಬೇಕು. ರಾಯಲ ಸೀಮೆಯಲ್ಲಿ ನೀರಾವರಿಯ ಬಹುದೊಡ್ಡ ಯೋಜನೆಯನ್ನು ಹಮ್ಮಿಕೊಳ್ಳುವುದು ಅನಿವಾರ್ಯವಿದೆ. ಯಾವುದೇ ರಾಜಕೀಯ

ಪಕ್ಷ ಮಳೆ ತರಿಸಲು ಸಾಧ್ಯವಿಲ್ಲ. ಇದಕ್ಕೆ ಸೂಕ್ತ ಪರಿಹಾರೋಪಾಯವನ್ನು ಕಂಡುಕೊಳ್ಳುವುದೇ ಉಚಿತವೆನ್ನಬಹುದು. ಈ ಮಾತುಗಳೊಂದಿಗೆ ನಾನು ಈ ವಿಧೇಯಕವನ್ನು ಅನುಮೋದಿಸುತ್ತೇನೆ.

***

## ಸಿಲೋನಿನಲ್ಲಿ

## ಪೌರತ್ವದ ಸಮಸ್ಯೆ

## 12 ಮೇ 1952

ಶ್ರೀ ಟಿ. ಅನಂತ ಪೈ: ಸಭಾಧ್ಯಕ್ಷರೇ, ಭಾರತದಿಂದ ಯಾವುದೇ ದೇಶಕ್ಕೆ ವಲಸೆ ಹೋದ ಜನರಿಗೆ ಆ ದೇಶದ ಸ್ಥಾನಮಾನ ನೀಡದಂಥ ಪರಿಸ್ಥಿತಿ ಒಂದು ಕಾಲದಲ್ಲಿ ಇತ್ತು. ಯಾಕೆಂದರೆ, ಭಾರತ ಅಂದು ಗುಲಾಮಗಿರಿಗೆ ಒಳಗಾದ ರಾಷ್ಟ್ರವಾಗಿತ್ತು. ಇದೀಗ ಎಲ್ಲವೂ ಬದಲಾಗಿದೆ. ನಮ್ಮ ದೇಶ ಇಂದು ಸ್ವತಂತ್ರ ರಾಷ್ಟ್ರವಾಗಿದೆ. ಸಿಲೋನ್ ಕೂಡಾ ಸ್ವತಂತ್ರ ರಾಷ್ಟ್ರ. ಸಿಲೋನ್ ದೇಶದ ಪ್ರಜೆಗಳಿಗೂ ನಮ್ಮ ದೇಶದ ಪ್ರಜೆಗಳಿಗೂ ಯಾವುದೇ ವ್ಯತ್ಯಾಸ ಕಾಣುವುದಿಲ್ಲ. ಭಾರತ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರಿಸಿಕೊಂಡು ತನ್ನ ಪ್ರಜೆಗಳಿಗೆ ಮತದಾನದ ಹಕ್ಕನ್ನು ನೀಡಿದೆ. ಪರದೇಶಗಳಿಂದ ಬಂದು ಇಲ್ಲಿ ನೆಲೆಸಿರುವ ಪ್ರಜೆಗಳಿಗೂ ಮತದಾನ ಮಾಡುವಂಥ ಅಧಿಕಾರವನ್ನು ನಾವು ವಿಸ್ತರಿಸಿದ್ದೇವೆ.

### ಮತದಾನದ ಹಕ್ಕು ಜನ್ಮಸಿದ್ಧ

ನನ್ನ ಮತ ಕ್ಷೇತ್ರದ ಒಂದು ಉದಾಹರಣೆಯನ್ನು ಕೊಡುವುದಾದರೆ, ಅಲ್ಲಿ ಓರ್ವ ಸ್ವಿಸ್ ಮಹಿಳೆಗೆ ಮತದಾನದ ಹಕ್ಕನ್ನು ನೀಡಲಾಗಿದೆ. ಆಕೆ ಭಾರತದಲ್ಲಿ ಅನೇಕ ವರ್ಷಗಳಿಂದ ವಾಸ್ತವ್ಯಕ್ಕಿದ್ದಾರೆ. ಭಾರತ ಸರಕಾರ ಇಂದು ಸಿಲೋನ್ ದೇಶಕ್ಕೆ ಅಪೇಕ್ಷೆ ಸಲ್ಲಿಸುತ್ತಿರುವ ಒಂದೇ ಒಂದು ವಿಷಯವೇನೆಂದರೆ, ಅವರು ತಮ್ಮ ದೇಶದಲ್ಲಿ ಪರಂಪರಾಗತವಾಗಿ ನೆಲೆಸಿರುವ ಭಾರತೀಯ ಪ್ರಜೆಗಳಿಗೆ ಮತದಾನ ಮಾಡುವ ಸೌಲಭ್ಯವನ್ನು ಕಲ್ಪಿಸಿಕೊಡಬೇಕೆಂಬುದು. ಅಂತೆಯೇ ಅಂಥವರನ್ನು ತಮ್ಮ ದೇಶದ ಪ್ರಜೆಗಳನ್ನಾಗಿ ಪರಿಗಣಿಸಬೇಕೆಂಬುದು. ಅಲ್ಲಿನ

ಭಾರತೀಯರು ರಬ್ಬರ್ ಮತ್ತು ಚಹಾ ತೋಟಗಳಲ್ಲಿ ತಮ್ಮ ಜೀವಮಾನವನ್ನು ತೇಯ್ದು, ಆ ದೇಶದ ಪ್ರಗತಿಗೆ ಕಾರಣರಾಗಿದ್ದಾರೆ. ಅವರ ಈ ಬಗೆಯ ಕಾಯಕವನ್ನು ಪೂರ್ತಿಯಾಗಿ ಸ್ವೀಕರಿಸಲಾಗಿದ್ದರೂ, ಇನ್ನೂ ಮತದಾನದ ಹಕ್ಕಿಗಾಗಿ ಪರಿಗಣಿಸಲಾಗಿಲ್ಲ.

ಪ್ರಾಯಶಃ ಭಾರತೀಯ ಕಾರ್ಮಿಕರು ಸಿಲೋನ್‌ನಲ್ಲಿ ದುಡಿಯದೆ ಇರುತ್ತಿದ್ದರೆ, ಇಂದು ಸಿಲೋನ್ ಈ ಮಟ್ಟಕ್ಕೆ ಅಭಿವೃದ್ಧಿ ಹೊಂದುತ್ತಿರಲಿಲ್ಲ ಎಂದು ಧೈರ್ಯವಾಗಿ ಹೇಳಬಹುದು. ಈ ಭಾರತೀಯ ಪ್ರಜೆಗಳಿಗೆ ಮತ ಹಕ್ಕು ಚಲಾಯಿಸುವ ಅಧಿಕಾರ ನೀಡುವುದರೊಂದಿಗೆ ಸಿಲೋನ್‌ನಲ್ಲಿ ಯಾವುದೇ ಬದಲಾವಣೆ ಆಗುತ್ತದೆ ಎಂದು ನನಗನಿಸುವುದಿಲ್ಲ. ಈ ಭಾರತೀಯ ತಮ್ಮ ಮೂಲಭೂತ ಹಕ್ಕುಗಳನ್ನು ಇದೀಗ ಕೇಳುತ್ತಿದ್ದಾನೆ. ಈ ಕೇಳಿಕೆ ನ್ಯಾಯಬದ್ಧವಾದುದು ಮತ್ತು ಸಮಂಜಸವಾದುದು.

## ಪರಸ್ಪರ ಸಂಬಂಧ ಗಟ್ಟಿಯಾಗಲಿ

ಮತ ಚಲಾವಣೆಯ ಹಕ್ಕನ್ನು ನೀಡದೇ ಹೋದಲ್ಲಿ ಎರಡೂ ದೇಶಗಳ ನಡುವಿನ ಪರಸ್ಪರ ಸೌಹಾರ್ದಯುತ ಸಂಬಂಧ ಕೆಡುವ ಸಾಧ್ಯತೆಗಳಿವೆ. ಭಾರತ ಮತ್ತು ಸಿಲೋನ್– ಈ ಉಭಯ ದೇಶಗಳು ಪರಸ್ಪರ ಒಂದಾಗಿ ಅನೇಕ ಮಹತ್ವದ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಹೆಣಗಾಡುತ್ತಿವೆ. ಈವೊಂದು ಕಾರಣದಿಂದಾಗಿ, ಎರಡೂ ದೇಶಗಳ ನಡುವಿನ ಸಂಬಂಧ ಬಿಗಡಾಯಿಸಬಾರದು ಎಂಬುದೇ ಕಳಕಳಿಯ ಅಂಶ. ಅಲ್ಲಿಯ ಭಾರತೀಯರಿಗೆ ಮತಚಲಾಯಿಸುವ ಹಕ್ಕನ್ನು ನೀಡಿದ್ದೇ ಆದಲ್ಲಿ ಎರಡೂ ದೇಶಗಳ ನಡುವಿನ ಪರಸ್ಪರ ಸಂಬಂಧ ಗಟ್ಟಿಯಾಗುವುದರ ಜತೆಗೆ ಎರಡೂ ದೇಶಗಳು ಒಂದಾಗಿ ಪರಸ್ಪರ ಸಹಾಯ ಪಡೆಯಲು ಅನುಕೂಲವಾಗುತ್ತದೆ. ಒಂದು ವೇಳೆ ಮತದಾನದ ಹಕ್ಕನ್ನು ನಿರಾಕರಿಸಿದ್ದೇ ಆದಲ್ಲಿ ಉಭಯ ದೇಶಗಳ ಸಂಬಂಧ ಬಿಗಡಾಯಿಸಬಹುದು ಮಾತ್ರವಲ್ಲ ಅದು ಹಾಗೆಯೇ ಉಳಿದು ಹೋಗುವ ಸಂಭವಗಳಿವೆ.

ದೊಡ್ಡ ದೊಡ್ಡ ಸಮಸ್ಯೆಗಳನ್ನು ನಿಭಾಯಿಸುವ ಸಂದರ್ಭಗಳಲ್ಲಿ ಇನ್ನಷ್ಟು ಸಮಸ್ಯೆಗಳನ್ನು ಅದರ ಮುಂದೆ ಪರಸ್ಪರ ಸೇರಿಕೊಂಡು ಅನೇಕ ಮಹತ್ವದ ಸಮಸ್ಯೆಗಳನ್ನು ಬಗೆಹರಿಸುವ ದೃಷ್ಟಿಯಿಂದ ಹೆಣಗಾಡಬೇಕಾಗುತ್ತದೆ. ಈವೊಂದು

ಕಾರಣದಿಂದಾಗಿ ಎರಡೂ ದೇಶಗಳ ನಡುವಿನ ಸಂಬಂಧ ಬಿಗಡಾಯಿಸಬಾರದು ಎಂಬುದೇ ಕಳಕಳಿಯ ಅಂಶ. ಅಲ್ಲಿನ ಭಾರತೀಯರಿಗೆ ಮತ ಚಲಾವಣೆಯ ಹಕ್ಕನ್ನು ನೀಡಿದ್ದೇ ಆದಲ್ಲಿ ಎರಡೂ ದೇಶಗಳ ನಡುವಿನ ಪರಸ್ಪರ ಸಂಬಂಧ ಗಟ್ಟಿಯಾಗುವುದರ ಜತೆಗೆ, ಎರಡೂ ದೇಶಗಳು ಪರಸ್ಪರ ಒಂದಾದರೆ ಅದರಿಂದ ಅನುಕೂಲವಾಗುತ್ತದೆ. ಒಂದು ವೇಳೆ ಮತದಾನದ ಹಕ್ಕನ್ನು ನಿರಾಕರಿಸಿದ್ದೇ ಆದಲ್ಲಿ ಎರಡೂ ದೇಶಗಳ ನಡುವಿನ ಸಂಬಂಧ ಬಿಗಡಾಯಿಸಿ ಸದಾಕಾಲಕ್ಕೆ ಒಂದು ಕಳಂಕವಾಗಿ ಉಳಿದು ಹೋಗುವ ಸಾಧ್ಯತೆಗಳಿವೆ. ದೊಡ್ಡ ದೊಡ್ಡ ಸಮಸ್ಯೆಗಳನ್ನು ನಿಭಾಯಿಸುವ ಸಂದರ್ಭಗಳಲ್ಲಿ ಈ ವೈಮನಸ್ಸು ಮತ್ತೆ ಮತ್ತೆ ಕಾಡುವ ಸಾಧ್ಯತೆಗಳೂ ಇಲ್ಲದಿಲ್ಲ. ಸಂಯುಕ್ತ ರಾಷ್ಟ್ರ ಸಂಘದ ಎದುರು ಅನೇಕ ಬೃಹತ್ ಸಮಸ್ಯೆಗಳನ್ನು ಒಡ್ಡಲಾಗಿದ್ದು, ಅಂತಹ ಸಂದರ್ಭಗಳಲ್ಲಿ ಇನ್ನಷ್ಟು ಸಮಸ್ಯೆಗಳನ್ನು ಅದರ ಮುಂದೆ ನಿವೇದಿಸುವುದು ಸರಿಯಾಗುವುದಿಲ್ಲ.

## ಜನತೆ ನಿರ್ಧರಿಸಲಿ

ಮಿತ್ರರಾದ ಡಾ. ಮೆನನ್ ಸೂಚಿಸಿರುವಂತೆ ಸಿಲೋನ್ ಜನತೆಯ ಸಮಕ್ಷಮ ಭಾರತದ ಜನತೆ ಈ ವಿಷಯವನ್ನು ಮುಂದಿಡಬೇಕು ಮತ್ತು ಸಿಲೋನಿನಲ್ಲಿ ನೆಲೆಸಿರುವ ಭಾರತೀಯರು ಆ ದೇಶದ ಭಾಗವಾಗಿರುತ್ತಾರೆ ಎಂಬ ವಿಷಯವನ್ನು ವಿಷದಪಡಿಸಬೇಕು. ಮಾತ್ರವಲ್ಲ ಅವರನ್ನು ಆ ನೆಲೆಯಲ್ಲೇ ಕಾಣಬೇಕು. ಸಿಲೋನ್ ದೇಶದ ಆರ್ಥಿಕ ಪ್ರಗತಿಯಲ್ಲಿ ಈ ಭಾರತೀಯರು ತಡೆಯುಂಟು ಮಾಡುತ್ತಾರೆ ಎಂಬುದು ಶುದ್ಧ ತಪ್ಪು. ಆ ದೇಶದ ಆರ್ಥಿಕ ಪ್ರಗತಿಯಲ್ಲಿ ಅವರದ್ದೂ ಪಾತ್ರವಿದೆ ಎಂದಷ್ಟೇ ನಾನು ಹೇಳ ಬಯಸುವುದು.

***

## ಮದ್ರಾಸು ಶಾಸನ ಸಭೆಯ ಎರಡನೇ ಅಧಿವೇಶನ

## ಮುಂಗಡ ಪತ್ರದ ಮೇಲಿನ ಚರ್ಚೆ

## 4 ಜುಲೈ 1952

**ಶ್ರೀ ಟಿ. ಅನಂತ ಪೈ:** ಮಾನ್ಯ ಸಭಾಧ್ಯಕ್ಷರೇ, ಸಾಮಾನ್ಯವಾಗಿ ನಾನು ಮುಂಗಡ ಪತ್ರವನ್ನು ಬೆಂಬಲಿಸುವವನೇ. ರಾಜಾಜಿಯುವರು ಕಂಡುಕೊಂಡಂತೆ...

ಮಾನ್ಯ ಸಭಾಪತಿಗಳು: ಮಾನ್ಯ ಸದಸ್ಯರು "ರಾಜಾಜಿ" ಅನ್ನುವ ಬದಲು "ಮಾನ್ಯ ರಾಜಗೋಪಾಲಾಚಾರಿ" ಅಥವಾ "ಮಾನ್ಯ ಮುಖ್ಯಮಂತ್ರಿಗಳು" ಎಂದು ಸಂಬೋಧಿಸುವುದು ಉಚಿತ....

**ಶ್ರೀ ಟಿ. ಅನಂತ ಪೈ:** ಮಾನ್ಯ ಮುಖ್ಯಮಂತ್ರಿಗಳು ನಮ್ಮ ರಾಜ್ಯದಲ್ಲಿ ರಾಜಕೀಯ ವ್ಯವಸ್ಥೆಯ ಕಷ್ಟಗಳನ್ನು ಎದುರಿಸುವ ಜತೆಜತೆಗೆ ಆರ್ಥಿಕ ಸಂಕಷ್ಟಗಳನ್ನು ಎದುರಿಸುವಂತೆ ತೋರುತ್ತಿದೆ. ಮದ್ಯಪಾನ ನಿಷೇಧದ ಮಸೂದೆಯನ್ನೇ ಮುಖ್ಯವಾದ ಕಾರಣವಾಗಿಸಿಕೊಂಡು ಅದನ್ನೇ ಸರಕಾರ ತನ್ನ ಮುಂಬಾಗಿಲಲ್ಲಿ ಇರಿಸಿಕೊಂಡು ನಮ್ಮ ಇಂದಿನ ಸ್ಥಿತಿಗೆ ಕಾರಣಗಳನ್ನು ಹುಡುಕುತ್ತಿರುವಂತೆ ತೋರುತ್ತಿದೆ. ಅಂತೆಯೇ ಮದ್ಯಪಾನ ನಿಷೇಧ ಇಲ್ಲವಾಗಿದ್ದರೆ ನಮ್ಮ ಆರ್ಥಿಕ ಸ್ಥಿತಿ ಉತ್ತಮವಾಗಿರುತ್ತಿತ್ತು ಎಂದು ಪ್ರತಿಪಾದಿಸುವಂತಿದೆ.

### ಪಾನ ನಿಷೇಧದ ಒಳಿತು ಕೆಡುಕು

ಮದ್ಯಪಾನ ನಿಷೇಧ ಮಸೂದೆಯ ಕುರಿತಂತೆ ಇಷ್ಟೊಂದು ದೂರುವ ಅವಶ್ಯಕತೆ ಇಲ್ಲವೆಂದು ನನಗನಿಸುತ್ತಿದೆ. ಪಾನ ನಿಷೇಧದ ಒಳಿತು ಕೆಡುಕುಗಳು ಏನೇ ಇರಲಿ, ನಮ್ಮ ರಾಜ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಈ ಮಸೂದೆಯ ಅನುಷ್ಠಾನದಿಂದ ನಾವು ಕಳಕೊಂಡದ್ದನ್ನು ಇನ್ನಿತರ ತೆರಿಗೆಗಳನ್ನು ಹೇರುವ ಮೂಲಕ ಸಂಪಾದಿಸಿದ್ದೇವೆ. ನಮ್ಮ ರಾಜ್ಯಕ್ಕೆ ಸಂಬಂಧಿಸಿದಂತೆ, ಸಾಮಾನ್ಯ ಕಂದಾಯದಲ್ಲಿ ಯಾವುದೇ ಕುಂದು ಕಂಡುಬರುತ್ತಿಲ್ಲ. ಮುಂಗಡ ಪತ್ರವನ್ನು ನಾವು ಅವಲೋಕಿಸಿದ್ದೇ ಆದರೆ ನಾವು ಬಹಳ ಕೆಟ್ಟ ಪರಿಸ್ಥಿತಿಯಲ್ಲಿ ಇದ್ದೇವೆ ಎಂಬುದು ವೇದ್ಯವಾದೀತು. ಇದನ್ನು ಯಾಕೆ ಹೇಳುತಿದ್ದೇನೆ ಅಂದರೆ, ನಾವು ನಿಜಸ್ಥಿತಿಯನ್ನು ಎದುರಿಸಬೇಕಾಗುತ್ತದೆ. ನಾವು ಎದುರಿಸುವಂಥ

ಸಂಕಷ್ಟಗಳನ್ನು ಉತ್ತಮ ರೀತಿಯಲ್ಲಿ ನಿಭಾಯಿಸುವಂಥ ಅವಶ್ಯಕತೆ ಇದೆ. ನಮ್ಮ ಖರ್ಚು ಹೆಚ್ಚಾಗುತ್ತಲೇ ಹೋಗುತ್ತಿದೆ. ಹೆಚ್ಚು ಹೆಚ್ಚು ಯೋಜನೆಗಳ ಅನುಷ್ಠಾನಕ್ಕಿರುವ ಬೇಡಿಕೆಗಳು ಮುಂದಕ್ಕೆ ಬರುತ್ತಲಿವೆ. ಅದು ಸದನದ ಒಳಗಿನಿಂದಲೂ ಹೊರಗಿನಿಂದಲೂ ಇರಬಹುದು. ಇದಕ್ಕೆ ಕಾರಣವೆಂದರೆ ನಮ್ಮ ಮತದಾರರಿಗೆ ನಾವು ಅನೇಕ ಭರವಸೆಗಳನ್ನು ನೀಡಿದ್ದೇವೆ – ಸರಕಾರದ ಮುಂದಿರುವ ಕಷ್ಟಗಳು ಏನೇ ಇರಲಿ, – ಆ ಭರವಸೆಗಳನ್ನು ಪೂರೈಸುವುದು ಅವಶ್ಯವಿದೆ. ನಮ್ಮ ಆತಂಕವನ್ನು ಯಾರೂ ಅರ್ಥಮಾಡಿಕೊಳ್ಳಬಲ್ಲರು. ಅದೇ ವೇಳೆ ರಾಜ್ಯ ಯಾವುದೇ ಸಾಲವನ್ನು ಮರುಪಾವತಿ ಮಾಡುವ ಸ್ಥಿತಿಯಲ್ಲಿ ಇರಬೇಕೆಂದು ಎಚ್ಚರವಹಿಸುವುದು ಅವಶ್ಯ. ಯಾವಾಗ ರಾಜ್ಯ ಸಾಲತೀರಿಸುವ ಶಕ್ತಿಯಿಂದಿರುತ್ತದೆಯೋ ಅಲ್ಲಿಯವರೆಗೆ ಎಲ್ಲ ಕಷ್ಟಗಳ ಪರಿಹಾರಕ್ಕೂ ಸ್ಪಂದಿಸುವ ಸ್ಥಿತಿಯಲ್ಲಿರುತ್ತದೆ ಎಂಬುದನ್ನು ಮನದಟ್ಟುಮಾಡಿಕೊಳ್ಳಬಹುದು. ಅಂತೆಯೇ ಜನರ ಅವಶ್ಯಕತೆಗಳನ್ನು ಪೂರೈಸುವ ಸ್ಥಿತಿಯಲ್ಲಿರುತ್ತದೆ ಎನ್ನಬಹುದು.

## ತೆರಿಗೆಯ ತರಾವರಿ

ಇಷ್ಟೊಂದು ವಿಷಯಗಳ ಬಗೆಗೆ ಗಮನಹರಿಸಬೇಕಾದ ಅವಶ್ಯಕತೆಯಿರುವುದರಿಂದ ನಾವು ಕೆಲವು ತೆರಿಗೆಗಳನ್ನು ಏರಿಸುವ ಅವಶ್ಯಕತೆ ಇದ್ದೇ ಇರುತ್ತದೆ. ವಿರೋಧ ಪಕ್ಷದವರು ಮಂಡಿಸಿದ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಬೇಕಾದ ಪಕ್ಷದಲ್ಲಿ ಬಹುಶಃ ಇಂದಿನ ತೆರಿಗೆಗೆ ಹತ್ತು ಪಟ್ಟು ತೆರಿಗೆಯನ್ನು ನಾವು ವಿಧಿಸಬೇಕಾದ್ದು ಅನಿವಾರ್ಯವೆನಿಸುತ್ತಿದೆ. ತೆರಿಗೆಗೆ ಬದಲಾದ ಬೇರೇನಾದರೂ ಅವರು ಯೋಚಿಸುವಂತ್ತಿದ್ದಲ್ಲಿ ಪ್ರಾಯಶಃ ಮುಕ್ತ ಮಾರುಕಟ್ಟೆಯಲ್ಲಿ ಸಾಲ ಪಡೆಯಬೇಕಾದೀತು. ನನಗನಿಸುತ್ತಿದೆ ಅವರು ಬಹು ದೊಡ್ಡ ತಪ್ಪನ್ನು ಮಾಡುತ್ತಿದ್ದಾರೆ. ಪ್ರಸಕ್ತ ಸರಕಾರ ಸ್ಥಿರವಾಗಿರುವ ಕುರಿತಂತೆ ಮುಕ್ತ ಮಾರುಕಟ್ಟೆಯಲ್ಲಿ ಭಾವನೆ ಮೂಡಿಸುವುದು ಒಂದು ವಿಷಯವಾದರೆ ಸರಕಾರ ಉತ್ಪನ್ನಕಾರಕ ವಿಷಯಗಳಿಗೆ ಹಣ ತೊಡಗಿಸುತ್ತಿದೆಯೇ ಎಂಬುದನ್ನು ಖಾತ್ರಿಪಡಿಸಿಕೊಳ್ಳಬೇಕಾಗಿದೆ. ಅಂತೆಯೇ ಸರಕಾರ ವಿಶ್ವಾಸದಿಂದ ತನ್ನ ಕಾರ್ಯಭಾರವನ್ನು ನಿರ್ವಹಿಸುವಂತಿರಬೇಕು. ಮುಖ್ಯಮಂತ್ರಿ ಮಹೋದಯರು ಸರಿಯಾಗಿಯೇ ಹೇಳಿದ್ದಾರೆ. ಅದೇನೆಂದರೆ ಮುಕ್ತ ಮಾರುಕಟ್ಟೆಯಲ್ಲಿ ಸಾಲ ಯಾಚನೆಗೆ ಹೋಗುವ ವೇಳೆ ವಿಶ್ವಾಸ ಮತ ಯಾಚನೆ ಅನಿವಾರ್ಯವಾಗುತ್ತದೆ. ಹಾಗಾಗಿ ಸರಕಾರ ಸ್ಥಿರವಾಗಿದೆ ಎಂಬುದನ್ನು ಹೊರ ಜಗತ್ತಿಗೆ ನಾವು

ತೋರಿಸಿಕೊಡಬೇಕಾಗಿರುವುದೂ ಅನಿವಾರ್ಯವೆನಿಸುತ್ತದೆ. ದೇಶದಲ್ಲಿ ನಾವೊಬ್ಬರೇ ಸಾಲಗಾರರಲ್ಲ. ಪ್ರತಿಯೊಂದು ರಾಜ್ಯವೂ ಇದನ್ನೇ ಮಾಡುತ್ತಿರುವುದು. ಪ್ರತಿಯೊಂದು ರಾಜ್ಯವೂ ಕೊರತೆ ಮುಂಗಡ ಪತ್ರವನ್ನೇ ಮಂಡಿಸಿರುತ್ತದೆ. ಕೇಂದ್ರ ಸರಕಾರವೂ ತನ್ನ ಮಹತ್ವಾಕಾಂಕ್ಷೆಯ ಕಾರ್ಯಕ್ರಮಗಳನ್ನು, ಅಂದರೆ ಪಂಚವಾರ್ಷಿಕ ಯೋಜನೆ ಮುಂತಾದವುಗಳನ್ನು ಪ್ರಕಟಿಸಬೇಕಾದರೆ ಸಾಕಷ್ಟು ಬಂಡವಾಳ ಇರಲೇ ಬೇಕು. ಇಷ್ಟೆಲ್ಲ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಬೇಕಾದರೆ ಬಂಡವಾಳವನ್ನು ಕ್ರೋಢೀಕರಿಸುವರೆ ನಾವು ಹೇಗೆ ಮುಂದಡಿಯಿಡಬೇಕೆಂಬುದೇ ತಿಳಿಯದಾಗಿದೆ.

ಈ ವರ್ಷ ನಾವು ಮುಕ್ತ ಮಾರುಕಟ್ಟೆಯಲ್ಲಿ ಮಾಡಿದ ಸಾಲಕ್ಕೆ ಎರಡು ಕೋಟಿ ರೂಪಾಯಿಗಳನ್ನು ಪಾವತಿಸಬೇಕಾಗಿದೆ. ಮಾನ್ಯ ಅರ್ಥ ಮಂತ್ರಿಗಳು ಈ ಕೊರತೆಯನ್ನು ನೀಗಿಸುವ ಸಲುವಾಗಿ ಮತ್ತೆ ಮುಕ್ತ ಮಾರುಕಟ್ಟೆಯಲ್ಲಿ ಸಾಲಕ್ಕೆ ಮೊರೆಹೋಗಬಹುದೆಂದು ಹೇಳಿದ್ದಾರೆ. ಇಂದಿನ ಸ್ಥಿತಿಯಲ್ಲಿ ಹೀಗಿದ್ದು ಭವಿಷ್ಯದಲ್ಲಿ ನಮ್ಮ ಪರಿಸ್ಥಿತಿ ಹೇಗಿರಬಹುದೆಂದು ಹೇಳುವುದೇ ದುಸ್ತರವೆನಿಸುತ್ತದೆ. ಕಂದಾಯದ ಕಾಯ್ದಿಟ್ಟ ಬಂಡವಾಳದಿಂದ ನಾವು ಮೊಬಲಗನ್ನು ತರಿಸಿಕೊಳ್ಳುವುದು ಅಷ್ಟೇನೂ ಒಳ್ಳೆಯ ಪರಿಕ್ರಮವೆನಿಸಲಾರದು.

ಈ ಬಂಡವಾಳ ಸೊರಗಿದ ವರ್ಷಗಳಲ್ಲಿ ಉಪಯೋಗಕ್ಕಾಗಿ ಇರುವಂಥದ್ದು. ಇಂದಿನ ಅವಧಿ ಸೊರಗಿದ ಸಮಯವಲ್ಲವೆಂದು ನಾವು ಧಾರಾಳವಾಗಿ ಹೇಳಬಹುದು. ಸೊರಗಿದ ದಿನಗಳು ಮುಂದೆ ಬರಲಿದ್ದು ಅದಕ್ಕಾಗಿ ನಾವು ಈಗಲೇ ತಯಾರಿರಬೇಕಾಗಿರುವುದು ಅನಿವಾರ್ಯ. ಈ ಎಲ್ಲಾ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡರೆ ಸ್ವಲ್ಪ ಮಟ್ಟಿನ ತೆರಿಗೆಯನ್ನು ವಿಧಿಸಬೇಕಾಗಿರುವ ಅನಿವಾರ್ಯತೆ ಕಂಡುಬರುತ್ತದೆ.

## ಎಷ್ಟು ಬಟ್ಟೆಯೋ ಅಷ್ಟಕ್ಕೇ ಕುಲಾವಿ

ಆರ್ಥಿಕತೆಯ ವಿಷಯದಲ್ಲಿ ನಾವು ವಿಮರ್ಶಿಸುವ ಹಾಗೆ, ನಮ್ಮ ಖರ್ಚು ವೆಚ್ಚಗಳ ಕುರಿತು ಆಲೋಚಿಸಬೇಕಾದ್ದು ಅವಶ್ಯ. ಖರ್ಚು ಮಾಡಬೇಕಾದ ನಾವು ಹಣವನ್ನು ತೊಡಗಿಸಬೇಕಾಗುತ್ತದೆ ಎಂಬುದು ಸಾಮಾನ್ಯ ಜ್ಞಾನ. ನಮ್ಮ ರಾಜ್ಯದೊಳಗಿನ ವಿಷಯಗಳಿಗೆ ಸಂಬಧಿಸಿದ ಅರ್ಥ ನೀತಿಯಲ್ಲಿ ನಮಗೆ ಎಷ್ಟು ಆದಾಯವಿದೆಯೋ ಅದಕ್ಕೆ ಅನುಗುಣವಾಗಿ ವ್ಯಯ ಮಾಡುವುದೆಂಬುದು

ಸಮಂಜಸವಾದುದು. ಸಾರ್ವಜನಿಕ ಆರ್ಥಿಕತೆಯಲ್ಲಿ ಹೇಗಿರುತ್ತದೆ ಅಂದರೆ ಸರಕಾರ ಎಷ್ಟು ವ್ಯಯ ಮಾಡಬೇಕೋ ಅಷ್ಟಕ್ಕೆ ಹಣವನ್ನು ಕೂಡಿಹಾಕಬೇಕು. ಸಾರ್ವಜನಿಕ ಆರ್ಥಿಕತೆಯನ್ನು ನಿಭಾಯಿಸುವ ಸಂದರ್ಭದಲ್ಲಿ ಒಂದು ಗಾದೆಯನ್ನು ನೆನಪಿನಲ್ಲಿರಿಸಿಕೊಳ್ಳುವುದು ಅವಶ್ಯ– "ಎಷ್ಟು ಬಟ್ಟೆಯೋ ಅಷ್ಟಕ್ಕೆ ಮಾತ್ರ ಕುಲಾವಿಯನ್ನು ಹೊಲಿಸಿಕೊಳ್ಳಬೇಕು". ಸುಧಾರಿತ ರಾಜ್ಯದ ಒಂದು ಪರಿಕಲ್ಪನೆ ನಮ್ಮ ಮುಂದೆ ಇದೆ. ಅದು ಮಹತ್ವಾಕಾಂಕ್ಷೆಯೂ ಹೌದು. ಆದರೆ, ಶರೀರ ದೊಡ್ಡದಿದ್ದು ಬಟ್ಟೆ ಕಡಿಮೆಯಿದ್ದಾಗ ಇಡೀ ಶರೀರವನ್ನು ಮುಚ್ಚಲು ಅವಶ್ಯವಾದಂತೆ ಶರೀರದ ಉಳಿದ ಭಾಗ ಬತ್ತಲೆಯಾಗುವ ಸಾಧ್ಯತೆಯಿದೆ. ಸಾರ್ವಜನಿಕ ಆರ್ಥಿಕತೆಯನ್ನು ನಿಭಾಯಿಸುವವರು ಈ ಗಾದೆ ಮಾತನ್ನು ನೆನಪಿನಲ್ಲಿಟ್ಟುಕೊಳ್ಳುವುದು ಉಚಿತ. ನಮ್ಮ ಆರ್ಥಿಕತೆ ಸಫಲವಾದ ಆರಂಭದೊಂದಿಗೆ ತೊಡಗಲಿ. ಆ ಬಗೆಗೆ ವಿರೋಧ ಪಕ್ಷದವರಿಗೆ ಎಷ್ಟು ಕಾಳಜಿಯಿದೆಯೋ ಅಷ್ಟೇ ನಮಗೂ ಇದೆ ಎಂದು ತಿಳಿದಿರಲಿ. ಮದ್ಯಪಾನ ನಿಷೇಧವೇ ನಮ್ಮ ಆರ್ಥಿಕ ದುಃಸ್ಥಿತಿಗೆ ಕಾರಣವಲ್ಲವೆಂದು ನಾನು ಮತ್ತೊಮ್ಮೆ ಹೇಳ ಬಯಸುತ್ತೇನೆ.

ಇಂದಿನ ಅವಶ್ಯಕತೆ ಏನೆಂದರೆ ನಮ್ಮ ಖರ್ಚಿನ ಮೇಲೆ ನಮಗೆ ಹಿಡಿತವಿರಬೇಕು. ಮದ್ಯಪಾನ ನಿಷೇಧವಿಲ್ಲದೆ ಹೋದಲ್ಲಿ ನಾವು ಸುಸ್ಥಿತಿಯಲ್ಲಿರುತ್ತಿದ್ದೆವು ಎಂಬುದಾಗಿ ಬೇರೆ ಬೇರೆ ವಲಯಗಳಿಂದ ನಮಗೆ ದೂರಿನ ವಿಷಯ ಕೇಳಿಬರುತ್ತಿದೆ. ಯಾವುದೇ ಕುಂದುಕೊರತೆಯ ಪ್ರಸಂಗ ಬಂದಾಗ ಪಾನ ನಿರೋಧವಿಲ್ಲದೇ ಹೋಗಿದ್ದಲ್ಲಿ ಎಲ್ಲಕ್ಕೂ ಪರಿಹಾರ ಸಿಗುತ್ತಿತ್ತು ಎನ್ನುತ್ತಾರೆ. ಪಾನ ನಿಷೇಧದ ಈ ಹದಿನೆಂಟುವರೆ ಕೋಟಿ ರೂಪಾಯಿ ಇರುತ್ತಿದ್ದರೆ ಸರಕಾರ ನಮಗೆ ನೀಡುವ ಎಲ್ಲಾ ಭತ್ಯೆಗಳನ್ನು ನೀಡುತ್ತಿತ್ತು ಎಂದು ಹೇಳುತ್ತದೆ ಶಿಕ್ಷಣ ಸಂಸ್ಥೆ. ಗಝೆಟೆಡ್ ಅಧಿಕಾರಿಗಳೇತರರ ಅಹವಾಲು ಕೂಡಾ ಇದೇ ರೀತಿಯದ್ದು. ಪಾನ ನಿಷೇಧ ಇಲ್ಲದೆ ಇರುತ್ತಿದ್ದರೆ ತಮ್ಮ ಕುಂದುಕೊರತೆಗಳೆಲ್ಲ ನೀಗುತ್ತಿತ್ತು ಅಂತ. ಸೇತುವೆಗಳು, ರಸ್ತೆಗಳನ್ನೆಲ್ಲ ಅಪೇಕ್ಷೆ ಪಡುವಂಥ ನಮ್ಮಂಥವರೂ ಪ್ರಾಯಶಃ ಈ ಕಾನೂನು ಜಾರಿಗೆ ಬರದೆ ಇರುತ್ತಿದ್ದರೆ ನಾವು ಅಪೇಕ್ಷಿಸಿದ್ದೆಲ್ಲ ಕೈಗೆಟುಕುತ್ತಿತ್ತು ಎಂದು ಭಾವಿಸುತ್ತೇವೆ. ಈ ಹದಿನೆಂಟೂವರೆ ಕೋಟಿ ವರಮಾನದಲ್ಲಿ ನಾವೆಲ್ಲರು ನಮ್ಮ ಅಪೇಕ್ಷೆಗಳಿಗೇ ಗಂಟುಬಿದ್ದರೆ ಯಾವುದೂ ಸಫಲವಾಗದೆ ನಾವೆಲ್ಲಿದ್ದೆವೋ ಅಲ್ಲಿಯೇ ಇರುವಂಥ ಪರಿಸ್ಥಿತಿ ನಿರ್ಮಾಣವಾಗುತ್ತಿತ್ತು.

## ಪಾನನಿಷೇಧವೂ ಸಾಮಾನ್ಯ ತೆರಿಗೆಯೂ

ರಷ್ಯಾದಂಥ ಕಮ್ಯೂನಿಷ್ಟ್ ರಾಷ್ಟ್ರವೂ ಮದ್ಯದ ಮಾರಾಟದಲ್ಲಿ ತೊಡಗಿದ ಆಸಕ್ತರೊಂದಿಗೆ ಶಾಮೀಲಾಗಿರುವುದಕ್ಕೆ ಬಯಸುವುದಿಲ್ಲ. ಅಂದರೆ ರಷ್ಯಾ ಸರಕಾರವೂ ಈ ಬಗೆಯ ತೆರಿಗೆಯನ್ನು ಉಪಯೋಗಿಸುತ್ತಿಲ್ಲ. ಸರಕಾರಕ್ಕೆ ಎಲ್ಲಾ ವಿಧವಾಗಿ ತೆರಿಗೆ ವಿಧಿಸುವ ಅವಕಾಶವಿದೆ. ಮಾತ್ರವಲ್ಲ ಮೂಲಭೂತವಾಗಿ ಹಾಗೆ ವಿಧಿಸುವ ತೆರಿಗೆ ನ್ಯಾಯ ಸಮ್ಮತವೂ ಅಗಿರುತ್ತದೆ. ಹೀಗೆ ಹೇಳಿದಾಗ ಪಾನ ನಿಷೇಧ ದೊಡ್ಡ ಯಶಸ್ಸು ಎಂದು ನಾನು ಹೇಳಿದಂತಾಗುವುದಿಲ್ಲ.

ಗುರಿ ಏನೇ ಇದ್ದರೂ ಈ ಮಸೂದೆಯ ಅನುಷ್ಠಾನವನ್ನು ಪರೀಕ್ಷಿಸಬೇಕಿದ್ದಲ್ಲಿ ಅದರ ಫಲಿತಾಂಶವನ್ನಷ್ಟೇ ಅಭ್ಯಸಿಸಬೇಕಾಗಿದೆ. ಇದರ ಅನುಷ್ಠಾನಕ್ಕೆ ಬಹುಶಃ ಪ್ರತಿ ವರ್ಷ ಸುಮಾರು ಒಂದು ಕೋಟಿ ರೂಪಾಯಿ ವೆಚ್ಚವಾಗುತ್ತಿದೆ. ಪಾನನಿಷೇಧವನ್ನು ಪೊಲೀಸ್ ಅಧಿಕಾರಿಗಳಿಗೆ ವಹಿಸಿಕೊಟ್ಟರೆ, ಅದಕ್ಕೆ ನಿಯೋಜಿಸಲಾಗುವ ಉದ್ಯೋಗಸ್ಥರನ್ನು ತೆರವು ಮಾಡಲಾಗುತ್ತಿತ್ತಲ್ಲವೇ? ಸಂಭಾವಿತ ಪ್ರಜೆಗಳ ವಿರುದ್ಧ ಕ್ಲೇಶದಾಯಕ ಅಥವಾ ತ್ರಾಸಕೊಡುವ ನಡವಳಿಕೆ ಯಾಕೆ ಬೇಕು? ಈ ಬಗೆಯ ನಡವಳಿಕೆ ಪಾನ ಮತ್ತಿನ ಬಗೆಗೆ ಅನುಕಂಪ ಮೂಡಿಸುವುದಲ್ಲದೆ, ಸಾರ್ವಜನಿಕ ಸಹಕಾರ ಕ್ರಮೇಣ ಇಲ್ಲವಾಗುತ್ತದೆ. ಜನರು ಪಾನನಿಷೇಧವನ್ನು ಬೇರೆ ಬೇರೆ ಕಾರಣಗಳಿಂದ ವಿರೋಧಿಸುತ್ತಾರೆ.

ದುರದೃಷ್ಟದ ವಿಷಯವೇನೆಂದರೆ, ನಮ್ಮ ರಾಜ್ಯದಲ್ಲಿ ಪಾನನಿಷೇಧ ಮತ್ತು ಮಾರಾಟ ತೆರಿಗೆಯನ್ನು ಒಂದೇ ಸಲಕ್ಕೆ ಅನುಷ್ಠಾನಕ್ಕೆ ತರಲಾಯಿತು ಎಂದು ನಮ್ಮ ಸದಸ್ಯರಿಗೆಲ್ಲ ತಿಳಿಯಪಡಿಸುತ್ತೇನೆ. ಪಾನನಿಷೇಧ ತೆಗೆದರೆ, ಮಾರಾಟ ತೆರಿಗೆ ತೆಗೆಯಲಾಗುತ್ತೆ ಎಂಬುದು ಅನೇಕರ ಅಂಬೋಣ. ನಾನು ಹೇಳುವುದೆಂದರೆ, ಪಾನ ನಿಷೇಧ ಜಾರಿಗೆ ಬರದಿದ್ದರೂ ಮಾರಾಟ ತೆರಿಗೆ ಖಂಡಿತವಾಗಿಯೂ ಮುಂದುವರಿಯುತ್ತೆ. ಪಾನ ನಿಷೇಧ ತೆರವುಗೊಳಿಸಿದಾಗ ಮಾರಾಟ ತೆರಿಗೆಯೂ ಇಲ್ಲವಾಗುತ್ತೆ ಎಂದು ಯಾರಾದರೂ ಭಾವಿಸಿದರೆ ಆ ಭಾವನೆಯನ್ನು ತಕ್ಷಣದಿಂದ ಅವರ ಮನಸ್ಸಿನಿಂದ ಹೋಗಲಾಡಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಮಾರಾಟ ತೆರಿಗೆಯ ಹೊರತಾಗಿ ನಾವು ಮುಂದುವರಿಯಲು ಸಾಧ್ಯವಿಲ್ಲ. ಹೀಗೆಂದಾಗ ಎಲ್ಲಾ ವಸ್ತುಗಳ ಮೇಲೆ ಮಾರಾಟ ತೆರಿಗೆಯನ್ನು ವಿಧಿಸಬೇಕೆಂದಲ್ಲ. –ಆದರೆ ಆಹಾರ ಸಾಮಗ್ರಿಗಳ ಮೇಲಂತೂ ವಿಧಿಸದೆ

ನಿರ್ವಾಹವಿಲ್ಲ. ಹೀಗೆ ತೆರಿಗೆಯನ್ನು ವಿಧಿಸುವಾಗ ಬಡ ಜನತೆಯ ಮೇಲಿನ ಹೊರೆ ವಿಪರೀತವಾಗುತ್ತದೆ ಮತ್ತು ಅವರ ಬವಣೆ ಉಲ್ಬಣವಾಗುತ್ತೆ. ಎಲ್ಲಾ ತೆರಿಗೆಯ ಮೂಲಭೂತ ನೀತಿಯನ್ನು ನಾವು ಅಭ್ಯಸಿಸಬೇಕಾಗಿದೆ. ಈ ಬಡ ಜನರಿಗೆ ಪರಿಹಾರ ಸಿಗುವಂತೆ ತೆರಿಗೆಯನ್ನು ವಿಧಿಸಬೇಕಾಗುತ್ತದೆ. ನಮ್ಮ ರಾಜ್ಯದ ತೆರಿಗೆಯ ನೀತಿಯನ್ನು ಸಾಕಷ್ಟು ಎಚ್ಚರಿಕೆಯಿಂದ ಬದಲಾಯಿಸಲಾಗಿದೆ. ಕೆಲವು ಬಗೆಯ ಉಳಿತಾಯ, ಖರ್ಚಿನ ಮೇಲೆ ಹತೋಟಿ ತರುವುದರಿಂದ ಬಹಳಷ್ಟು ಪೀಡಿತರಾದ ತೆರಿಗೆದಾರರಿಗೆ ಪರಿಹಾರ ಒದಗಿಸಲು ಸಾಧ್ಯವಾಗುತ್ತದೆ.

## ಶಿಕ್ಷಣ ಸಮಸ್ಯೆ

ಶಿಕ್ಷಣದ ಮೇಲೆ ನಾವು 11 ಕೋಟಿಯನ್ನು ವಿನಿಯೋಗಿಸುತ್ತಿದ್ದೇವೆ ಎಂಬುದರ ಬಗ್ಗೆ ಸಂಶಯ ಬೇಡ. ನಮ್ಮಲ್ಲಿ 38,500 ಎಲಿಮೆಂಟರಿ ಶಾಲೆಗಳೂ, 1,250ರಷ್ಟು ಸೆಕೆಂಡರಿ ಶಾಲೆಗಳೂ ಇವೆ. ವಸ್ತುಸ್ಥಿತಿ ಹೀಗಿದೆ – ಪ್ರಾಥಮಿಕ ಶಾಲೆಯ 5ಮಂದಿ ಪಾಸಾದ ವಿದ್ಯಾರ್ಥಿಗಳಲ್ಲಿ ಕೇವಲ ಒಬ್ಬನಿಗಷ್ಟೇ ಸೆಕೆಂಡರಿ ಶಾಲೆಗೆ ಸೇರುವ ಅವಕಾಶವಿದೆ. ಪ್ರಾಥಮಿಕ ವಿದ್ಯಾಭ್ಯಾಸದ ಮೇಲೆ ದೊಡ್ಡ ಮೊತ್ತವನ್ನು ವ್ಯಯಿಸಿದ ಮೇಲೆ, ಮೇಲಿನ ವಿದ್ಯಾಭ್ಯಾಸಕ್ಕೆ ಅವಕಾಶವಿಲ್ಲದಿದ್ದಲ್ಲಿ ಈ ಎಲ್ಲಾ ಮಕ್ಕಳು ಮತ್ತೆ ಅನಕ್ಷರಸ್ಥರಾಗುವ ಸಂಭವವಿದೆ. ಈಗಿನ ಪದ್ಧತಿಯೇ ಮುಂದುವರಿದಲ್ಲಿ, ನನಗನಿಸುತ್ತಿದೆ, ಶಿಕ್ಷಣದ ದಿಶೆಯಲ್ಲಿ ನಾವು ಏನನ್ನೂ ಸಾಧಿಸಲಾರೆವು ಅಂತ. ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಒಂದು ನಿಜವಾದ ಕಾಯಕಲ್ಪ ಅಳವಡಿಸಬೇಕಾಗಿದೆ. ನಾವು ಅನೇಕ ಯೋಜನೆಗಳನ್ನು ತಯಾರಿಸಿದ್ದೇವೆ. ಆ ಯೋಜನೆಗಳು ಕಾರ್ಯರೂಪಕ್ಕೆ ಬಂದಾಗ ಮಾತ್ರವೇ ಅದರ ಸಾರ್ಥಕತೆ ಕಾಣಬಹುದು.

ಶಿಕ್ಷಣದಲ್ಲಿ "ಸಾರ್ಜೆಂಟ್ ಸ್ಕೀಮ್" ಅಂತ ಇದೆ. ಇನ್ನೂ ಇತರ ಸ್ಕೀಮುಗಳಿವೆ. ಡಾ.ರಾಧಾಕೃಷ್ಣನ್ ಅವರ ಅಧ್ಯಕ್ಷತೆಯಲ್ಲಿ ಜರುಗಿದ ವಿಶ್ವವಿದ್ಯಾಲಯದ ಆಯೋಗದ ಮಾಹಿತಿ ಇದೆ. ರಾಷ್ಟ್ರೀಯ ಯೋಜನಾ ಪ್ರಾಧಿಕಾರದ ಪ್ರಕಾರ ಇಂದಿನ ಶಿಕ್ಷಣ ವ್ಯವಸ್ಥೆ ಶಿಕ್ಷಣಾರ್ಥಿಗಳನ್ನು ಸರಕಾರದ ಗುಮಾಸ್ತರನ್ನಾಗಿಸಲು ಸಫಲವಾಗುತ್ತಿದೆ ಅಂತ. ಅದರಲ್ಲೂ ಶಿಕ್ಷಣ ವಿಫಲವಾಗಿ ಸಾಕಷ್ಟು ಕ್ರಿಯಾಶೀಲ ಗುಮಾಸ್ತರನ್ನು ಹೊರತರುತ್ತಿಲ್ಲ ಎಂಬ ಆರೋಪವಿದೆ. ಎಲ್ಲಾ ತರದ ನಿಬಂಧನೆಗಳಿಂದ ಶಿಕ್ಷಣ ವ್ಯವಸ್ಥೆ ಎಲ್ಲಿಯ ತನಕ

ಮುಕ್ತವಾಗುವುದಿಲ್ಲವೋ, ನನಗನಿಸುತ್ತಿದೆ, ಅಲ್ಲಿಯ ತನಕ ಈ ದಿಶೆಯಲ್ಲಿ ನಾವು ಏನನ್ನೂ ಸಾಧಿಸಲಾರೆವು.

ನಮಗೆ ದುಬಾರಿ ಕಟ್ಟಡಗಳು ಯಾತಕ್ಕೆ ಬೇಕು ಹೇಳಿ? ಮಾನದಂಡವೊಂದನ್ನು ಅವರು ವಿಧಿಸಲಿ. ಯಾವನೇ ವಿದ್ಯಾರ್ಥಿ, ಮಂಡಳಿ ನಡೆಸುವ ಪರೀಕ್ಷೆಯಲ್ಲಿ ಉತ್ತೀರ್ಣನಾದಾಗ ಅವನಿಗೆ ಲಂಡನ್ ಮೆಟ್ರಿಕ್ ಇಲ್ಲವೇ ಕ್ಯಾಂಬ್ರಿಜ್ ಸೀನಿಯರ್‌ನಂಥ ಪದವಿಯ ಅರ್ಹತಾ ಪತ್ರವನ್ನು ನೀಡಲಿ. ತದನಂತರ ಆತ ಶಾಲೆಗೆ ಹೋಗಲೇ ಬೇಕೆಂದು ನಿರ್ಬಂಧ ಕಲ್ಪಿಸುವುದು ಬೇಕಾಗಿಲ್ಲ. ಅವನು ಒಂದು ಹಂತದ ಅರ್ಹತೆಗೆ ಸಮವಾದ ತಿಳುವಳಿಕೆಯನ್ನು ಹೊಂದಿದ್ದಾನೆಯೇ ಎಂದು ಪರೀಕ್ಷಿಸಿದರೆ ಸಾಕು. ಈ ಬಗೆಯಲ್ಲಿ ನಾವು ಮುಂದುವರಿದರೆ ಹೆಚ್ಚು ಜನರಿಗೆ ಶಿಕ್ಷಣವನ್ನು ನೀಡಲು ಸಾಧ್ಯವಾಗುತ್ತದೆ ಮಾತ್ರವಲ್ಲ ಅವರೆಲ್ಲ ಬದುಕಿನಲ್ಲಿ ಮುಂದುವರಿಯಲು ಸಾಧ್ಯವಾಗುತ್ತದೆ. ನಾವು 30,000 ರೂಪಾಯಿ ಇಡುಗಂಟನ್ನು ದುಬಾರಿ ಕಟ್ಟಡದ ನಿರ್ಮಾಣದ ಮೇಲೆ ಯಾಕೆ ವ್ಯಯಿಸಬೇಕು? ನಮಗೆ ಸೂಕ್ತವಾದ ಗುರಿಗಳು ಬೇಕಾಗಿವೆ. ನನ್ನ ಅಭಿಪ್ರಾಯವೆಂದರೆ, ನಾವು ಖರ್ಚುಮಾಡುವ ಹಣ ಸದ್ವಿನಿಯೋಗವಾಗಬೇಕು. ನಾವು ಶಿಕ್ಷಣದ ಮೇಲೆ ಹೆಚ್ಚು ಹೆಚ್ಚು ಹಣವನ್ನು ಹೂಡುತ್ತಾ ಹೋದರೆ, ಅದರಿಂದ ನಿಜವಾದ ಸಾಕ್ಷರತೆಯ ಗುರಿಯನ್ನು ತಲುಪದೇ ಹೋದಲ್ಲಿ ಯಾವ ಪುರುಷಾರ್ಥವನ್ನು ಸಾಧಿಸಿದಂತಾಗುತ್ತದೆ? ಸರಕಾರ ಸುಮಾರು 11 ಕೋಟಿ ರೂಪಾಯಿಗಳನ್ನು ಖರ್ಚು ಮಾಡುವಂತಿದೆ. ಅಷ್ಟೂ ಹಣವನ್ನು ಶಿಕ್ಷಣದ ಮೇಲೆಯೇ ಖರ್ಚು ಮಾಡಲಾಗುತ್ತಿದೆ ಎಂದು ಹೇಳಲಾಗದು. ಸುಮಾರು 20 ಕೋಟಿಯಷ್ಟು ಹಣ ಮಕ್ಕಳ ಸ್ಕೂಲ್ ಫೀಸ್ ಮೂಲಕ ಸಂಗ್ರಹಿಸಲಾಗುತ್ತದೆ. ಆಡಳಿತ ಯಾವಾಗಲೂ ಕೊರತೆಯನ್ನೇ ತೋರಿಸುವಂಥದ್ದು. ಸ್ವಾಮೀ, ಇದೊಂದು ನಾವು ಎದುರಿಸುವಂಥ ಪ್ರಮುಖ ಸಮಸ್ಯೆ ಎಂದೇ ತಿಳಿಯಬೇಕು. ಸಾಮಾಜಿಕ ಜೀವನ ಒದಗಿಸುವ ರೀತಿಗಷ್ಟೇ ನಮ್ಮ ಶಿಕ್ಷಣ ಪದ್ಧತಿ ಸೀಮಿತವಾಗಿರಬಾರದು. ಯಾವುದೇ ನಿರ್ದಿಷ್ಟ ಫಲಿತಾಂಶವಿಲ್ಲದೆ ನಾವು ಎಷ್ಟು ಕಾಲ ಹೀಗೆ ಹಣ ವ್ಯಯ ಮಾಡುತ್ತ ಹೋಗುವುದೋ ತಿಳಿಯದಾಗಿದೆ. ಮುಂದೊಂದು ದಿನ ಬರುತ್ತೆ, ಆಗ, ಸಾರ್ವಜನಿಕ ಆರೋಗ್ಯ ಮತ್ತು ಆಸ್ಪತ್ರೆಗಳ ಮೇಲೆ ನಾವು ಹೆಚ್ಚು ಹೆಚ್ಚು ಹಣವನ್ನು ತೊಡಗಿಸುವಂತಾಗಿ, ಶಿಕ್ಷಣಕ್ಕಾಗಿ ಈಗ ಮಾಡುವಷ್ಟು ಖರ್ಚು ಆಗ ಮಾಡಲು ಸಾಧ್ಯವಾಗದೇ ಹೋಗಬಹುದು.

# ಬಡ ಕರ್ನಾಟಕದ ಬಗ್ಗೆ!

ನಾನು ನನ್ನ ತವರು ಜಿಲ್ಲೆಯ ಬಗ್ಗೆ ಒಂದಿಷ್ಟು ಹೇಳಬೇಕಾಗಿದೆ. ಈ ಸದನದಲ್ಲಿ ಸದಾ ಕಾಲ ಆಂಧ್ರ ಪ್ರದೇಶದ ಬಗ್ಗೆ, ತಮಿಳುನಾಡಿನ ಬಗ್ಗೆ, ಆಗಾಗ ಏನಾದರೂ ಕೇಳುವಂಥ ಪ್ರಸಂಗ ಬಂದಿರುತ್ತದೆ. ಆದರೆ ಬಡ ಕರ್ನಾಟಕದ ಕುರಿತಾಗಿ ಯಾರೂ ಚಕಾರ ಎತ್ತುತ್ತಿಲ್ಲ. ನಾವು ಯಾವಾಗಲೂ ಸುಮ್ಮಗಿರುತ್ತಿದ್ದೇವೆ. ಹಾಗೆಂದಾಗ ನಮ್ಮ ಬೇಡಿಕೆಗಳು ಯಾವುದೂ ಇಲ್ಲ ಎಂದು ತಿಳಿದುಕೊಳ್ಳಬೇಕಾಗಿಲ್ಲ. ಸರಕಾರ ರಾಜ್ಯದ ನಾನಾ ಭಾಗಗಳಲ್ಲಿ ಹಣ ಖರ್ಚು ಮಾಡುತ್ತಾ ಬಂದಿದ್ದರೂ ತೊಂದರೆ ತಕರಾರುಗಳು ಎಲ್ಲೆಂದರೆ ಅಲ್ಲಿ ಕೇಳಿ ಬರುತ್ತಲೇ ಇದೆ. ಎಲ್ಲೆಲ್ಲಿ ದೊಡ್ಡ ದೊಡ್ಡ ಯೋಜನೆಗಳು ಕಾರ್ಯರೂಪಕ್ಕೆ ಬರುತ್ತಿವೆಯೋ, ಅಲ್ಲೆಲ್ಲ ಹಣ ಹೆಚ್ಚು ಹೆಚ್ಚು ಪೋಲಾಗುವುದನ್ನು ನೋಡುತ್ತಿದ್ದೇವೆ. ದಕ್ಷಿಣ ಕನ್ನಡ ಜಿಲ್ಲೆಯಿಂದ 10ರಲ್ಲಿ ಒಂಬತ್ತು ಮಂದಿ ಕಾಂಗ್ರೆಸ್ ಸದಸ್ಯರು ಹಾಗೂ ಬಳ್ಳಾರಿಯಿಂದ 5ರಲ್ಲಿ 4ಮಂದಿ ಅಭ್ಯರ್ಥಿಗಳು ಇದೀಗ ಪಕ್ಷವನ್ನು ಸೇರಿ ಇಲ್ಲಿದ್ದಾರೆ. ಇಷ್ಟಿದ್ದರೂ ನಮ್ಮಲ್ಲಿ ಕುಂದು ಕೊರತೆಗಳು ಇಲ್ಲವೆಂದು ಹೇಳಲಾಗದು. ಅವು ಸಾಕಷ್ಟು ಇವೆ. ನಮ್ಮ ಶಕ್ತಿಯ ಅರಿವು ನಮಗಿದೆ ಎಂದು ಹೇಳಬಯಸುತ್ತೇನೆ. ಆ ಶಕ್ತಿಯನ್ನು ಉಪಯೋಗಿಸಿ ನಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ದಾರಿಯೂ ಗೊತ್ತಿದೆ. ದಕ್ಷಿಣ ಕನ್ನಡ ಜಿಲ್ಲೆಯ ಸಮಸ್ಯೆಗಳನ್ನು ನಾನು ಮತ್ತೆ ಮತ್ತೆ ಪುನರುಚ್ಚರಿಸಲು ಬಯಸುವುದಿಲ್ಲ. ಭಾಷಾವಾರು ಪ್ರಾಂತ್ಯಗಳ ಸಂಘಟನೆಯಾದಾಗ ಇವೆಲ್ಲ ಸಮಸ್ಯೆಗಳು ಬಗೆಹರಿಯುತ್ತವೆ ಎಂದು ನಾನು ಬಲ್ಲೆ.

ಸ್ವಾಮೀ. ನಮ್ಮ ಜಿಲ್ಲೆಯಲ್ಲಿ ಬಹುಶಃ ಅತ್ಯಂತ ದುರ್ಬಲವಾದಂಥ ಸಂಪರ್ಕ ಸಾಧನಗಳಿವೆ. ನಾನು ಲೋಕೋಪಯೋಗಿ ಇಲಾಖೆಯ ಮಂತ್ರಿವರ್ಯರನ್ನೇ ನಿಗಾದಲ್ಲಿಟ್ಟುಕೊಂಡು ಈ ಮಾತನ್ನು ಹೇಳುತ್ತಿದ್ದೇನೆ. ಇಡೀ ಜಿಲ್ಲೆಯಲ್ಲಿ ಇರುವಂಥ ಒಂದು ರೈಲು ಮಾರ್ಗ, ಅದೂ ಕೂಡಾ 60 ಮೈಲಿಗಿಂತ ಉದ್ದವಿಲ್ಲ. ಪ್ರತೀ ನಾಲ್ಕೋ, ಆರೋ ಅಥವಾ ಏಳನೆ ಮೈಲಿಗೆ ಒಂದೊಂದು ನದಿಯೂ ಹರಿಯುತ್ತಿದೆ. ವರ್ಷದ 365 ದಿನಗಳಲ್ಲೂ ರಾಜ್ಯದ ಇತರೆಡೆಗಳಿಗಿಂತ ಈ ನದಿಗಳಲ್ಲಿ ನೀರು ಹರಿಯುತ್ತಲೇ ಇರುತ್ತದೆ. ಹೀಗಾಗಿ ಸೇತುವೆಗಳಂಥ ಸಂಪರ್ಕ ಸಾಧನಗಳು ಇಲ್ಲದೇ ಬಹಳ ತೊಂದರೆಯನ್ನು ಅನುಭವಿಸುತ್ತಿದ್ದೇವೆ. ಇಡೀ ಜಿಲ್ಲೆಯ ಆರ್ಥಿಕ ಬೆಳವಣಿಗೆ ಈ ಸಂಪರ್ಕ ಸೇತುವೆಗಳ ಕೊರತೆಯಿಂದಾಗಿ ಕುಂಠಿತಗೊಂಡಿದೆ. ನಾವು ಸೇತುವೆಗಳ

ನಿರ್ಮಾಣದ ಮೇಲೆ ಭಾರೀ ಮೊತ್ತದ ಹಣವನ್ನು ವಿನಿಯೋಗಿಸುತ್ತಿದ್ದೇವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದೋ ಎರಡೋ ಸೇತುವೆಗಳನ್ನು ಕಟ್ಟಲಾಗುತ್ತಿದೆ. ಸರಕಾರ ಇತರ ಜಿಲ್ಲೆಗಳಲ್ಲಿ ಹಲವಾರು ವರ್ಷಗಳಿಂದ ನಿರ್ಮಿಸುತ್ತ ಬಂದಿರುವ ಸೇತುವೆಗಳ ಮೇಲಿನ ಮೊಬಲಗಿನಲ್ಲಿ ಒಂದು ಅಂಶವನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೇವಲ 2–3 ವರ್ಷಗಳ ಅವಧಿಗೆ ವಿಸ್ತರಿಸಿದರೆ ಸಾಕು, ನಮ್ಮ ಸಂಪರ್ಕ ಮಾಧ್ಯಮ ಪುಷ್ಟಿಗೊಳ್ಳುತ್ತದೆ. ನಮ್ಮ ಸಮಸ್ಯೆಯೂ ಬಗೆಹರಿಯುತ್ತದೆ. ಜನಸಂಖ್ಯೆಯ ಆಧಾರದ ಮೇಲೆ ಕಂದಾಯವನ್ನು ವಿತರಿಸಲಾಗುತ್ತದೆ ಎಂದು ಹೇಳುತ್ತಾರೆ. ನಮ್ಮ ಜನಸಂಖ್ಯೆ ಅಷ್ಟಿರಲಾರದು. ಆದರೆ ನಮ್ಮ ಕೋರಿಕೆ ಅಂದರೆ, ಸದಾ ಕಾಲ ಹರಿಯುತ್ತಿರುವ ನದಿಯ ಮೇಲ್ಗಡೆ ಸೇತುವೆ ಬೇಕೇ ಹೊರತು, ಪಾಲರ್‌ನಂಥ ನೀರಿಲ್ಲದ ನದಿಗಳ ಮೇಲೆ ನಮಗೆ ಸೇತುವೆ ಬೇಡ.

## ಜೋಗದ ವಿದ್ಯುತ್

ನೀವು ವ್ಯಯ ಮಾಡುವ ಹಣ ಸದ್ವಿನಿಯೋಗವಾಗಲಿ ಎಂಬುದೇ ನನ್ನ ಬಯಕೆ. ನಮಗೆ ಕಾಂಕ್ರೀಟ್ ರಸ್ತೆಗಳು ಬೇಡ. ಅಂತಹ ಸುಖಭೋಗಕ್ಕೆ ಕಾಯುವಷ್ಟು ನಾವು ದೇಶ ಪ್ರೇಮಿಗಳಿದ್ದೇವೆ. ನಮ್ಮಲ್ಲಿ ಸಾಕಷ್ಟು ಮಳೆಬರುತ್ತಿದೆ. ನಮ್ಮ ಮಲಬಾರಿನ ಸ್ನೇಹಿತರು ಹೇಳಿದಂತೆ, ಈ ಮಳೆಯ ನೀರೆಲ್ಲ ನಿರರ್ಥಕವಾಗಿ ಸಮುದ್ರ ಸೇರುತ್ತಿದೆ. ನಮ್ಮ ಜಿಲ್ಲೆಗೆ ವಿದ್ಯುತ್ ಸರಬರಾಜಿನ ವ್ಯವಸ್ಥೆಯಾಗಬೇಕು. ಜೋಗ ಜಲಪಾತದಿಂದ ನಮಗೆ ವಿದ್ಯುತ್ ಸರಬರಾಜಾಗಬೇಕೆಂಬುದು ನಮ್ಮ ಹಲವು ಕಾಲದ ಬೇಡಿಕೆಯಾಗಿತ್ತು. ನಮ್ಮ ಜಿಲ್ಲೆಯ 5 ಗ್ರಾಮಗಳನ್ನು ತ್ಯಾಗ ಮಾಡಿ ಜೋಗದ ಅಭಿವೃದ್ಧಿಗೆ ಶ್ರಮಿಸಿದ್ದರೂ ಕೂಡಾ ಮದ್ರಾಸು ಸರಕಾರ ಮತ್ತು ಮೈಸೂರು ಸರಕಾರಗಳು ಪರಸ್ಪರ ಯಾವುದೇ ಸಂಧಾನಕ್ಕೆ ಬರದಿರುವುದೇ ತೊಡಕಾಗಿದೆ. ವಿಳಂಬ ಯಾವುದೇ ಕಾರಣಕ್ಕಾಗಿ ಇರಲಿ, ಇನ್ನು ಮುಂದೆ ಅದು ಹೆಚ್ಚಿನ ಸಮಯವನ್ನು ತೆಗೆದುಕೊಳ್ಳಬಾರದು. ವಿದ್ಯುತ್ ಶಕ್ತಿಯ ಸರಬರಾಜಿನ ಸೌಲಭ್ಯ ನಮಗೆ ಇರುತ್ತಿದ್ದರೆ, ನಮ್ಮ ಕೈಗಾರಿಕೆಯ ಸಂಪತ್ತನ್ನು ನಾವು ಅಭಿವೃದ್ಧಿ ಪಡಿಸಿ ಆ ಮೂಲಕ ಜಿಲ್ಲೆಯಲ್ಲಿ ಬೇಸಾಯವೂ ಅಭಿವೃದ್ಧಿ ಹೊಂದುವಂತಾಗುತ್ತಿತ್ತು. ನಮ್ಮ ಅನೇಕ ಸಮಸ್ಯೆಗಳು ಇದರಿಂದ ಬಗೆಹರಿಯುತ್ತಿದ್ದವು. ಮೇಕೆದಾಟು ಯೋಜನೆಯ ಬಗ್ಗೆ ಮಾತ್ರ ಸರಕಾರ ಇಷ್ಟೊಂದು ಕಾಳಜಿ ವಹಿಸುತ್ತಿದೆ ಯಾಕೆ? ದಕ್ಷಿಣ ಕನ್ನಡದಲ್ಲಿ ಏಳು ದೊಡ್ಡ

ನದಿಗಳು ಹರಿಯುತ್ತಿವೆ. 2000 ಅಡಿ ಎತ್ತರದಿಂದ ಕೆಳಕ್ಕೆ ಬೀಳುವ ಅವು ವಿದ್ಯುಚ್ಛಕ್ತಿಯನ್ನು ಉತ್ಪಾದಿಸಬಲ್ಲವು. ಜಲ ವಿದ್ಯುತ್ ಯೋಜನೆಗೆ ಸಾಕಷ್ಟು ಪೂರಕ ಅಂಶಗಳು ಇವು. ನಮ್ಮ ವಾರಾಹಿ ನದಿ 40 ಕಿಲೋವ್ಯಾಟ್ ವಿದ್ಯುತ್ ಉತ್ಪಾದಿಸಬಲ್ಲುದು. ಇದು ಮೇಕೆದಾಟುವಿಗೆ ಸಮವಾದುದು. ಸರಕಾರ ಈ ಕುರಿತು ಪರಿಶೀಲಿಸುವುದಿಲ್ಲ ಯಾಕೆ?

***

## ಪ್ರಶ್ನೋತ್ತರ ವೇಳೆ – 18, ಜುಲೈ 1952

## (ಅ) ಕೈಮಗ್ಗ ನೇಕಾರರ ಸಮಸ್ಯೆ

**ಮಾನ್ಯ ಡಾ.ಯು. ಕೃಷ್ಣರಾವ್**: ಸ್ವಾಮೀ, ಮಲಬಾರಿನಲ್ಲಿರುವ ವಿಚಿತ್ರ ವಿದ್ಯಮಾನ ಸರಕಾರಕ್ಕೆ ಗೊತ್ತೇ ಇದೆ. ಮಲಬಾರಿನಲ್ಲಿನ ಸ್ಥಿತಿಗತಿ ಬಗ್ಗೆ ಜಿಲ್ಲಾಧಿಕಾರಿ ಸೂಕ್ತವಾದ ಮಾಹಿತಿಯನ್ನು ನಮಗೆ ಒದಗಿಸುತ್ತಾರೆ ಎಂಬ ಭರವಸೆ ಇದೆ.

**ಶ್ರೀ ಟಿ. ಅನಂತ ಪೈ**: ಮಲಬಾರಿನ ಕೈಮಗ್ಗ ನೇಕಾರರ ಸಮಸ್ಯೆಗೂ ದಕ್ಷಿಣ ಕನ್ನಡದ ನೇಕಾರರ ಸಮಸ್ಯೆಗಳಿಗೂ ಹೆಚ್ಚು ವ್ಯತ್ಯಾಸವಿಲ್ಲವೆಂದು ಪರಿಗಣನೆಗೆ ತೆಗೆದುಕೊಂಡು, ಸರಕಾರ ದಕ್ಷಿಣ ಕನ್ನಡದ ಕೈಮಗ್ಗ ಕಾರ್ಮಿಕರ ಸಮಸ್ಯೆಗೂ ಪರಿಹಾರ ಕಂಡುಕೊಳ್ಳಬೇಕೆಂದು ಈ ಮೂಲಕ ನಿವೇದಿಸಿಕೊಳ್ಳುತ್ತೇನೆ.

## (ಆ) ಗೇಣಿದಾರರ ಶಾಸನ

**ಶ್ರೀ ಟಿ. ಅನಂತ ಪೈ**: ಭೂಕಂದಾಯ ಇಲಾಖೆಯ ಮಂತ್ರಿವರ್ಯರೇ, ಗೇಣಿದಾರರ ಬಗೆಗಿನ ಶಾಸನದ ಅನುಷ್ಠಾನ ಯಾವಾಗ ಮಾಡುತ್ತೀರಿ ಎಂದು ಹೇಳಬಹುದೇ?

**ಮಾನ್ಯ ಶ್ರೀ. ಎಂ.ಎ. ಮಾಣಿಕವೇಲು ನಾಯ್ಕರ್**: 1950ರ ಮೇ ತಿಂಗಳಲ್ಲಿ ಸರಕಾರ ನಿಯಮಿಸಿದ ಭೂಕಂದಾಯ ಸುಧಾರಣಾ ಸಮಿತಿ ಗೇಣಿದಾರರ ಸಮಸ್ಯೆಯನ್ನು ಪರಿಶೀಲಿಸಿದ್ದು, ಗೇಣಿಯ ಅವಧಿ, ಗೇಣಿಯ ಮೊತ್ತ ಮತ್ತು

ಗೇಣಿದಾರರನ್ನು ಎಬ್ಬಿಸಲು ನೀಡಬೇಕಾದ ಕಾರಣಗಳು– ಈ ವಿಷಯಗಳನ್ನು ವಿಷದಪಡಿಸಿದೆ. ಸಮಿತಿ ಶಿಫಾರಸು ಮಾಡಿರುವ ವಿಷಯಗಳು ಸರಕಾರದ ಪರಿಶೀಲನೆಯಲ್ಲಿದೆ. ಈ ಶಿಫಾರಸುಗಳನ್ನು ಶಾಸನದ ಮೂಲಕ ಹೊರಡಿಸುವ ಮುನ್ನ ಸರಕಾರ ಅಂತಿಮ ನಿರ್ಧಾರ ಕೈಗೊಳ್ಳಬೇಕಾಗುತ್ತದೆ.

**ಶ್ರೀ ಟಿ. ಅನಂತ ಪೈ:** ಸುಮಾರು ಎಷ್ಟು ಕಾಲಾವಧಿಯಲ್ಲಿ ಈ ಶಾಸನ ಅನುಷ್ಠಾನಕ್ಕೆ ಬರಬಹುದೆಂದು ಮಾನ್ಯ ಮಂತ್ರಿಗಳು ಹೇಳಬಲ್ಲರೇ?

**ಮಾನ್ಯ ಶ್ರೀ ಎಂ.ಎ.ಮಾಣಿಕವೇಲು ನಾಯ್ಕರ್:** ಎಷ್ಟು ಶೀಘ್ರ ಸಾಧ್ಯವೋ ಅಷ್ಟು ಶೀಘ್ರದಲ್ಲಿ.

## ಪ್ರಶ್ನೋತ್ತರ ವೇಳೆ –21, ಜುಲೈ 1952

### (ಅ) ಅಡಿಕೆ ಸಂಶೋಧನಾ ಕೇಂದ್ರ ಸ್ಥಾಪನೆ

**ಶ್ರೀ ಟಿ. ಅನಂತ ಪೈ:** ದಕ್ಷಿಣ ಕನ್ನಡ ಜಿಲ್ಲೆಯ ಕಾಸರಗೋಡಿನಲ್ಲಿ ಈಗಾಗಲೇ ಕೇಂದ್ರೀಯ ತೆಂಗು ಸಂಶೋಧನಾ ಕೇಂದ್ರವೊಂದು ಅಸ್ತಿತ್ವದಲ್ಲಿದೆ. ಆದ್ದರಿಂದ ಸರಕಾರ ನೀಲೇಶ್ವರದಲ್ಲಿರುವ ತೆಂಗು ಸಂಶೋಧನಾ ಕೇಂದ್ರವನ್ನು ಅಡಿಕೆ ಸಂಶೋಧನೆಗೆ ಪರಿವರ್ತಿಸಿಕೊಡಲು ಶಕ್ಯವೇ?

**ಮಾನ್ಯ ಶ್ರೀ ಡಾ. ಆರ್.ನಾಗನ್ ಗೌಡ:** ಅಡಿಕೆ ಸಂಶೋಧನೆಯ ಕುರಿತಾದ ಪ್ರಶ್ನೆ ಸರಕಾರದ ಪರಿಶೀಲನೆಯಲ್ಲಿದೆ.

### (ಆ) ರಾಯಲ ಸೀಮೆಯ ಬರಪರಿಹಾರ

**ಶ್ರೀ ಟಿ.ಅನಂತ ಪೈ:** ರಾಯಲ ಸೀಮೆಯ ಬರಪರಿಹಾರದ ಸಲುವಾಗಿ ಕೇಂದ್ರ ಸರಕಾರಕ್ಕೆ ಮಾರಲಾದ ಸೆಕ್ಯೂರಿಟಿಗಳ, ಅಂದರೆ ಅವುಗಳ ಮಾರಾಟ ಬೆಲೆ ಮತ್ತು ಸ್ಥಾಪಿತ ಬೆಲೆ, ವಿಷಯವಾಗಿ ಮಾನ್ಯ ವಿತ್ತ ಸಚಿವರು ತಿಳಿಸಬಹುದೇ?

**ಮಾನ್ಯ ಶ್ರೀ ಸಿ.ಸುಬ್ರಹ್ಮಣ್ಯಂ:** ರಾಯಲ ಸೀಮೆಯ ಬರ ಪರಿಹಾರದ ಸಲುವಾಗಿ ಕೇಂದ್ರ ಸರಕಾರಕ್ಕೆ ವಿಕ್ರಯಿಸಲಾದ ಸೆಕ್ಯೂರಿಟಿಗಳ ವಿವರ ಹೀಗಿದೆ:

| ವಿಕ್ರಯದ ತಾರೀಕು | ಸೆಕ್ಯೂರಿಟಿ ವಿವರ | ಸಾಮಾನ್ಯ ಮೌಲ್ಯ | ಖರೀದಿಯ ಮೌಲ್ಯ | ವಿಕ್ರಯ ಮೌಲ್ಯ |
|---|---|---|---|---|
| 31, ಮಾರ್ಚ್ 1952 | 1959–61 3% ಸಾಲ | 200 ಲಕ್ಷ.ರೂ | 203.42 ಲಕ್ಷ ರೂ | 190.88 ಲಕ್ಷ ರೂ |



ಶ್ರೀ ಸಿ.ಸುಬ್ರಹ್ಮಣ್ಯಂ ಅವರು ದಕ್ಷಿಣ ಕನ್ನಡ ಜಿಲ್ಲೆಗೆ ಭೇಟಿ ನೀಡಿದ ಸಂದರ್ಭ.
ಶ್ರೀ ಟಿ.ಎ.ಪೈ ಅವರು ಅವರ ಆತ್ಮೀಯರಾಗಿದ್ದರು

**ಶ್ರೀ ಟಿ.ಅನಂತ ಪೈ:** ಸ್ವಾಮೀ, ಈ ವಹಿವಾಟಿನಲ್ಲಿ ನಾವು ಸ್ವಲ್ಪ ಹಣವನ್ನು ಕಳಕೊಂಡಿದ್ದೇವೆ ಎಂದು ನನಗನಿಸುತ್ತಿದೆ. ಈ ನಷ್ಟವನ್ನು ತಪ್ಪಿಸುವ ಸಲುವಾಗಿ ರಾಜ್ಯ ಸರಕಾರ ಕೇಂದ್ರದ ಜತೆಗೆ ವಿನಂತಿಸಿ ಸಾಲವನ್ನು ಮುಂದುವರಿಸುವಂತೆ ವಿನಂತಿಸಿಕೊಳ್ಳಬಾರದಿತ್ತೇ? ಇದರಿಂದ ಸೆಕ್ಯೂರಿಟಿಗಳನ್ನು ಮಾರುವ ಪ್ರಮೇಯ ಒದಗುತ್ತಿರಲಿಲ್ಲ.

**ಮಾನ್ಯ ಶ್ರೀ ಸಿ.ಸುಬ್ರಹ್ಮಣ್ಯಂ:** ನಮಗೆ ಬೇರೆ ದಾರಿಯಿರಲಿಲ್ಲ ಸ್ವಾಮೀ.

## (ಇ) ದ.ಕ. ಹೆದ್ದಾರಿ ನಿರ್ಮಾಣ

**ಶ್ರೀ ಟಿ.ಅನಂತ ಪೈ:** ಸ್ವಾಮೀ, ತಮ್ಮ ಉತ್ತರದಲ್ಲಿ ಒಂದು ಮೈಲು ಕೂಡಾ ಸಿಮೆಂಟು ಕಾಂಕ್ರೀಟ್ ನಿರ್ಮಾಣ ಕುರಿತು ಹೇಳಿಲ್ಲ. ದಕ್ಷಿಣ ಕನ್ನಡಜಿಲ್ಲೆಯನ್ನಷ್ಟೇ ಈ ವಿಷಯದಲ್ಲಿ ಪ್ರತ್ಯೇಕಿಸಿ ನೋಡಲಾಗುತ್ತಿದೆ?

**ಮಾನ್ಯ ಶ್ರೀ ಎನ್.ರಂಗಾರೆಡ್ಡಿ:** ಸಿಮೆಂಟ್ ಕಾಂಕ್ರೀಟಿಗೆ ಕೆಲವೊಂದು ಪರೀಕ್ಷೆಗಳನ್ನು ಮಾಡಬೇಕಾಗುತ್ತದೆ. 2,000 ಟನ್ನಿನಷ್ಟು ಸಾರಿಗೆ ಅಂತಹ ರಸ್ತೆಯ ಮೇಲೆ ಸಂಚಾರ ಮಾಡಬೇಕಾಗುತ್ತದೆ. ದಕ್ಷಿಣ ಕನ್ನಡದಲ್ಲಿ ಯಾವುದೇ ರಸ್ತೆ ಈ ಪರೀಕ್ಷೆಗೆ ಅರ್ಹವಾಗಿಲ್ಲ. ಆದ್ದರಿಂದ ಸಿಮೆಂಟ್ ಕಾಂಕ್ರೀಟನ್ನು ಹಾಕಲಾಗಿಲ್ಲ.

## (ಈ) ದಕ್ಷಿಣ ಕನ್ನಡ ಜಿಲ್ಲೆಗೆ ವಿದ್ಯುಚ್ಛಕ್ತಿ ಸರಬರಾಜು

**ಗೌ.ಶ್ರೀ ಎನ್.ರಂಗಾರೆಡ್ಡಿ:** ಜೋಗ್ ಜಲಪಾತದಿಂದ ಎಷ್ಟು ಕಿಲೋವ್ಯಾಟ್ ವಿದ್ಯುಚ್ಛಕ್ತಿ ಉತ್ಪಾದನೆಯಾಗುತ್ತೆ ಎಂಬುದು ನನಗೆ ಗೊತ್ತಿಲ್ಲ. ಮೈಸೂರು ಸರಕಾರ ನಮಗೆ 6,000ಕಿ.ವ್ಯಾಟ್ ವಿದ್ಯುಚ್ಛಕ್ತಿಯನ್ನು ಕೊಡುವುದಕ್ಕೆ ಸಮ್ಮತಿಸಿದೆ.

**ಶ್ರೀ ಟಿ.ಅನಂತ ಪೈ:** ಈ ಸಂಧಾನಕ್ಕೆ ತೆಗೆದುಕೊಂಡ ದೀರ್ಘಕಾಲದ ವಿಳಂಬದ ಕುರಿತು ದಕ್ಷಿಣ ಕನ್ನಡ ಜಿಲ್ಲೆಯ ಜನತೆಯ ಅಸಮಾಧಾನ ಸರಕಾರಕ್ಕೆ ಅರ್ಥವಾಗಿದೆಯಾ? ಇನ್ನಷ್ಟು ವಿಳಂಬ ಮಾಡದೆಯೆ ಈ ವಿಷಯವನ್ನು ಸರಕಾರ ಅತೀ ಬೇಗನೆ ತೀರ್ಮಾನಿಸಬೇಕೆಂದು ಕೇಳಿಕೊಳ್ಳಲೇ?

**ಗೌ. ಶ್ರೀ ಸಿ.ರಾಜಗೋಪಾಲಾಚಾರಿ:** ನೀರು ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ಹರಿಯುತ್ತಿದೆ. ತಾವು ಹೇಳುವ ರೀತಿಯಲ್ಲಿ ನಾವು ಫಲದಾಯಕವಾದ ಸಂಧಾನವನ್ನು ಕೈಗೊಳ್ಳಲು ಅಸಾಧ್ಯ. ನಾವು ನಿಧಾನವಾಗಿ ಮುಂದುವರಿಯಬೇಕು. ಅದಕ್ಕೆ ಸಾಕಷ್ಟು ತಾಳ್ಮೆಯೂ ಬೇಕು.

## ಪ್ರಶ್ನೋತ್ತರ ವೇಳೆ –24, ಜುಲೈ 1952

## ಎಲ್.ಎಂ.ಪಿ. ಕೋರ್ಸ್‌ಗಳು

**ಶ್ರೀ ಟಿ.ಅನಂತ ಪೈ:** ಗೌರವಾನ್ವಿತ ಆರೋಗ್ಯ ಮಂತ್ರಿಗಳು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸುವಿರಾ?

1. ಸರಕಾರ ಮದ್ರಾಸು ರಾಜ್ಯದಲ್ಲಿ ಎಲ್.ಎಂ.ಪಿ. ಕೋರ್ಸ್‌ಗಳ ಪ್ರಾರಂಭಕ್ಕೆ ಪರವಾನಗಿ ಕೊಡುವ ಪ್ರಶ್ನೆಯ ಕುರಿತು ಪರಿಶೀಲನೆ ಮಾಡುತ್ತಿದೆಯೇ?

2. ಹೋಮಿಯೋಪತಿ ಪ್ರ್ಯಾಕ್ಟೀಸು ಮಾಡುವಾಗ, ಅಧಿಕೃತ ವೈದ್ಯರು ಎಂದು ರಿಜಿಸ್ಟರ್ ಮಾಡಿಕೊಳ್ಳಬಹುದೇ?

3. ಸರಕಾರದ ಸಂಸ್ಥೆಗಳಲ್ಲಿ ಹೋಮಿಯೋಪತಿಯನ್ನು ಕಲಿಸುವ ಅನುಕೂಲವನ್ನು ಸರಕಾರ ಪರಿಶೀಲಿಸಬಹುದೇ?

4. ಉಡುಪಿಯ ಸರಕಾರೀ ಆಸ್ಪತ್ರೆಯ ವಿಸ್ತರಣೆ ಮತ್ತು ರಿಪೇರಿಯನ್ನು ಯಾವಾಗ ಸರಕಾರ ಕೈಗೆತ್ತಿಕೊಳ್ಳಬಹುದೆಂದು ತಿಳಿಸಬಹುದೇ?

**ಗೌ. ಶ್ರೀ ಎ.ಬಿ. ಶೆಟ್ಟಿ:** 1.ರಿಂದ 3.ರವರೆಗಿನ ಪ್ರಶ್ನೆಗಳಿಗೆ ನಕಾರಾತ್ಮಕ ಉತ್ತರ. 4ನೇ ಪ್ರಶ್ನೆಗೆ ಉತ್ತರ: ಕಾಮಗಾರಿಯನ್ನು ಕೈಗೊಳ್ಳುವಂತೆ ಕ್ರಮ ಕೈಗೊಳ್ಳಲಾಗುತ್ತಿದೆ.

## ಮದ್ರಾಸು ಸಂಸ್ಥಾನದಲ್ಲಿ

## ವಾಣಿಜ್ಯ ತೆರಿಗೆ ಮತ್ತು ಇತರ ಸುಂಕಗಳು

## 26, ಜುಲೈ, 1952

**ಶ್ರೀ ಅನಂತ ಪೈ:** ಮಾನ್ಯ ಅಧ್ಯಕ್ಷ ಮಹಾಶಯರೇ, ರಾಜ್ಯದಲ್ಲಿ ತೆರಿಗೆಯ ಸಂಬಂಧದಲ್ಲಿ ಮಾತನಾಡುವಾಗ ವಾಣಿಜ್ಯ ತೆರಿಗೆ ಮಹತ್ವದ ಪಾತ್ರ ವಹಿಸುತ್ತದೆ ಅಂತ ನಮಗೆಲ್ಲ ತಿಳಿದಿದೆ. ಹಾಗೆ ನೋಡಿದರೆ, ವಾಣಿಜ್ಯ ತೆರಿಗೆ ಇತರ ಎಲ್ಲಾ ತೆರಿಗೆಗಳಂತೆ, ಒಂದು ವಿಧವಾದ ಅಸಂತೋಷವನ್ನು ಉಂಟುಮಾಡುವ ತೆರಿಗೆ ಅಂದರೂ ತಪ್ಪಾಗದು. ಆದರೆ ಮದ್ಯದ ಮೇಲಿನ ತೆರಿಗೆಗಿಂತ ವಾಣಿಜ್ಯ ತೆರಿಗೆ ನ್ಯಾಯಸಮ್ಮತವಾದುದು ಎಂಬುದೊಂದು ಸಮಾಧಾನದ ಅಂಶ. ಮದ್ಯದ ಮೇಲಿನ ತೆರಿಗೆ ಸಮಾಜದ ಒಂದು ವರ್ಗದ ಜನರಿಂದ ಮಾತ್ರ ವಸೂಲು ಮಾಡಲಾಗುತ್ತದೆಯಾದರೆ, ವಾಣಿಜ್ಯ ತೆರಿಗೆ ಪ್ರತಿಯೊಬ್ಬ ಪ್ರಜೆಯಿಂದಲೂ ಪಡೆಯಲಾಗುತ್ತದೆ.

ಸ್ವಾಮೀ, ನಮ್ಮ ರಾಜ್ಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ತೆರಿಗೆ ನಮ್ಮ ಆದಾಯದ ಮೂಲ. ನಮ್ಮ ಆಯವ್ಯಯದಲ್ಲಿ ತೋರಿಬಂದ

ಕೊರತೆಯನ್ನು ತುಂಬಲು ತೆರಿಗೆ ಅತ್ಯಂತ ಸಹಕಾರಿ. ಆಯವ್ಯಯದಲ್ಲಿ ಕಂಡುಬಂದ ಕೊರತೆಯನ್ನು ನೀಗಿಸಲು ವಾಣಿಜ್ಯ ತೆರಿಗೆ ಉಪಯೋಗಕ್ಕೆ ಬರುತ್ತದೆ ಎಂದು ಯಾರೊಬ್ಬರೂ ಇಲ್ಲಿ ಬೊಟ್ಟು ಮಾಡಿ ಹೇಳಿಲ್ಲ.

ಸ್ವಾಮೀ, ಮುಂಬಯಿ ಸರಕಾರ ಇತ್ತೀಚೆಗೆ, ಬಹುವಂಶ ತೆರಿಗೆಯ ವಿಧಾನವನ್ನು ಅನುಸರಿಸಲು ಆರಂಭಿಸಿದೆ. ನಾವು ಕೂಡಾ ನಮ್ಮ ತೆರಿಗೆಯ ವಿಧಾನವನ್ನು ಪರಿಷ್ಕರಿಸುವ ಸಮಯ ಇದೀಗ ಪ್ರಾಪ್ತವಾಗಿದೆ ಅಂತ ನನಗನಿಸುತ್ತಿದೆ. ನಾವು ಎಲ್ಲಾ ವಿಧದ ತೆರಿಗೆಯನ್ನು ಸಂಗ್ರಹಿಸುವುದರಿಂದ ಈ ಅಂಶದ ಕಡೆಗೆ ಗಮನ ಹರಿಸಬಹುದು. ಈ ವಿಷಯದ ಪ್ರತಿಪಾದನೆಯ ಮುಖ್ಯ ಧ್ಯೇಯವೆಂದರೆ, ಸರಕಾರ ಈ ಕುರಿತು ಚಿಂತನೆ ಮಾಡಿ ನಿರ್ಣಯ ತೆಗೆದುಕೊಳ್ಳ ತಕ್ಕದ್ದು ಎಂಬುದು. ಜನರಿಗೆ ಕೊಂಚ ರೀಯಾಯಿತಿ ಕೊಡುವ ವಿಧಾನವೆಂದರೆ, ವಾಣಿಜ್ಯ ತೆರಿಗೆಯ ಮಿತಿಯನ್ನು ಹತ್ತು ಸಾವಿರದಿಂದ ಇಪ್ಪತ್ತು ಸಾವಿರಕ್ಕೆ ಏರಿಸುವುದು. ನಮ್ಮ ಸರಕಾರ ಖಂಡಿತವಾಗಿಯೂ ಅರ್ಹ ವಲಯಗಳಲ್ಲಿ ಈ ರಿಯಾಯಿತಿಯನ್ನು ಅನ್ವಯಗೊಳಿಸುತ್ತದೆ ಎಂಬ ಭರವಸೆ ನನಗಿದೆ. ಇದನ್ನು ಭರವಸೆಯಿಂದ ಯಾಕೆ ಹೇಳ್ತಾ ಇದ್ದೇನೆ ಅಂದ್ರೆ, ಇತ್ತೀಚಿನ ಒಂದು ಸಂದರ್ಭದಲ್ಲಿ ಸರಕಾರ ಕೈಗೊಂಡ ಕ್ರಮವನ್ನು ಉಲ್ಲೇಖಿಸಬೇಕಾಗಿದೆ.

## ರಂಪಣಿ ಮೀನುಗಾರರ ಸಮಸ್ಯೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ರಂಪಣಿ' ಮೀನುಗಾರಿಕೆಯ ಕ್ರಮವನ್ನು ಸರಕಾರದ ಗಮನಕ್ಕೆ ತಂದಿರುತ್ತೇನೆ. 'ರಂಪಣಿ' ವಿಧಾನದಲ್ಲಿ 60 ಅಥವಾ 70 ಮೀನುಗಾರರು ಒಟ್ಟು ಸೇರಿ ತಮ್ಮ ತಮ್ಮ ಬಲೆಗಳನ್ನು ಸಾಮೂಹಿಕವಾಗಿ ಉಪಯೋಗಿಸಿಕೊಂಡು ಹಿಡಿದ ಒಟ್ಟು ಮೀನನ್ನು ಪರಸ್ಪರ ಹಂಚಿಕೊಳ್ಳುವಂಥ ಪದ್ಧತಿ. ಈ ವಿಷಯವನ್ನು ಗಮನಕ್ಕೆ ತಂದಾಗ ಸರಕಾರ ಸಮಯೋಚಿತ ನಿರ್ಧಾರಕ್ಕೆ ಬಂದು, 'ರಂಪಣಿ' ಮೀನುಗಾರರ ಮೇಲಿನ ವಾಣಿಜ್ಯ ತೆರಿಗೆಯನ್ನು ವಿನಾಯಿತಿಸಲಾಗಿದೆ ಎಂದು ಘೋಷಿಸುವಂತಾಯಿತು. ಇದರಿಂದ ಖಜಾನೆಗೆ ಒಂದಿಷ್ಟು ಮೊಬಲಗು ನಷ್ಟವಾದುದಂತೂ ನಿಜ. ನನ್ನ ಪ್ರಕಾರ ಹೀಗಿರುವ ಕೆಲವು ತೊಂದರೆಗಳನ್ನು ಸರಕಾರದ ಗಮನಕ್ಕೆ ತಂದಲ್ಲಿ, ಖಂಡಿತವಾಗಿಯೂ ಸರಕಾರ ರಿಯಾಯಿತಿಯನ್ನು ಘೋಷಿಸುವುದರಲ್ಲಿ ಸಂದೇಹವೇ ಬೇಡ. ಈವೊಂದು ಉದಾಹರಣೆಯಿಂದ ಏನು ವೇದ್ಯವಾಗುತ್ತದೆ ಅಂದ್ರೆ, ಸರಕಾರಕ್ಕೆ ತಕ್ಕ ಮಟ್ಟಿನ

ಬಾಧ್ಯತೆಗಳು ಇದ್ದಾಗ್ಯೂ, ನ್ಯಾಯವೊದಗಿಸುವುದರಲ್ಲಿ ಅದು ಹಿಂದೇಟು ಹಾಕುವುದಿಲ್ಲ ಎಂಬುದಂತೂ ಶತಸಿದ್ಧ ಎಂಬ ವಿಚಾರ.

### ತೆರಿಗೆಗೆ ವೈಜ್ಞಾನಿಕ ತಳಹದಿ ವಿಹಿತ

ಕೊನೆಯಲ್ಲಿ ನಾನು ಹೇಳುವುದಿಷ್ಟೆ: ಆದಷ್ಟು ಬೇಗನೆ ಸರಕಾರ ತೆರಿಗೆ ನೀತಿಯನ್ನು ವೈಜ್ಞಾನಿಕ ತಳಹದಿಯ ಮೇಲೆ ರೂಪಿಸಿಕೊಳ್ಳಬೇಕು. ಎಷ್ಟೇ ತೆರಿಗೆಯ ಹಣ ಹರಿದು ಬಂದರೂ, ಅದು ಎಷ್ಟಕ್ಕೂ ಸಾಕಾಗಲಾರದು ಎಂಬುದು ನಮಗೆಲ್ಲ ತಿಳಿದ ವಿಚಾರವೇ. ಸರಕಾರ ತನ್ನ ಖರ್ಚಿನ ಮೇಲೂ ಹಿಡಿತವನ್ನು ಸಾಧಿಸುವ ಸಮಯ ಇದೀಗ ಸನ್ನಿಹಿತವಾಗಿದೆ ಎಂದು ಹೇಳಬಹುದು. ಉಳಿತಾಯ ಯಾವಾಗಲೂ ಆದಾಯಕ್ಕೆ ತಾತ್ಪೂರಿಕವಾಗಿ ಸಮನ್ವಯವಾಗಿರುತ್ತದೆ. ನಮ್ಮ ರಾಜ್ಯದ ತೆರಿಗೆಯ ನೀತಿಯನ್ನು ರೂಪಿಸುವ ಸಂದರ್ಭದಲ್ಲಿ ಖಂಡಿತವಾಗಿಯೂ ಸರಕಾರ ಈ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳುತ್ತದೆ ಎಂದು ನಾನು ಭಾವಿಸುತ್ತೇನೆ.

***

## ಕೈಮಗ್ಗ ಉದ್ದಿಮೆ–
## ಸರಕಾರದ ತೀರ್ಮಾನಗಳು

### 3 ನವೆಂಬರ್, 1952

**ಶ್ರೀ ಟಿ.ಎ.ಪೈ:** ಅಧ್ಯಕ್ಷ ಮಹೋದಯರೇ, ಮಾನ್ಯ ಮಂತ್ರಿಗಳೇ, ಇದೊಂದು ಪ್ರಮುಖ ವಿಷಯದ ಬಗ್ಗೆ ಚರ್ಚಿಸುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟಿರುವುದಕ್ಕೆ ಸಂತೋಷವಾಗಿದೆ. ವಸ್ತುಶಃ ಇಂತಹ ವಿಷಯಗಳ ಬಗೆಗೆ ಚರ್ಚೆಯ ಅವಶ್ಯಕತೆ ಇದೆಯೇ ಎಂಬುದು. ಮಾನ್ಯ ಮುಖ್ಯಮಂತ್ರಿಗಳು ಕೇಂದ್ರ ಸರಕಾರಕ್ಕೆ ಅನುಮೋದನೆಯೊಂದನ್ನು ಸಲ್ಲಿಸಿದ್ದಾರೆ– ಧೋತಿ ಮತ್ತು ಬಣ್ಣದ ಸೀರೆಗಳನ್ನು ಕೈಮಗ್ಗ ಉದ್ಯಮದ ಸುಪರ್ದಿಗೇ ಬಿಟ್ಟುಕೊಡಬೇಕಂತ. ಪ್ರಾಯಶಃ ಈ ಸಲಹೆ ಅಂಗೀಕಾರವಾಗಲೂಬಹುದು. ನಿಜವಾಗಿಯೂ ಈ ವಿಷಯದಲ್ಲಿ ಅಷ್ಟೊಂದು ಹಾಹಾಕಾರ ಬೇಕಿರಲಿಲ್ಲವೇನೋ. ಮಾನ್ಯ ಮಂತ್ರಿಗಳು ಹೇಳಿರುವಂತೆ, ಇದೊಂದು ಜ್ವಲಂತ ಸಮಸ್ಯೆಯಾಗಿದ್ದು, ಬರ ಪರಿಹಾರದ ಸಮಸ್ಯೆ ಎಷ್ಟೋ

ಅಷ್ಟೇ ಮಹತ್ವದ್ದೆಂದು ಹೇಳುವುದರಲ್ಲಿ ಅರ್ಥವಿದೆ. ಅನೇಕ ಸಲಹೆ ಸೂಚನೆಗಳು ಮುಂದೆ ಬಂದಿವೆ– ರಾಶಿ ಬೀಳುತ್ತಿರುವ ಕೈಮಗ್ಗದ ಬಟ್ಟೆಗಳನ್ನು ವಿಲೇವಾರಿ ಮಾಡುವುದಕ್ಕೆ ಸರಕಾರ ಮುಂದೆ ಬರಬೇಕು, ಕೈಮಗ್ಗ ಉದ್ಯಮಕ್ಕೆ ಅಗ್ಗದ ದರದಲ್ಲಿ ನೂಲನ್ನು ಒದಗಿಸಿ ಸೂಕ್ತ ಸಬ್ಸಿಡಿಯನ್ನು ನೀಡಬೇಕು, ಅಂತೆಯೇ ಸರಕಾರ ಕೈಮಗ್ಗದ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆಯನ್ನು ಒದಗಿಸಬೇಕು. ಈ ಎಲ್ಲಾ ಸಲಹೆಗಳು ಕೈಮಗ್ಗ ಉದ್ಯಮಕ್ಕೆ ಶಾಶ್ವತ ಪರಿಹಾರ ಒದಗಿಸಬಹುದು ಎಂದು ನನಗನಿಸುತ್ತಿದೆ.

## ಕೈಮಗ್ಗದ ಮಹತ್ವ

ಕೈಮಗ್ಗ ಉದ್ದಿಮೆಗೆ ಈ ದೇಶದಲ್ಲಿ ಭವಿಷ್ಯವೇ ಇಲ್ಲ ಎಂಬುದಾಗಿ ಈ ಎಲ್ಲಾ ಸಲಹೆಗಳಿಗೆ ವಿರೋಧ ವ್ಯಕ್ತಪಡಿಸುವವರು ಹೇಳಬಹುದು. ಇವರು ಹೇಳುವುದಿಷ್ಟೇ, ಆದಷ್ಟು ಬೇಗನೇ ಕೈಮಗ್ಗ ಉದ್ದಿಮೆಯನ್ನು ಬಟ್ಟೆ ಗಿರಣಿ(ಮಿಲ್ಲು ಉದ್ದಿಮೆ)ಗಳಾಗಿ ಮಾರ್ಪಾಟು ಮಾಡಬೇಕಂತ. ಜಾಗತಿಕ ಯುದ್ಧದ ಕಾಲದಲ್ಲಿ ಬಟ್ಟೆಯ ಸರಬರಾಜನ್ನು ಮಿಲ್ಲುಗಳು ಸಾಕಷ್ಟು ಪೂರೈಸಲು ಸಾಧ್ಯವಾಗದಾಗ, ಕೈಮಗ್ಗ ಉದ್ದಿಮೆಯೇ ಬೇಕಾಯಿತು ಮತ್ತು ಇದೊಂದು ಸಮಸ್ಯೆ ಆಗ ಅಷ್ಟಾಗಿ ಉಲ್ಬಣಿಸಿರಲಿಲ್ಲ. ಇದೀಗ ಯುದ್ಧವೂ ನಿಂತಿದೆ, ಗಿರಣಿಗಳೂ ಸಾಕಷ್ಟು ಬಟ್ಟೆಯನ್ನು ಉತ್ಪಾದಿಸುತ್ತಿವೆ– ಹಾಗಾಗಿ ಕೈಮಗ್ಗ ಉತ್ಪನ್ನಗಳು ಯಾತಕ್ಕೆ ಅಂತ ಯಾರಾದರು ಹೇಳಬಹುದು. ಕೈಮಗ್ಗ ನೇಕಾರರಿಗೆ ಬೇರೊಂದು ಗುಡಿಕೈಗಾರಿಕೆಗೆ ಅಳವಡಿಸುವ ಸಲಹೆಯೂ ಬಂದಿದೆ. ಇದು ಅಸಾಧ್ಯವೆಂದು ನನಗನಿಸುತ್ತಿದೆ. ಬೇರೆ ಯಾವುದೇ ಉದ್ದಿಮೆಗಿಂತಲೂ, ಕೈಮಗ್ಗ, ದೇಶದಲ್ಲಿ, ಅದರಲ್ಲೂ ದಕ್ಷಿಣ ಭಾರತದಲ್ಲಿ ಲಕ್ಷೋಪಲಕ್ಷ ಜನರಿಗೆ ವೃತ್ತಿ ಜೀವನ ಒದಗಿಸಿದೆ. ಕೈಮಗ್ಗವನ್ನು ಬೇರೊಂದು ಗುಡಿಕೈಗಾರಿಕೆಗೆ ಸ್ಥಾನಾಂತರಿಸುವುದು ಕನಸಿನ ಮಾತಾದೀತು. ನಮ್ಮಂಥ ದೊಡ್ಡ ದೇಶದಲ್ಲಿ, ಕೈಮಗ್ಗ ಉದ್ದಿಮೆ ಗಿರಣಿ ಉದ್ಯಮಕ್ಕೆ ಸಹಯೋಗದೊಂದಿಗೆ ಇರಬೇಕಾದ್ದು ಅನಿವಾರ್ಯ.

## ವಸ್ತ್ರೋದ್ಯಮ ದೊಡ್ಡ ಕೈಗಾರಿಕೆ

ಭಾರತೀಯ ಉದ್ದಿಮೆಗಳಲ್ಲೇ ವಸ್ತ್ರೋದ್ಯಮವೇ ಅತೀ ದೊಡ್ಡದಾಗಿದ್ದು, ಮತ್ತು ಅತ್ಯಂತ ಕ್ರಮಬದ್ಧ ರೀತಿಯಲ್ಲಿ ಮುಂದುವರಿದಿದೆ ಎಂದು ಹೇಳಬಹುದು. ಭಾರತೀಯ ಬಂಡವಾಳ, ಭಾರತೀಯ ನೌಕರ ವರ್ಗ ಮತ್ತು ಎಲ್ಲಾ ಲಾಭ,

ಭಾರತದ ಷೇರುದಾರರಿಗೇ ಸಲ್ಲುವಂಥದ್ದು ಇದರ ಹೆಗ್ಗಳಿಕೆ. ವಿದೇಶಗಳ ಸ್ಪರ್ಧೆಯಿಂದ ತಮ್ಮನ್ನು ರಕ್ಷಿಸಬೇಕೆಂದು ವಸ್ತ್ರೋದ್ಯಮ ಇತ್ತೀಚೆಗೆ ಸರಕಾರವನ್ನು ಕೇಳಿಕೊಂಡಿದೆ. ಹಾಗಾಗಿ ವಸ್ತ್ರೋದ್ಯಮದ ಬೆಳವಣಿಗೆಯನ್ನು ಕಾಪಾಡುವುದು ವಿಹಿತ. ಅದೇ ವೇಳೆ, ಬಹು ಸಂಖ್ಯಾತ ಕೈಮಗ್ಗ ಉದ್ದಿಮೆಯನ್ನು ಈ ವಸ್ತ್ರೋದ್ಯಮ ಸ್ಥಾನಾಂತರಿಸಿ, ದೊಡ್ಡ ಜನ ಸಮುದಾಯಕ್ಕೆ ಧಕ್ಕೆ ತರುತ್ತದೆ ಎಂಬುದೂ ನಂಬಲಸಾಧ್ಯ. ಒಂದು ವಿಷಯವನ್ನು ನೆನಪಿನಲ್ಲಿಡಬೇಕು– ಕೈಮಗ್ಗ ಉದ್ದಿಮೆ ಈ ದೇಶದ ಮಹತ್ವದ ಉದ್ದಿಮೆಯಾಗಿದ್ದು ಗುಡಿಕೈಗಾರಿಕೆಯಾಗಿ ಬೆಳೆದು ಬಂದಿರುವಂಥದ್ದು. ಇವುಗಳಲ್ಲಿ ಕೆಲವು ಘಟಕಗಳು ಇಂದು ವಿದ್ಯುಚ್ಛಕ್ತಿಯಿಂದ ಕೆಲಸ ಮಾಡುತ್ತಿದ್ದು, ಮುಂದೆ ಸಾಕಷ್ಟು ಘಟಕಗಳು ವಿದ್ಯುಚ್ಛಕ್ತಿ ಅಳವಡಿಕೆಯಿಂದ ಉತ್ಪಾದನೆಯಲ್ಲಿ ಪ್ರಗತಿ ಕಾಣಬಹುದೆಂದು ಅನಿಸುತ್ತಿದೆ. ಪ್ರತೀ ಹತ್ತು ಕುಟುಂಬಗಳಲ್ಲಿ ಒಂದು ಕುಟುಂಬ ಕೈಮಗ್ಗ ಉದ್ದಿಮೆಯನ್ನೇ ಅವಲಂಬಿಸಿರುವುದರಿಂದ ನಾವು ಈ ಉದ್ದಿಮೆಯನ್ನು ನಿರ್ಲಕ್ಷ್ಯ ಮಾಡುವಂತಿಲ್ಲ. ಈ ಉದ್ದಿಮೆಯ ಅಭಿವೃದ್ಧಿ ದೇಶ ಪ್ರೇಮದ ದ್ಯೋತಕವಾಗಿದ್ದು, ಪ್ರತಿಯೊಬ್ಬ ಪ್ರಜೆಯೂ ಈ ಬಗೆಗೆ ಪ್ರೋತ್ಸಾಹ ನೀಡಬೇಕಾದ ಅವಶ್ಯಕತೆಯಿದೆ.

ಒಂದೇ ಒಂದು ವಿಷಯವೆಂದರೆ, ಕೈಮಗ್ಗ ಉದ್ದಿಮೆಗೆ ಧೋತಿ ಮತ್ತು ಸೀರೆಗಳನ್ನು ಉತ್ಪಾದಿಸುವ ಪರವಾನಗಿ ನೀಡಿದ್ದೇ ಆದಲ್ಲಿ, ಈ ದೇಶದ ಬಡ ಜನತೆಗೆ ಇದಕ್ಕಿಂತಲೂ ಅಗ್ಗವಾಗಿ ಸಿಗುವ ಮಿಲ್ ಬಟ್ಟೆಗಳನ್ನು ಖರೀದಿಸುವುದರಿಂದ ವಂಚಿತರನ್ನಾಗಿಸಿದಂತಾಗುತ್ತದೆ. ಭಾರತೀಯ ವ್ಯಾಪಾರಸ್ಥರ ಒಕ್ಕೂಟದ ಅಧ್ಯಕ್ಷರು ಇತ್ತೀಚೆಗೆ ಇದೇ ಬಗೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ವಿದೇಶಗಳಿಂದ ಅಗ್ಗದ ಬೆಲೆಯ ಬಟ್ಟೆಗಳನ್ನು ಆಮದು ಮಾಡಬಾರದೆಂದು ಮಿಲ್ಲು ಉದ್ದಿಮೆಗಾರರು ಇತ್ತೀಚೆಗೆ ಸರಕಾರಕ್ಕೆ ಬೇಡಿಕೆಯನ್ನು ಸಲ್ಲಿಸಿದ್ದಾರೆ.

ಬಳಕೆದಾರರ ಅವಶ್ಯಕತೆಯನ್ನು ಗಮನದಲ್ಲಿಟ್ಟಾಗ, ವಿದೇಶದಿಂದ ಅಗ್ಗದ ಬೆಲೆಯ ಬಟ್ಟೆಗಳ ಆಮದು ಮಾಡುವ ಬಗ್ಗೆ ಆಲೋಚಿಸಿ, ಭಾರತದ ಮಿಲ್ ಉದ್ದಿಮೆದಾರರಿಗೆ ಸೂಕ್ತ ಸ್ಪರ್ಧೆಯನ್ನು ಏರ್ಪಡಿಸಿದಂತಾಗುತ್ತದೆ. ಕೈಮಗ್ಗ ಉದ್ದಿಮೆ ಗಿರಣಿ ಉದ್ಯಮಕ್ಕೆ ಸಹಯೋಗದೊಂದಿಗೆ ಇರಬೇಕಾದ್ದು ಅನಿವಾರ್ಯ. ಅಗತ್ಯಗಳನ್ನು ಗಣನೆಗೆ ತೆಗೆದುಕೊಳ್ಳದೆ, ಭಾರತೀಯ ಮಿಲ್ಲು ಉದ್ದಿಮೆದಾರರಿಗೆ ರಕ್ಷಣೆ ಒದಗಿಸುವ ದೃಷ್ಟಿಯಿಂದ ಸರಕಾರ ಕ್ರಮಕೈಗೊಂಡಿದೆ, ಯಾಕಂದರೆ,

ಭಾರತೀಯ ಬಂಡವಾಳ ಹಾಕಿ ತೊಡಗಿಸಿದ ಈ ಉದ್ದಿಮೆಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಭಾರತೀಯ ಕಾರ್ಮಿಕರು ದುಡಿಯುತ್ತಿದ್ದಾರೆ. ಅದೇ ಬಗೆಯಲ್ಲಿ ಕೈಮಗ್ಗ ಉದ್ದಿಮೆ ವಿಷಯದಲ್ಲೂ ಚಿಂತಿಸಬಹುದು.

## ಕೈಮಗ್ಗ ಅವಗಣಿಸುವಂತಿಲ್ಲ

ಸ್ವಾಮೀ, ಮಿಲ್ ಮತ್ತು ಕೈಮಗ್ಗದ ಉದ್ದಿಮೆಗಳ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸುವ ಸಮಯ ಇದೀಗ ಸನ್ನಿಹಿತವಾಗಿದೆ. ಇವೆರಡೂ ಪರಸ್ಪರ ಪೂರಕವಾಗಿ ಪ್ರವರ್ತಿಸಬೇಕಾಗಿವೆ. ಜಪಾನ್‌ನಂಥ ಕೈಗಾರಿಕೆಯಲ್ಲಿ ಮುಂದುವರಿದ ದೇಶಗಳಲ್ಲಿ ಕೈಮಗ್ಗದ ಬಟ್ಟೆಗಳನ್ನು ಸ್ಥಳೀಯ ಉಪಯೋಗಕ್ಕೂ, ಮಿಲ್ ವಸ್ತ್ರಗಳನ್ನು ರಫ್ತುಮಾಡುವುದಕ್ಕೂ ಸಂಘಟಿಸುತ್ತಾರೆ ಎಂದು ಕೇಳಿದ್ದೇನೆ. ಕೈಗಾರಿಕೆಯಲ್ಲಿ ಮುಂದುವರಿದ ಯಾವುದೇ ದೇಶ ತನ್ನ ಕೈಮಗ್ಗ ಉದ್ದಿಮೆಯನ್ನು ಯಾವತ್ತೂ ಅವಗಣನೆ ಮಾಡಿಲ್ಲ. ಕೈಮಗ್ಗದ ಬಟ್ಟೆಗಳ ಗುಣಮಟ್ಟವನ್ನು ಹೆಚ್ಚಿಸಿದ್ದಲ್ಲದೆ ಕೆಲವೊಮ್ಮೆ ಅವು ಮಿಲ್ ಬಟ್ಟೆಗಳಿಗಿಂತಲೂ ಉಚ್ಚ ಮಟ್ಟದ್ದನ್ನಾಗಿಸಿದ್ದೂ ಇದೆ. ಆದುದರಿಂದ ಗೊತ್ತುಪಡಿಸಿದ ಸಲಹೆಗಳನ್ನು ಪರಿಗಣನೆಗೆ ತೆಗೆದುಕೊಂಡು ಕೈಮಗ್ಗ ಉದ್ದಿಮೆಯನ್ನು ಉಳಿಸಿಕೊಳ್ಳಬೇಕೆಂಬುದು ನನ್ನ ಅಭಿಪ್ರಾಯ. ಅಂದರೆ ಸೀರೆ ಮತ್ತು ಧೋತಿಯ ಉತ್ಪಾದನೆಯನ್ನು ಕೈಮಗ್ಗ ಉದ್ದಿಮೆಗೇ ಮೀಸಲಾಗಿಡಬೇಕೆಂಬುದು ಅನಿವಾರ್ಯ. ತತ್ಫಲವಾಗಿ ಜನರು ಕೈಮಗ್ಗದ ಬಟ್ಟೆಗಳಿಗೆ ಸ್ವಲ್ಪ ಹೆಚ್ಚು ಹಣ ತೆರಬೇಕಾಗಿ ಬರಬಹುದು. ಅಂದರೆ, ಪ್ರತಿ ವರ್ಷ ಒಂದು ಕುಟುಂಬ ನಾಲ್ಕೋ ಐದೋ ರೂಪಾಯಿ ಹೆಚ್ಚು ಖರ್ಚು ಮಾಡಬಹುದು. ಆದರೆ ಅದರಿಂದಾಗುವ ಪ್ರತಿಫಲ ಅಪಾರ.

ಇತ್ತೀಚೆಗೆ ಕೇಂದ್ರ ಸರಕಾರ ಕೈಮಗ್ಗ ಸಂಸ್ಥೆಯೊಂದನ್ನು ಸ್ಥಾಪಿಸುವ ಪ್ರಸ್ತಾಪ ಮಾಡಿದೆ. ಅಂತೆಯೇ ಮಿಲ್ ಬಟ್ಟೆಗಳ ಮೇಲೆ ಒಂದು ಪ್ರಮಾಣದ ತೆರಿಗೆಯನ್ನು ವಿಧಿಸುವಂತೆಯೂ ಆಲೋಚಿಸಿದೆ. ಇದರಿಂದ ಸುಮಾರು 6 ಕೋಟಿ ರೂಪಾಯಿಗಳನ್ನು ಸಂಗ್ರಹಿಸಿ ಅದರ ಮೂಲಕ ಕೈಮಗ್ಗ ಉದ್ದಿಮೆಯನ್ನು ಅಭಿವೃದ್ಧಿಪಡಿಸುವಂತೆಯೂ ಸಿದ್ಧತೆ ನಡೆಸಿದೆ. ನನ್ನ ಅಭಿಪ್ರಾಯದಲ್ಲಿ ಇವೆಲ್ಲವುಗಳಿಂದ ಕೈಮಗ್ಗ ಉದ್ದಿಮೆಗೆ ಅಷ್ಟೇನೂ ಉಪಯೋಗವಾಗಲಾರದು. ಒಂದೇ ಒಂದು ವಿಧಾನವೆಂದರೆ, ಸೀರೆ ಮತ್ತು ಧೋತಿಗಳ ಉತ್ಪಾದನೆ ಕೈಮಗ್ಗಕ್ಕೇ ಮೀಸಲಾಗಿಡಬೇಕು– ಇದರಿಂದ ಉದ್ದಿಮೆ ತನ್ನ ಕಾಲ ಮೇಲೆ ತಾನು

ನಿಲ್ಲಬಹುದು. ಇನ್ನೂ ಒಂದು ವಿಷಯ– ಮಿಲ್‌ಗಳಿಂದ ಉತ್ಪಾದಿಸಲ್ಪಡುವ ನೂಲು ಕೈಮಗ್ಗ ಉದ್ದಿಮೆಗೆ ಸಾಕಷ್ಟು ಲಭ್ಯವಾಗಬೇಕಾದ್ದು– ಈ ವಿಷಯದಲ್ಲಿ ಸರಕಾರ ಖಾತ್ರಿಯಾದ ಭರವಸೆ ಕೊಡಬೇಕು.

## ಕೈಮಗ್ಗ ಬಟ್ಟೆ ದುಬಾರಿಯೆ?

ಕೈಮಗ್ಗ ಉದ್ದಿಮೆಗೆ ಇಂದು ಪರದೇಶಗಳಿಂದ ಸರಬರಾಜಾಗುವ ಹತ್ತಿಯಿಂದ ನೂಲು ತಯಾರಿಸಿ ವಿತರಣೆಯಾಗುವುದರಿಂದಾಗಿ ಅದರ ಬೆಲೆ ಸ್ವದೇಶಿ ಹತ್ತಿಯಿಂದ ತಯಾರಾದ ನೂಲಿಗಿಂತ ತುಸು ಹೆಚ್ಚು ಎಂದು ಹೇಳಬಹುದು. ಹಾಗಾಗಿ, ಮಿಲ್ ಬಟ್ಟೆಗಳಿಗಿಂತ ಕೈಮಗ್ಗದ ಬಟ್ಟೆಗಳ ಬೆಲೆ ಕೊಂಚ ಜಾಸ್ತಿಯಾಗಿದೆ. ಇವೆಲ್ಲಾ ಕಾರಣಗಳಿಂದಾಗಿ ಕೈಮಗ್ಗದ ಉದ್ದಿಮೆ ಕುಂಠಿತವಾಗಿದೆ. ಕೈಮಗ್ಗದ ಉದ್ದಿಮೆ ನಿಜವಾದ ಅರ್ಥದಲ್ಲಿ ಅಭಿವೃದ್ಧಿ ಹೊಂದಬೇಕಾದಲ್ಲಿ ಮತ್ತು ರಾಜ್ಯದಲ್ಲಷ್ಟೇ ಅಲ್ಲ, ಸಮಗ್ರ ರಾಷ್ಟ್ರದಲ್ಲಿ ಲಕ್ಷೋಪಲಕ್ಷ ಜನರಿಗೆ ಆಧಾರವಾಗಬೇಕಾದಲ್ಲಿ ಮಿಲ್ ವಸ್ತ್ರೋದ್ಯಮ ಕೆಲವೊಂದು ತ್ಯಾಗ ಮಾಡಬೇಕಾಗಿದೆ. ಅದರಲ್ಲೂ ಮುಖ್ಯವಾಗಿ ಅಂಚುಹೊಂದಿದ ಧೋತಿ ಮತ್ತು ಸೀರೆ ತಯಾರಿಕೆಯನ್ನು ಸಂಪೂರ್ಣವಾಗಿ ಕೈಮಗ್ಗ ಉದ್ದಿಮೆಗೇ ಮೀಸಲಾಗಿಡಬೇಕಾಗಿದೆ. ಇದು ಒಂದು ವರ್ಷದ ಅವಧಿಗೋ, 5 ವರ್ಷಗಳ ಅವಧಿಗೋ ಅನ್ವಯಿಸುವಂತೆ ಮಾಡಬಾರದು, ಯಾಕಂದರೆ ಸರಕಾರ ಒಂದೊಮ್ಮೆ ಈ ವಿಧಾನ ಫಲಕಾರಿಯಲ್ಲವೆಂದು ತಿಳಿದರೆ, ಯಾವುದೇ ಸಮಯ ಹಿಂದೆಗೆದುಕೊಳ್ಳುವ ಅವಕಾಶವೂ ಇರುತ್ತದೆ. ಕೇಂದ್ರ ಸರಕಾರದ ಮೇಲೆ ಈ ನಿಟ್ಟಿನಲ್ಲಿ ಒತ್ತಡ ತಂದು, ಕೈಮಗ್ಗದ ಉದ್ದಿಮೆಯ ಅಭಿವೃದ್ಧಿಗೆ ಸಹಕಾರಿಯಾಗುವ ನಿಲುವನ್ನು ತಾಳುವಂತೆ ಮಾಡುವುದಲ್ಲದೆ ನಮ್ಮ ರಾಜ್ಯ ಆ ಕುರಿತು ಅತೀವ ಕಾಳಜಿ ಹೊಂದಿದೆ ಎಂಬುದನ್ನು ದೃಢಪಡಿಸಬೇಕಾಗಿದೆ.

***

# ಸದನದ ಕಾರ್ಯಕಲಾಪಗಳಿಗೆ

## ಅನುವಾದಕರ ನೇಮಕ

### –ಠರಾವು

### 4ನೇ ಡಿಸೆಂಬರ್, 1952

**ಶ್ರೀ ಅನಂತ ಪೈ:** ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಸದಸ್ಯರಾದ ಶ್ರೀ ಸಿ.ವಿ.ಕೆ.ರಾವ್ ಅವರು ಇಂಗ್ಲಿಷ್‌ನಲ್ಲಿ ಮಾತಾಡಿದ್ದಕ್ಕೆ ನಾನು ಆಭಾರಿಯಾಗಿದ್ದೇನೆ. ತದನಂತರ, ಸುಮಾರು ಒಂದು ತಾಸಿನವರೆಗೆ ಮಾತನಾಡಿದ ಮಾನ್ಯ ಸದಸ್ಯರುಗಳು ಏನು ಹೇಳುತ್ತಾರೆ ಎಂಬುದನ್ನು ಅರ್ಥಮಾಡಿಕೊಳ್ಳಲು ನಾನು ಶತಪ್ರಯತ್ನ ಪಟ್ಟೆ. ಆದರೆ ನನಗೆ ಅವರ ಪ್ರತಿಪಾದನೆಗಳು ಅರ್ಥವಾಗಲಿಲ್ಲ. ಅವರೆಲ್ಲ ತಮ್ಮ ಚರ್ಚೆಯಲ್ಲಿ ಪ್ರಸ್ತಾಪಿಸಿರುವ ಠರಾವಿನ ಅನುಮೋದನೆ ಮಾಡಿರುತ್ತಾರೆ ಎಂದು ನಾನು ಭಾವಿಸುತ್ತೇನೆ. ಆದರೆ ನಾನು ಈ ಠರಾವನ್ನು ವಿರೋಧಿಸುತ್ತೇನೆ. ಯಾಕಂದರೆ, ಸ್ವತಃ ಪ್ರತಿಪಾದಕರೇ ಈ ಠರಾವನ್ನು ಸೃಷ್ಟಿಮಾಡಿದಂತಿದೆ. ನಮ್ಮ ದೇಶದಲ್ಲಿ ಸಾಮಾನ್ಯವಾಗಿ ನಾವೇ ನಮ್ಮ ಸಮಸ್ಯೆಗಳನ್ನು ಹುಟ್ಟುಹಾಕಿಕೊಳ್ಳುವಂಥ ಸಂಪ್ರದಾಯ ಬೆಳೆದು ಬಂದಿದೆ. ಸಾಕಷ್ಟು ಸಮಸ್ಯೆಗಳು ನಮ್ಮನ್ನು ಕಾಡುತ್ತಿದ್ದಾಗ್ಯೂ, ಮಾನ್ಯ ಸದಸ್ಯರುಗಳು ಹೊಸ ಸಮಸ್ಯೆಗಳನ್ನು ಯಾಕೆ ಎಳೆದು ತರುತ್ತಾರೋ ನಾನರಿಯೆ. ಮಾನ್ಯ ಸದಸ್ಯರುಗಳಿಗೆ ಇಂಗ್ಲಿಷ್ ಚೆನ್ನಾಗಿ ಬರುತ್ತಿದ್ದಾಗ್ಯೂ, ತಮ್ಮ ಪ್ರಾಂತೀಯ ಭಾಷೆಗಳಲ್ಲೇ ಯಾಕೆ ಪ್ರತಿಪಾದನೆ ಮಾಡುತ್ತಾರೋ ತಿಳಿಯದಾಗಿದೆ. ಮಾನ್ಯ ಸದಸ್ಯರಾದ ಶ್ರೀ ಸಿ.ವಿ.ಕೆ.ರಾವ್ ಸ್ವತಃ ಸ್ವಲ್ಪ ಸಮಯ ತೆಲುಗಿನಲ್ಲಿ ಮಾತನಾಡಿದರೂ, ಮುಂದೆ ಇಂಗ್ಲಿಷ್‌ನಲ್ಲಿ ಹೇಳಿರುವುದರಿಂದ ನಮಗೆಲ್ಲ ಅರ್ಥವಾಗುವಂತಾಯಿತು.

ಯಾರಿಗಾದರೂ ಏನಾದರು ತೊಂದರೆ ಇದ್ದರೆ , ಅದು ಕರ್ನಾಟಕದಿಂದ ಬಂದಂಥ ಮಾನ್ಯ ಸದಸ್ಯರುಗಳಿಗೆ ಮಾತ್ರ. ಮಿಕ್ಕುಳಿದ ಮಾನ್ಯ ಸದಸ್ಯರುಗಳಿಗೆ ತಮ್ಮ ತಮ್ಮ ಪ್ರಾಂತೀಯ ಭಾಷೆಗಳಲ್ಲಿ ವರದಿಗಾರರನ್ನು ಒದಗಿಸಲಾಗಿದ್ದು, ಅವರಿಗೆಲ್ಲ ಸರಕಾರ ಅನುವಾದಕರನ್ನು ಒದಗಿಸಿ ಇಲ್ಲಿ ನಡೆಯತಕ್ಕ ಎಲ್ಲ ವಿಚಾರಗಳು ಮನದಟ್ಟಾಗುವುದಕ್ಕೆ ಅನುವುಮಾಡಿಕೊಡಲಾಗಿದೆ. ಕರ್ನಾಟಕದಿಂದ ಬಂದಂಥ ಸದಸ್ಯರುಗಳಿಗೆ, ಸದನದ ಕಾರ್ಯಾಲಯ ಕನ್ನಡ ವರದಿಗಾರರನ್ನು ಒದಗಿಸಿಲ್ಲ. ಹೀಗಾಗಿ ನಮ್ಮಲ್ಲಿ ಅನೇಕರು ಕನ್ನಡದಲ್ಲಿ ಮಾತನಾಡುವುದಕ್ಕೆ

ಸಾಧ್ಯವಾಗುತ್ತಿಲ್ಲ. ಮತ್ತು ಇತರ ಸದಸ್ಯರುಗಳು ಮಾತನಾಡುವಂತೆ ನಮಗೆ ನಮ್ಮ ಭಾಷೆಯ ಮೇಲಿನ ಅಭಿಮಾನವನ್ನು ಪ್ರಕಟಿಸುವುದಕ್ಕೆ ಅವಕಾಶ ಒದಗಿಬರುತ್ತಿಲ್ಲ. ನಾವು ಕನ್ನಡದಲ್ಲಿ ಮಾತನಾಡುವುದಿದ್ದಲ್ಲಿ, ನಾವೇನು ಮಾತಾಡುತ್ತೇವೋ ಅದನ್ನು ಪೂರ್ತಿ ಬರೆದು ಗೌರವಾನ್ವಿತ ಅಧ್ಯಕ್ಷರಿಗೆ ನೀಡಬೇಕಾಗುತ್ತದೆ.

ಸ್ವಾಮೀ, ನಾವು ಸದನಕ್ಕೆ ಬಂದಾಗ, ಇಡೀ ರಾಜ್ಯವನ್ನೇ ಒಂದಾಗಿ ಪರಿಗಣಿಸಬೇಕಲ್ಲದೆ, ಪ್ರತಿಯೊಬ್ಬ ಸದಸ್ಯನೂ ನಿವೇದಿಸಿಕೊಳ್ಳುವ ತನ್ನ ಅಭಿಪ್ರಾಯವನ್ನು ನಾವು ಅರಿತು ಅದನ್ನು ಪ್ರಶಂಸೆ ಮಾಡುವ ಸ್ಥಿತಿಯಲ್ಲಿರಬೇಕಾಗುತ್ತದೆ. ನಮ್ಮಲ್ಲಿ ಕೆಲವು ಸದಸ್ಯರಿಗೆ ಇಂಗ್ಲಿಷ್‌ನಲ್ಲಿ ಮಾತಾಡುವುದು ಅಶಕ್ಯವೆಂದಾದಲ್ಲಿ ಅವರು ತಮ್ಮ ಮಾತೃಭಾಷೆಯಲ್ಲೇ ಮಾತನಾಡುವುದಕ್ಕೆ ಯಾವುದೇ ಅಭ್ಯಂತರವಿರುವುದಿಲ್ಲ. ಮಾನ್ಯ ಮುಖ್ಯಮಂತ್ರಿಯವರು, ಒಂದು ಮನವಿಯನ್ನು ಮಾಡಿರುತ್ತಾರೆ– ಏನಂತಂದ್ರೆ, ಬೇರೆ ಪ್ರಾಂತೀಯ ಭಾಷೆಗಳು ನಮಗೆ ತಿಳಿಯದಿರುವಾಗ, ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಪಡುವುದರೊಂದಿಗೆ, ಆ ಭಾಷೆಗಳ ಕಲಿಕೆಗೆ ಪ್ರಯತ್ನ ಪಡಬೇಕೆಂದು. ನಿಜವಾಗಿಯೂ ಈ ಎಲ್ಲ ಭಾಷೆಗಳನ್ನು ಅಭ್ಯಾಸ ಮಾಡುವುದಕ್ಕೆ ನಮಗೆಲ್ಲ ಖಂಡಿತವಾಗಿಯೂ ಉತ್ಸುಕತೆ ಇದ್ದೇ ಇದೆ. ಇತ್ತೀಚಿನ ನಮ್ಮ ತಿಳುವಳಿಕೆ ಏನೆಂದರೆ, ಈ ಎಲ್ಲಾ ಭಾಷೆಗಳನ್ನು ನಮ್ಮ ಮೇಲೆ ಬಲವಂತವಾಗಿ ಹೇರಲಾಗುತ್ತಿದೆ ಅಂತ. ಈ ಸದನದಲ್ಲಿ ನಡೆಯುವ ತಾಸುಗಟ್ಟಲೆ ವಾದ ವಿವಾದಗಳನ್ನು ನಾವು ಅರ್ಥಮಾಡಿಕೊಳ್ಳಬೇಕೆಂದರೆ, ಮರುದಿನ, 'ಹಿಂದು', 'ಮೈಲ್', ಅಥವಾ 'ಇಂಡಿಯನ್ ಎಕ್ಸ್‌ಪ್ರೆಸ್'ನಂಥ ಪತ್ರಿಕೆಗಳ ಮೊರೆ ಹೋಗಬೇಕಾಗುತ್ತದೆ. ಯಾಕಂದರೆ, ಹೆಚ್ಚಿನ ಪ್ರತಿಪಾದನೆಗಳೆಲ್ಲ ಮಲಯಾಳಂ, ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ಇರುತ್ತವೆ.

ಈ ಎಲ್ಲ ಪತ್ರಿಕೆಗಳು ಸೂಕ್ತ ಮಾಹಿತಿಯನ್ನು ಒದಗಿಸುತ್ತಿವೆಯೇನೋ ನಿಜ. ಆದರೂ, ಜನರಿಗೆ ಇನ್ನೊಬ್ಬರ ಬಗ್ಗೆಯೂ ಕಾಳಜಿ ಬೇಡವೇ? ನಾವು ಕರ್ನಾಟಕದವರಿಗೆ, ಇತರರು ತೆಲುಗು, ತಮಿಳು ಅಥವಾ ಮಲಯಾಳಂನಲ್ಲಿ ಮಾತನಾಡುತ್ತಿದ್ದರೆ, ಅವರ ದುರಿತಗಳನ್ನು ನಾವೂ ಅರ್ಥಮಾಡಿಕೊಂಡು ಆಂಧ್ರ, ತಮಿಳುನಾಡು ಅಥವಾ ಮಲಬಾರಿನ ಅವರ ಸಮಸ್ಯೆಗಳ ಬಗೆಗೆ ಸಹಾನುಭೂತಿ ವ್ಯಕ್ತಪಡಿಸುವುದಕ್ಕೆ ಸಾಧ್ಯವಾಗುತ್ತಿತ್ತಲ್ಲವೇ? ತಾವು ತಮ್ಮಲ್ಲೇ ಅರ್ಥಮಾಡಿಕೊಳ್ಳುತ್ತಿದ್ದಾರೆ ಏನೋ ನಿಜ, ಆದರೆ ನಮ್ಮ ಗತಿ ಏನು?

ನಾವೂ ಕನ್ನಡದಲ್ಲೇ ಮಾತನಾಡಬಹುದಿತ್ತು. ಆದರೆ ನಾವು ಇಲ್ಲಿ ಅಲ್ಪ ಸಂಖ್ಯಾತರಿದ್ದೇವೆ. ನಾವು ನಮ್ಮ ಸಮಸ್ಯೆಗಳನ್ನು ಕನ್ನಡದಲ್ಲಿ ಪ್ರತಿಪಾದಿಸಿದ ಪಕ್ಷದಲ್ಲಿ ಅದು ನಮಗೆ ಮಾತ್ರ ಅರ್ಥವಾಗಿ, ಸಮಸ್ಯೆ ಸಮಸ್ಯೆಯಾಗಿಯೇ ಉಳಿಯುವಂಥ ಅಪಾಯವಿದೆ. ಹಾಗಾಗಿ ನಮ್ಮ ಭಾಷೆಯಲ್ಲಿ ಮಾತನಾಡುವ ಗೋಜಿಗೆ ನಾವು ಹೋಗುತ್ತಿಲ್ಲ. ಸಭಾಧ್ಯಕ್ಷರಲ್ಲಿ ನಾನು ಒಂದು ಮನವಿ ಮಾಡಿಕೊಳ್ಳೋಣ ಅಂತ ಅಂದುಕೊಂಡಿದ್ದೆ- ಏನಂದರೆ, ನಮಗೂ ಒಬ್ಬ ವರದಿಗಾರರನ್ನು ಒದಗಿಸಿ, ಮತ್ತು ನಾವು ಕನ್ನಡದಲ್ಲೇ ಮಾತನಾಡುವುದಕ್ಕೆ ಅನುವು ಮಾಡಿಕೊಡಿ ಅಂತ. ಹೀಗಾದಲ್ಲಿ ನಮ್ಮ ಭಾಷೆಯ ಸೊಗಸು ಇತರ ಸದಸ್ಯರುಗಳಿಗೂ ವೇದ್ಯವಾದೀತು ಅಂತ. ಆದರೆ ಇದು ಸರಿಯಲ್ಲ ಅಂತ ನಮಗೆ ಅನಿಸಿತು. ಇಲ್ಲಿ ನಾವು ಸೇರುವಂಥದ್ದು ರಾಜ್ಯದ ಸಮಸ್ಯೆಗಳನ್ನು ಬಗೆಹರಿಸುವಂಥ ದೃಷ್ಟಿಯಿಂದ. ಹೀಗಿರುವಾಗ, ಎಲ್ಲರಿಗೂ ಅರ್ಥವಾಗುವಂಥ ಇಂಗ್ಲಿಷ್‌ನಲ್ಲೇ ಮಾತನಾಡಿದರೆ ಏನು ತೊಂದರೆ ಅಲ್ಲವೇ? ಈ ಠರಾವನ್ನು ಅನುಮೋದಿಸಿದ ಹೆಚ್ಚು ಕಡಿಮೆ ಎಲ್ಲ ಸದಸ್ಯರುಗಳು ಒಂದಲ್ಲ ಒಂದು ಸಂದರ್ಭದಲ್ಲಿ ಇಂಗ್ಲಿಷ್‌ನಲ್ಲಿ ಮಾತನಾಡಿದಂಥವರು. ನನ್ನ ಅತ್ಯಂತ ಕಳಕಳಿಯ ವಿನಂತಿ ಏನಂತಂದ್ರೆ, ಅನುವಾದಕರನ್ನು ನೇಮಿಸುವ ಬದಲು ನಮ್ಮೆಲ್ಲ ಸದಸ್ಯರುಗಳು ಸಾಧ್ಯವಾದಷ್ಟು ಮಟ್ಟಿಗೆ ಇಂಗ್ಲಿಷ್‌ನಲ್ಲೇ ವ್ಯವಹರಿಸಲಿ. ಇದರಿಂದ ಎಲ್ಲರಿಗೂ ಕ್ಷೇಮವೇ.

ಮಾನ್ಯ ಸಭಾಧ್ಯಕ್ಷರೆ, ಇನ್ನೂ ಒಂದು ವಿಚಾರ- ತಮಿಳು ಅಥವಾ ತೆಲುಗಿನಲ್ಲಿ ಮಾನ್ಯ ಸದಸ್ಯರುಗಳು ಕೇಳಿದ ಪ್ರಶ್ನೆಗಳಿಗೆ, ಮಂತ್ರಿ ಮಹೋದಯರು ಇಂಗ್ಲಿಷ್‌ನಲ್ಲಿ ಉತ್ತರಿಸಿದಾಗ, ಆಕ್ಷೇಪ ವ್ಯಕ್ತಪಡಿಸುತ್ತಿದ್ದಾರೆ. ಮಾನ್ಯ ಸದಸ್ಯರುಗಳು ತಮ್ಮ ಮಾತೃಭಾಷೆಯಲ್ಲಿ ಪ್ರಶ್ನೆಗಳನ್ನು ಕೇಳುವುದಕ್ಕಾಗಲೀ ವಿಚಾರವಿನಿಮಯ ಮಾಡಿಕೊಳ್ಳುವುದಕ್ಕಾಗಲೀ ಖಂಡಿತವಾಗಿಯೂ ನಮ್ಮ ಅಭ್ಯಂತರವಿಲ್ಲ. ಆದರೆ ಮಂತ್ರಿ ಮಹೋದಯರು ಸಮಸ್ತ ರಾಜ್ಯಕ್ಕೇ ಸೇರಿರುವುದರಿಂದ ಅವರು ಇಂಗ್ಲಿಷ್‌ನಲ್ಲಿ ಉತ್ತರಿಸುವುದೇ ಒಳಿತು ಅಂತ ನನ್ನ ಭಾವನೆ. ಅವರ ಪ್ರತಿಕ್ರಿಯೆಯಿಂದ ಕನಿಷ್ಠ ಸದಸ್ಯರ ಪ್ರಶ್ನೆ ಏನಾಗಿತ್ತು ಎಂಬುದನ್ನು ನಾವು ಅರ್ಥಮಾಡಿಕೊಳ್ಳುವುದಕ್ಕೆ ಸಾಧ್ಯವಾದೀತು. ಆದ್ದರಿಂದ ನನ್ನ ಒಂದೇ ಒಂದು ಮನವಿ ಏನಂತಂದ್ರೆ, ನಮ್ಮ ಮುಂದೆ ಅನೇಕ ಸಮಸ್ಯೆಗಳಿರುವಾಗ ಅವುಗಳ ಕಡೆಗೆ ನಮ್ಮ ಗಮನಹರಿಸಬೇಕೇ ವಿನಾ, ಸಮಯವನ್ನು ಕಬಳಿಸುವಂಥ ಈ ಬಗೆಯ ಠರಾವುಗಳಿಗೆ ಅನುಮೋದನೆ ಸಲ್ಲ ಎಂಬುದು ನನ್ನ ಭಾವನೆ. ಹೀಗಾಗಿ ಠರಾವನ್ನು ಹಿಂತೆಗೆದುಕೊಳ್ಳುವುದೇ ಸೂಕ್ತವಾಗಿರುತ್ತದೆ. ಆದ್ದರಿಂದ

ಮಾನ್ಯ ಸದಸ್ಯರುಗಳು ಸಾಧ್ಯವಾದಷ್ಟು ಎಲ್ಲರಿಗೂ ತಿಳಿದಿರುವಂಥ ಭಾಷೆಯಲ್ಲೆ ಮಾತನಾಡಲಿ. ಆ ಮೂಲಕ ಅವರ ಇಂಗಿತಗಳನ್ನು ನಾವೆಲ್ಲ ಅರ್ಥಮಾಡಿಕೊಳ್ಳಲು ಸಹಾಯಮಾಡಲಿ ಎಂಬುದೇ ನನ್ನ ಕಳಕಳಿಯ ವಿನಂತಿ.

***

## ಮದ್ರಾಸು ಸಂಸ್ಥಾನದ

## ಬಜೆಟ್ ಮೇಲಿನ ಚರ್ಚೆ(1953–54)

### 17 ಡಿಸೆಂಬರ್ 1953

**ಶ್ರೀ ಟಿ.ಎ.ಪೈ:** ನನ್ನ ದ.ಕ.ಜಿಲ್ಲೆಯನ್ನು ಬಾಧಿಸುವಂಥ ಕೆಲವು ಪ್ರಮುಖ ಸಮಸ್ಯೆಗಳನ್ನು ತಮ್ಮ ಅವಗಾಹನೆಗೆ ತರಲು ಬಯಸುತ್ತೇನೆ. ನಮ್ಮ ಮಾನ್ಯ ವಿತ್ತ ಸಚಿವರು ಇತ್ತೀಚೆಗೆ ನಮ್ಮ ಜಿಲ್ಲೆಗೆ ಬಂದಿದ್ದರು. ನಮ್ಮ ಜಿಲ್ಲೆಯ ಮಹತ್ವದ ಸಮಸ್ಯೆಗಳಲ್ಲಿ ಸಂಪರ್ಕಕ್ಕೆ ಸಂಬಂಧಿಸಿದ್ದು ಅತ್ಯಂತ ಪ್ರಮುಖವಾದುದು. ಒಮ್ಮೆ ಈ ಸಮಸ್ಯೆ ಬಗೆಹರಿದದ್ದೇ ಆದಲ್ಲಿ, ಶಿಕ್ಷಣ, ಆರೋಗ್ಯ ಮತ್ತು ಇನ್ನಿತರ ಸಮಸ್ಯೆಗಳನ್ನು ಸುಲಭವಾಗಿ ಪರಿಹರಿಸಬಹುದು. ನಿಜ, ಮಾನ್ಯ ವಿತ್ತ ಸಚಿವರು ಹೇಳಬಹುದು– ಈಗಾಗಲೇ ಆ ಪ್ರದೇಶದಲ್ಲಿ ಬಹಳಷ್ಟು ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ– ಮುಖ್ಯವಾಗಿ, ವೆಸ್ಟ್ ಕೋಸ್ಟ್ ರಸ್ತೆ ಮತ್ತು ಇನ್ನಿತರ ಸೇತುವೆಗಳನ್ನು ನಿರ್ಮಿಸಲಾಗಿದೆ ಅಂತ. ವೆಸ್ಟ್ ಕೋಸ್ಟ್ ಮಾರ್ಗದಿಂದ ಅನೇಕ ಜಿಲ್ಲೆಗಳಿಗೆ ಉಪಯೋಗವಾಗಿದೆ– ಕನ್ಯಾಕುಮಾರಿಯಿಂದ ಮುಂಬಯಿ ತನಕ ಜನ ಸಂಚರಿಸಬಹುದಾಗಿದೆ. ದ.ಕ.ಜಿಲ್ಲೆಗೆ ಸಂಬಂಧಿಸಿದಂತೆ ಇದರ ಉಪಯೋಗ ಬಂದಿದ್ದು ಪ್ರಾಸಂಗಿಕವಾಗಿ. ಕೆಲವು ಸೇತುವೆಗಳು ಮತ್ತು ವೆಸ್ಟ್‌ಕೋಸ್ಟ್ ರಸ್ತೆಯನ್ನು ನಿರ್ಮಿಸಿದರಷ್ಟೇ ಜಿಲ್ಲೆಯ ಸಮಸ್ಯೆ ನಿವಾರಣೆಯಾಯಿತು ಅಂತ ನಾವು ನಮ್ಮ ಜನರಿಗೆ ಹೇಳಲಾಗುವುದಿಲ್ಲ. ಮಂಗಳೂರು ಮತ್ತು ಉಡುಪಿಯ ನಡುವೆ 30 ಮೈಲಿಗಳ ಅಂತರದಲ್ಲಿ ಮೂರು ಸೇತುವೆಗಳನ್ನು ನಿರ್ಮಿಸಬೇಕಾಗಿದೆ. ಒಮ್ಮೆ ಈ ಸೇತುವೆಗಳನ್ನು ನಿರ್ಮಿಸಿದ್ದೇ ಆದಲ್ಲಿ . ದೂರದ ಪ್ರಯಾಣಗಳನ್ನು ನಿವಾರಿಸಬಹುದಲ್ಲದೆ, ಆ ಮೂಲಕ ಪೆಟ್ರೋಲ್, ರಬ್ಬರ್ ಮುಂತಾದವುಗಳಲ್ಲಿ ಉಳಿತಾಯ ಸಾಧಿಸಬಹುದಾಗಿದೆ. – ಮಾತ್ರವಲ್ಲ, ಅಷ್ಟು

ವಿದೇಶೀ ವಿನಿಮಯವನ್ನು ಉಳಿತಾಯ ಮಾಡಬಹುದು. ಆರ್ಥಿಕ ಸಮಸ್ಯೆ ಇದೆ ಅಂತ ನನಗೆ ಗೊತ್ತಿದೆ.

ದ.ಕ.ಜಿಲ್ಲೆಯ ಜನರಿಂದ ಅರ್ಥ ಸಚಿವರು ಒಂದು ಸಲಹೆಯನ್ನು ಸ್ವೀಕರಿಸಿದ್ದಾರೆ– ಏನಂದರೆ, ಒಂದು ವೇಳೆ ಸರಕಾರ ಈ ಸೇತುವೆಗಳ ನಿರ್ಮಾಣಕ್ಕೆ ಸಾಲವನ್ನು ಅಪೇಕ್ಷಿಸಿದರೆ, ಜಿಲ್ಲೆ ಅದಕ್ಕೆ ತನ್ನ ಚಂದಾ ಕೊಡಲು ಮುಂದೆ ಬರಬಹುದೂಂತ. ಈ ಸಲಹೆಯನ್ನು ಮಾನ್ಯ ಮಂತ್ರಿಗಳು ಖಂಡಿತವಾಗಿಯೂ ಪರಿಶೀಲಿಸುವರಲ್ಲದೆ, ಆದಷ್ಟು ಬೇಗನೆ ಅತ್ಯಂತ ಅವಶ್ಯವಾದ ಈ ಸೇತುವೆಗಳನ್ನು ಕೈಗೊಳ್ಳುವರೆಂದು ನಾನು ಬಗೆದಿದ್ದೇನೆ.

ಈ ನಡುವೆ, ಮಾನ್ಯ ಮಂತ್ರಿಗಳು ಈ ನದಿಗಳ ಕಡವು ಸುಂಕವನ್ನು ಇಳಿಸುತ್ತಾರೆ ಅಂತ ಭಾವಿಸುತ್ತೇನೆ. 1939ರಲ್ಲಿ ಕಾಲಾಣೆಯನ್ನು ಇದಕ್ಕೆ ವಸೂಲು ಮಾಡುತ್ತಿದ್ದರು. ಈಗ ಒಂದು ಆಣೆಯನ್ನು ವಸೂಲು ಮಾಡುತ್ತಿದ್ದಾರೆ. 1939–1950ರ ನಡುವೆ ಈ ಹೆಚ್ಚಳಕ್ಕೆ ಯಾವುದೇ ಕಾರಣ ಕಾಣುವುದಿಲ್ಲ.

ಈ ಕಡವುಗಳನ್ನು ಒಂದನೇ ದರ್ಜೆ, ಎರಡನೇ ದರ್ಜೆ ಮುಂತಾಗಿ ವಿಭಾಗ ಮಾಡಲಾಗಿದ್ದು ಯಾವ ಕಡವಿನಲ್ಲಿ ಎಷ್ಟು ಹೆಚ್ಚು ಅನಾನುಕೂಲಗಳಿವೆಯೋ ಅಷ್ಟಷ್ಟು ಹೆಚ್ಚು ಸುಂಕವನ್ನು ಸಂಗ್ರಹಿಸಲಾಗುತ್ತಿದೆ. ಸರಕಾರ ಇದನ್ನು ಒಂದು ಆದಾಯದ ಮೂಲವೆಂದು ಪರಿಗಣಿಸಿದೆ. ಹಾಗಾಗಿ ದರವನ್ನು ಹೆಚ್ಚಿಸಿದೆ. ಒಟ್ಟು ರಾಜ್ಯದಲ್ಲಿ ಈ ಸುಂಕದ ಮೂಲಕ ಬರುವ ಆದಾಯ ರೂ. 3,20,000 ಅಂತಾದರೆ, ಕೇವಲ ದ.ಕ.ಜಿಲ್ಲೆಯಿಂದಲೇ ರೂ. 1,10,000 ಬರುತ್ತಿದೆ. ಅಂದರೆ ಇಲ್ಲಿಯ ಜನರು ತಮ್ಮ ಅನಾನುಕೂಲಕ್ಕಾಗಿ ಹೆಚ್ಚಿನ ವೆಚ್ಚವನ್ನು ಮಾಡಿದಂತಾಗಿದೆ, ಅನುಕೂಲಕ್ಕಾಗಿ ಅಲ್ಲ! ನಾನು ಸರಕಾರದೊಂದಿಗೆ ವಿನಂತಿ ಮಾಡುವುದಿಷ್ಟೇ, ಅವರು ಈ ಸುಂಕವನ್ನು ಮೊದಲಿನ ದರಕ್ಕೆ ಇಳಿಸುವುದಷ್ಟೇ ಅಲ್ಲ, ಪ್ರಯಾಣಿಕರಿಗೆ ಸಾಕಷ್ಟು ಸೌಲಭ್ಯಗಳನ್ನು ಒದಗಿಸಬೇಕು. ಒಂದು ವೇಳೆ ಸೇತುವೆ ನಿರ್ಮಾಣ ಮಾಡಿದರೆ, ಕಡವು ಸುಂಕದಿಂದ ಬರುವ ವರಮಾನದ ಒಂದಿಷ್ಟು ಭಾಗ ಸೇತುವೆ ಸುಂಕದಿಂದ ಸಂಗ್ರಹಿಸಬಹುದಾಗಿದೆ. ಆದ್ದರಿಂದ ಮಾನ್ಯ ಅರ್ಥಸಚಿವರಲ್ಲಿ ನನ್ನ ನಿವೇದನೆ ಏನಂದರೆ, ಸೇತುವೆ ನಿರ್ಮಾಣದ ನಿರ್ಣಯವೇನೇ ಇರಲಿ, ಈ ಕಡವು ಸುಂಕವನ್ನು ತಕ್ಷಣದಿಂದ ಜ್ಯಾರಿಗೆ ಬರುವಂತೆ ಕಡಿಮೆ ಮಾಡಬೇಕು.

ಈ ಸಂದರ್ಭದಲ್ಲಿ ಮಾನ್ಯ ಮಂತ್ರಿಗಳ ಗಮನಕ್ಕೆ ತರುವ ಇನ್ನೊಂದು ವಿಚಾರವೆಂದರೆ, ಅತಿ ದೊಡ್ಡ ಪ್ರಮಾಣದಲ್ಲಿ ಹಾಳಾಗುತ್ತಿರುವ ಮೀನು ಸಂಗ್ರಹಣೆ. ಈ ವರ್ಷ ಭೂತಾಯಿ ಮೀನಿನ ಸಂಗ್ರಹ ಬಹಳಷ್ಟು ಆಗಿತ್ತು. ಹಿಂದಿನ ವರ್ಷ ಇಷ್ಟು ಆಗಿರಲಿಲ್ಲ. ಸುಮಾರು 37,000 ಟನ್ನಿನಷ್ಟು ಮೀನು ನಮ್ಮ ಕಡಲಕರೆಯಲ್ಲಿ ಗೊಬ್ಬರವಾಗಿ ಕೊಳೆಯುತ್ತಿದೆ. ಅದಕ್ಕೆ ತಕ್ಕ ಮಾರುಕಟ್ಟೆಯನ್ನು ಕಂಡುಕೊಳ್ಳಲು ಸಾಧ್ಯವಾಗದೆ, ಅಥವಾ ಅದರಿಂದ ಮೀನಿನೆಣ್ಣೆ ತೆಗೆಯುವ ತಾಂತ್ರಿಕತೆ ಇಲ್ಲದೆ ಹೀಗಾಗಿದೆ. ಮೀನು ಸಂಗ್ರಹಣೆ ದೇಶ ಭರಿಸಲಾರದಷ್ಟು ದೊಡ್ಡ ನಷ್ಟ, ಅತಿಶಯವಾದ ನಷ್ಟ. ಇದು ಕೃಷಿ ಇಲಾಖೆಯದ್ದೂ ಸಮಸ್ಯೆಯಾಗಿದ್ದು, ಇಷ್ಟನ್ನು ರಾಜ್ಯದ ಒಳಗಡೆಯೇ ಸಂರಕ್ಷಿಸಿ ಇಡಬೇಕೆಂದು ಬಯಸುತ್ತದೆ. ಇದಕ್ಕೆ ಹೊರಗಡೆ ಹೆಚ್ಚಿನ ಬೆಲೆ ಸಿಗುತ್ತಿರುವುದರಿಂದ ರಫ್ತು ಮಾಡುವ ಯೋಚನೆ ಮಾಡಬಹುದು. ಮೀನುಗಾರರು ಕಳೆದ ವರ್ಷ ಬಹಳಷ್ಟು ಸಂಕಟ ಅನುಭವಿಸಿದ್ದಾರೆ. ಅವರ ಹಿಂದಿನ ವರ್ಷದ ನಷ್ಟವನ್ನು ಒಳ್ಳೆಯ ಬೆಲೆ ಬರುವಂತೆ ಮಾಡಿ ಈ ವರ್ಷವಾದರೂ ತುಂಬಿಕೊಡುವ ಪ್ರಯತ್ನ ಮಾಡಬೇಕಾಗಿದೆ.

ಸಂಪರ್ಕ ವ್ಯವಸ್ಥೆಗೆ ಸಂಬಂಧಿಸಿದಂತೆ, ಅರ್ಥಮಂತ್ರಿಗಳ ಗಮನವನ್ನು ಇನ್ನೊಂದು ವಿಷಯದತ್ತ ಸೆಳೆಯಲು ಬಯಸುತ್ತೇನೆ. ದ.ಕ.ಜಿಲ್ಲೆ ಮತ್ತು ಮಲಬಾರ್ ಜಿಲ್ಲೆಗಳು ಪ್ರತಿ ವರ್ಷ ಅತೀ ಹೆಚ್ಚು ಮಳೆಯನ್ನು ಅನುಭವಿಸುತ್ತಿರುವ ಜಿಲ್ಲೆಗಳು. ಈ ಕಾರಣದಿಂದಾಗಿ, ಈ ಜಿಲ್ಲೆಗಳ ರಸ್ತೆಗಳ ಸಂರಕ್ಷಣೆ ಬಹಳ ಕಷ್ಟಸಾಧ್ಯವಾಗಿದೆ. ಈ ಜಿಲ್ಲೆಗಳಲ್ಲಿನ ರಸ್ತೆಗಳ ದುರಸ್ತಿ ರಾಜ್ಯದ ಇತರ ಜಿಲ್ಲೆಗಳಿಗೆ ಹೋಲಿಸಿದರೆ ಬಹಳಷ್ಟು ವ್ಯತ್ಯಾಸ ಕಾಣಬಹುದು. ಆದ್ದರಿಂದ ಈ ರಸ್ತೆಗಳ ಸಂರಕ್ಷಣೆಗೆ ಹೆಚ್ಚಿನ ಹಣವನ್ನು ಮೀಸಲಾಗಿರಿಸಿ ರಸ್ತೆಗಳನ್ನು ಒಳ್ಳೆಯ ರೀತಿಯಲ್ಲಿ ಸುಸ್ಥಿತಿಯಲ್ಲಿರುವಂತೆ ಅನುವು ಮಾಡಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ಕೊನೆಯದಾಗಿ, ಸದನದ ಹೆಚ್ಚು ಸಮಯವನ್ನು ತೆಗೆದುಕೊಳ್ಳದೆ, ಒಂದೇ ಒಂದು ವಿಷಯವನ್ನು ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಕಳೆದೆರಡು ದಿನಗಳಲ್ಲಿ ದ.ಕ.ಜಿಲ್ಲೆಯ ಸದಸ್ಯರು, ತಮಿಳು ಮತ್ತು ಮಲೆಯಾಳಂ ಭಾಷೆಗಳಲ್ಲಿ ಪ್ರಸ್ತುತ ಪಡಿಸಿದ ಭಾಷಣಗಳನ್ನು ಕೇಳುತ್ತ ಬಂದಿದ್ದು, ನಾವು ಅದರ ಒಂದು ಶಬ್ದವನ್ನು ಕೂಡಾ ಅರ್ಥ ಮಾಡಿಕೊಳ್ಳಲು ಶಕ್ತರಾಗಿಲ್ಲ. ನಾವಿಲ್ಲಿ ಕುಳಿತುಕೊಳ್ಳಬೇಕಾದರೆ, ಈ ಭಾಷೆಗಳನ್ನು ಕಲಿಯಬೇಕೆಂದು ಪ್ರಾಯಶಃ ಸಲಹೆ ನೀಡಬಹುದೇನೋ! ಮತ್ತು ಅದರಿಂದ ನಾವು ಕಳೆದುಕೊಳ್ಳುವುದು ಏನೂ

ಇರಲಾರದು ಎಂದು ಎಣಿಸಿರಬಹುದು. ನಾವು ಪರಸ್ಪರ ಅರಿತುಕೊಳ್ಳುವುದು ಸಮಂಜಸವಲ್ಲವೇ? ನಿಜ ಹೇಳಬೇಕೆಂದರೆ, ನಾವು ಪರಸ್ಪರರನ್ನು ಅರ್ಥ ಮಾಡಿಕೊಳ್ಳುತ್ತೇವೆಯೇ ಹೊರತು, ಈ ಮಾತುಗಳನ್ನು ಅರ್ಥ ಮಾಡಿಕೊಂಡು ಅಲ್ಲ ಎಂದು ಹೇಳಬಯಸುತ್ತೇನೆ. ಧನ್ಯವಾದಗಳು.

***

## ಅರಣ್ಯ ಇಲಾಖೆಯ ಬೇಡಿಕೆಗಳು–ಚರ್ಚೆ

### 13 ಮಾರ್ಚ್ 1954

**ಶ್ರೀ ಟಿ.ಅನಂತ ಪೈ:** ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಅರಣ್ಯ ಇಲಾಖೆಯ ಮಂತ್ರಿವರ್ಯರು ಮಂಡಿಸಿರುವ ಬೇಡಿಕೆಗಳನ್ನು ಅನುಮೋದಿಸುತ್ತೇನೆ. ಕೆಲವು ಸಮಯದ ಹಿಂದೆ, ಸರಕಾರಕ್ಕೆ ನಾನೊಂದು ನಿರೂಪವನ್ನು ಕಳುಹಿಸಿಕೊಟ್ಟಿದ್ದೆ. ಮದ್ರಾಸು ಸರಕಾರ ಅರಣ್ಯದ ಮೂಲಕ ಪಡೆಯುವ ಆದಾಯದಲ್ಲಿ 60ರಿಂದ 70ಶೇಕಡಾದಷ್ಟು ವರಮಾನ ಮೂರು ಜಿಲ್ಲೆಗಳಿಂದ –ಅಂದರೆ, ಮಲಬಾರ್, ದಕ್ಷಿಣ ಕನ್ನಡ ಮತ್ತು ನೀಲಗಿರಿಯಿಂದ ಬರುತ್ತದೆ. ಇದು ಈ ಮೂರು ಜಿಲ್ಲೆಗಳ ನೈಸರ್ಗಿಕ ಸಂಪತ್ತು. ಆದ್ದರಿಂದ ಈ ಸಂಪತ್ತಿನಿಂದ ಬರುವ ಆದಾಯದಿಂದ ಮೊದಲು ಈ ಜಿಲ್ಲೆಗಳಿಗೆ ಉಪಯೋಗವಾಗಬೇಕಾಗಿದೆ.

ನನಗೆ ತಿಳಿದಿರುವ ಹಾಗೆ, ಈ ಕಾಡುಗಳಿಂದ ಸಿಗುವ ಮೃದು ಮರಗಳನ್ನು ಕಡಿದು ಆ ಮರಗಳನ್ನು ವಿಮ್ಕೋ ಕಂಪೆನಿ ಉಪಯೋಗಿಸುತ್ತಿದೆ. ಈ ಮೋಪುಗಳನ್ನು ಲಾರಿ, ಟ್ರೈನ್ ಅಥವಾ ದೋಣಿಗಳ ಮುಖೇನ ದೂರದ ಸ್ಥಳಗಳಿಗೆ ಒಯ್ದು ಬೆಂಕಿ ಪೆಟ್ಟಿಗೆಯ ಕಡ್ಡಿಗಳನ್ನಾಗಿ ಪರಿವರ್ತಿಸುತ್ತಾರೆ. ಮುಂದಿನ ಸಲ ಸರಕಾರ ಈ ಸಂಸ್ಥೆಯ ಪರವಾನಗಿಯನ್ನು ನವೀಕರಿಸುವ ಸಂದರ್ಭದಲ್ಲಿ ಒಂದು ಷರತ್ತನ್ನು ವಿಧಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ– ಈ ಮರಗಳಿಂದ ತಯಾರಾಗುವ ಸಿದ್ಧ ವಸ್ತುಗಳನ್ನು ನಮ್ಮ ಈ ಜಿಲ್ಲೆಗಳಲ್ಲೇ ಯಾಕಾಗಿ ತಯಾರಿಸಬಾರದು ಎಂಬುದಾಗಿ? ಈ ಮೂಲಕ ನಮ್ಮ ಜಿಲ್ಲೆಗಳಲ್ಲಿ ಸಣ್ಣ ಪ್ರಮಾಣದ ಉದ್ದಿಮೆಗಳು, ಈ ಬೆಂಕಿಪೆಟ್ಟಿಗೆ ಕಂಪೆನಿಯಿಂದಾಗಿ ಪ್ರಾರಂಭಿಸುವಂತೆ ಅನುವುಮಾಡಿ ಕೊಟ್ಟಂತಾಗುತ್ತದೆ ಎಂದು ನಾನು ಭಾವಿಸುತ್ತೇನೆ. ಮರಗಳನ್ನು ಬೆಂಕಿಪೆಟ್ಟಿಗೆಯಾಗಿ ಪರಿವರ್ತಿಸುವಂಥ ಮರದ ಮಿಲ್ಲುಗಳು ಇಲ್ಲಿಯೇ ನಿರ್ಮಾಣಗೊಳ್ಳುವ ಸಾಧ್ಯತೆಗಳಿವೆ. ಜನನಿಬಿಡವಾದ ಈ

ಮೂರು ಜಿಲ್ಲೆಗಳ ನಿರುದ್ಯೋಗಿಗಳಿಗೆ ಇದರಿಂದ ಸಾಕಷ್ಟು ಉದ್ಯೋಗಾವಕಾಶಗಳು ನಿರ್ಮಾಣವಾಗುವ ಸಾಧ್ಯತೆಗಳಿವೆ. ಮರಮಟ್ಟುಗಳನ್ನು ಕಡಿದು ದೂರದ ಪ್ರದೇಶಕ್ಕೆ ಒಯ್ಯುವ ಬದಲು ಇಲ್ಲೇ ಮರದ ಮಿಲ್ಲುಗಳು ನಿರ್ಮಾಣವಾಗಿ, ಅದರ ಮೂಲಕ ಪೆನ್ಸಿಲ್, ಸಣ್ಣ ಆಟಿಕೆಗಳು ಮತ್ತು ಬಳಪದ ಚೌಕಟ್ಟುಗಳು ಹಾಗೂ ಇನ್ನಿತರ ಅನೇಕ ಸಾಮಗ್ರಿಗಳನ್ನು ತಯಾರಿಸಲು ಅನುವುಮಾಡಿಕೊಟ್ಟಂತಾಗುತ್ತದೆ.

ವಿಮ್ಕೋ ಕಂಪೆನಿಯವರು ನಮ್ಮ ಜನರನ್ನೇ ಮರಕಡಿಯುವುದಕ್ಕೂ, ಮರಗಳ ಸಾಗಾಟಕ್ಕೂ ಉಪಯೋಗಿಸುತ್ತಿದ್ದಾರೆ. ಆ ಮೂಲಕ ಕೊಂಚ ಪ್ರಮಾಣದ ಉದ್ಯೋಗಾವಕಾಶವಾಗಿದೆ ಎಂದು ನಾನು ಬಲ್ಲೆ. ಈ ಸಲಹೆಯನ್ನು ಸರಕಾರಕ್ಕೆ ನಾನು ಮಾಡಿದ್ದೆ. ಸರಕಾರ ಅದಕ್ಕೆ ಸ್ಪಂದಿಸಿ, ವಿಮ್ಕೋ ಕಂಪೆನಿಯ ಜತೆಗೆ ತಮ್ಮ ಕೆಲವೊಂದು ಪ್ರಾಯೋಗಿಕವಾಗಿರತಕ್ಕ ತೊಂದರೆಗಳಿವೆ ಎಂದು, ನನ್ನ ಸಲಹೆಯನ್ನು ಅಂಗೀಕರಿಸಲು ಸಾಧ್ಯವಾಗದು ಎಂದು ನನಗೆ ತಿಳಿಸಿದೆ. ವಿಮ್ಕೋ ಒಂದು ಬಲಿಷ್ಠ ಕಂಪೆನಿಯಾಗಿದ್ದು, ಅದು ಸರಕಾರದ ಒಂದು ಉತ್ತಮ ಗಿರಾಕಿ ಎಂಬುದನ್ನೂ ಬಲ್ಲೆ.

ಈ ಮೂರು ಜಿಲ್ಲೆಗಳಲ್ಲಿರುವ ಜನಸಂಖ್ಯೆ, ಈ ಜಿಲ್ಲೆಗಳ ಸಂಪತ್ತು ಮತ್ತು ನಿರ್ಮಾಣವಾಗತಕ್ಕ ಸಣ್ಣ ಪ್ರಮಾಣದ ಉದ್ದಿಮೆಗಳನ್ನೆಲ್ಲ ಗಮನಕ್ಕೆ ತೆಗೆದುಕೊಂಡರೆ, ಸರಕಾರಕ್ಕೆ ಅವೆಲ್ಲ ಪ್ರಾಯೋಗಿಕ ತೊಂದರೆಗಳು ನಗಣ್ಯವಾಗಬಲ್ಲುದು ಮಾತ್ರವಲ್ಲ, ಈ ಕ್ರಮದಿಂದಾಗಿ ಈ ಜಿಲ್ಲೆಗಳ ನಿರುದ್ಯೋಗ ಸಮಸ್ಯೆಯನ್ನು ತಕ್ಕ ಮಟ್ಟಿಗೆ ಹೋಗಲಾಡಿಸುವ ಒಂದು ರಹದಾರಿಯಾಗುತ್ತದೆ. ತೊಂದರೆಗಳು ಇದ್ದಾಗ್ಯೂ, ಪ್ರಾಪ್ತವಾಗುವ ಫಲ ವಿಶೇಷವಿದ್ದಲ್ಲಿ, ಅಂಥ ಕ್ರಮಕೈಗೊಳ್ಳುವಲ್ಲಿ ಹಿಂದೇಟು ಹಾಕಬಾರದು. 'ಇಲ್ಲ ಇಲ್ಲ ನಮಗದು ಮಾಡಲು ಸಾಧ್ಯವಿಲ್ಲ' ಎನ್ನುವುದಕ್ಕಿಂತ, ಈ ಅರಣ್ಯ ಸಂಪತ್ತನ್ನು ಮತ್ತು ಅದರ ಮೂಲಕ ಲಭ್ಯವಾಗುವ ಸಂಪನ್ಮೂಲಗಳನ್ನು , ಸರಕಾರ ಮಹತ್ತರವಾಗಿ ಉಪಯೋಗಿಸುವಂತಾಗಬೇಕು.

ನಮ್ಮ ಅರಣ್ಯ ಇಲಾಖೆಯ ಕೆಲವು ನಿಯಮಗಳನ್ನು ಪಾಲಿಸುವ ನಿಟ್ಟಿನಲ್ಲಿ ಕೆಲವು ತೊಡಕುಗಳಿವೆ ಎಂದು ನನಗೆ ಅನ್ನಿಸುತ್ತಿದೆ. ಒಂದೆಡೆ ಬಡಜನರು ಕಟ್ಟಿಗೆ ಸಂಗ್ರಹಕ್ಕಾಗಿ ಕಾಡುಗಳನ್ನು ಪ್ರವೇಶಿಸುವುದನ್ನು ಈ ನಿಯಮಗಳು ನಿಷೇಧಿಸಿದ್ದರೆ, ಇನ್ನೊಂದೆಡೆ, ಈ ನಿಯಮಗಳ ಅನುಷ್ಠಾನದ ಕೊರತೆಯಿಂದಾಗಿ, ಸಾಕಷ್ಟು ಕಾಡು ನಾಶವಾಗುತ್ತಿದ್ದು, ಇದರಿಂದ ಸರಕಾರದ ಬೊಕ್ಕಸಕ್ಕೆ ಸಾಕಷ್ಟು ನಷ್ಟವಾಗುತ್ತಿದೆ

ಎಂಬುದು. ಮರಗಳನ್ನು ಕಾನೂನು ಬಾಹಿರವಾಗಿ ಸಂರಕ್ಷಿತ ಅರಣ್ಯಗಳಿಂದ ಕಡಿಯುವ ಬಗ್ಗೆಯೂ ದೂರುಗಳು ಬರುತ್ತಿವೆ. ಬೆಳಕು ಹರಿಯುವ ಮೊದಲು ಮತ್ತು ಸೂರ್ಯಾಸ್ತದ ನಂತರ, ದ.ಕ.ಜಿಲ್ಲೆಯಲ್ಲಿ ಮರಮಟ್ಟು ಸಾಗಾಣಿಕೆಗೆ ಅವಕಾಶವಿರಬಾರದು ಎಂಬುದು ನನ್ನ ಸಲಹೆ.

ನಮ್ಮ ದ.ಕ.ಜಿಲ್ಲೆಗೆ ಸಂಬಂಧಿಸಿದಂತೆ, ಅಲ್ಲೊಂದು 'ಮಲೆನಾಡು' ಪ್ರದೇಶವಿದ್ದು, ಕೆಲವೇ ದಿನಗಳಲ್ಲಿ ಅಲ್ಲಿ ಮೈಸೂರು ರಾಜ್ಯದ ಆಶ್ರಯದಲ್ಲಿ ಅಖಿಲ ಭಾರತ ಸಮಾವೇಶ ನಡೆಯಲಿದ್ದು, ಅದರಲ್ಲಿ ಮಲೆನಾಡು ಪ್ರದೇಶದ ಅಭಿವೃದ್ಧಿಯ ಬಗೆಗೆ ಚರ್ಚಿಸಲಾಗುತ್ತದೆ ಎಂದು ತಿಳಿದು ಬಂದಿದೆ. ನಮ್ಮ ಸರಕಾರವೂ ಅದರಲ್ಲಿ ಭಾಗವಹಿಸುವಂತೆ ನಾನು ಕೋರುತ್ತೇನೆ.

ಮಲೆನಾಡಿನಲ್ಲಿ ಸಾಕಷ್ಟು ಜಲ ಸಂಪನ್ಮೂಲವಿದೆ. ಅದು ಪೂರ್ತಿಯಾಗಿ ಸದುಪಯೋಗವಾಗುತ್ತಿಲ್ಲ. ನಾನು ಮೊದಲೇ ಹೇಳಿದಂತೆ ಪ್ರಕೃತಿ ನಮಗೆ ತುಂಬಾ ಕರುಣೆ ತೋರಿಸಿದ್ದಾಳೆ. ಅರಣ್ಯ ಒಂದು ರೀತಿಯ ಸಂಪತ್ತು. ಅವನ್ನು ಸಂಘಟಿಸುವುದೇ ಇಂದು ನಾವೆದುರಿಸುತ್ತಿರುವ ತೊಡಕು. ನಮ್ಮ ಸಂರಕ್ಷಿತ ಅರಣ್ಯಗಳೇ ನಮ್ಮ ದೊಡ್ಡ ಸಂಪತ್ತು. ಜನರ ಉಪಯೋಗಕ್ಕೆ ಇದನ್ನು ಪೂರ್ತಿಯಾಗಿ ಬಳಸಿಲ್ಲ. ಮುಂದಿನ ಭವಿಷ್ಯದಲ್ಲಿ ಸರಕಾರ, ತನ್ನ ಅರಣ್ಯ ನೀತಿಯನ್ನು ಬದಲಾಯಿಸಿ, ಅರಣ್ಯ ಸಂಪತ್ತನ್ನು ಗರಿಷ್ಠ ಮಟ್ಟದಲ್ಲಿ ಸದುಪಯೋಗಪಡಿಸಿಕೊಂಡು, ಈ ಪ್ರದೇಶದ ಜನರ ಏಳಿಗಾಗಿ ಶ್ರಮಿಸಲಿ ಎಂದು ಆಶಿಸುತ್ತೇನೆ. ಧನ್ಯವಾದಗಳು.

***

## ಪ್ರಶ್ನೋತ್ತರ ವೇಳೆ– 25 ಮಾರ್ಚ್ 1954

## ಕಾಲೇಜುಗಳೇ ಇಲ್ಲದ ಜಿಲ್ಲೆ

**ಶ್ರೀ ಟಿ.ಅನಂತ ಪೈ:** ಮಾನ್ಯ ಅರ್ಥ ಮಂತ್ರಿಗಳು ಉತ್ತರಿಸಬಹುದೇ–

1. ರಾಜ್ಯದಲ್ಲಿ ಒಂದೇ ಒಂದು ಕಾಲೇಜು ಇಲ್ಲದ ಜಿಲ್ಲೆ ಯಾವುದು?

2. ಈ ವಿಷಯದಲ್ಲಿ ಸರಕಾರ ಕೈಗೊಳ್ಳುವ ಕ್ರಮಗಳೇನು?

**ಗೌ.ಶ್ರೀ ಸಿ.ಸುಬ್ರಹ್ಮಣ್ಯಂ:** 1. ನೀಲಗಿರಿ ಜಿಲ್ಲೆ 2. ನೀಲಗಿರಿ ಜಿಲ್ಲೆಯಲ್ಲಿ ಕಾಲೇಜು ಸ್ಥಾಪಿಸುವಂತೆ ಸರಕಾರಕ್ಕೆ ನಿರೂಪಗಳು ಬಂದಿದ್ದು, ಸರಕಾರದ ಪರಿಶೀಲನೆಯಲ್ಲಿದೆ.

**ಶ್ರೀ ಟಿ.ಅನಂತ ಪೈ:** ಈ ವಿಷಯದಲ್ಲಿ ನೀಲಗಿರಿ ಜಿಲ್ಲೆಯ ಜನರಿಂದ ನಿರಂತರವಾದ ಪ್ರತಿಭಟನೆ ನಡೆಯುತ್ತಿದೆ ಎಂದು ತಿಳಿದು ಬಂದಿದೆ. ಈ ವಿಷಯದಲ್ಲಿ ಅವರ ಪ್ರತಿನಿಧಿಗಳು ಏನು ಬಯಸುತ್ತಾರೆ ಅಂದರೆ, ಮಂಗಳೂರು ಸರಕಾರೀ ಕಾಲೇಜನ್ನು ನೀಲಗಿರಿಗೆ ಸ್ಥಳಾಂತರಿಸಬೇಕಂತ– ಅರ್ಥಾತ್ ಮಂಗಳೂರು ಕಾಲೇಜು ಚಕ್ರಗಳ ಮೇಲಿದ್ದು ಅದನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಸಾಧ್ಯ ಎನ್ನುವ ಹಾಗೆ! ಈ ಹಿನ್ನೆಲೆಯಲ್ಲಿ ಸರಕಾರ, ನೀಲಗಿರಿಯಲ್ಲಿ ಅತಿ ಶೀಘ್ರವಾಗಿ ಕಾಲೇಜೊಂದನ್ನು ಸ್ಥಾಪಿಸಲು ಕ್ರಮಕೈಗೊಳ್ಳಬಹುದೇ?

**ಗೌ. ಶ್ರೀ ಸಿ.ಸುಬ್ರಹ್ಮಣ್ಯಂ:** ವಿಷಯ ಪರಿಶೀಲನೆಯಲ್ಲಿದೆ ಅಂತ ನಾನು ಈಗಾಗಲೇ ಹೇಳಿದ್ದೇನೆ. ಕಾಲೇಜು ಸ್ಥಾಪಿಸಬೇಕು ಎಂಬ ಆಗ್ರಹವೊಂದರಿಂದಲೇ ಅಲ್ಲಿ ಸ್ಥಾಪಿಸಲು ಬರುವುದಿಲ್ಲ. ಅದಕ್ಕೆ ಸಂಬಂಧಿಸಿದಂತೆ ವಿವರಗಳನ್ನು ಕಲೆಹಾಕಬೇಕು ಮತ್ತು ಆ ಸಂಗ್ರಹ ಕಾರ್ಯ ನಡೆದಿದ್ದು, ಅಲ್ಲೊಂದು ಕಾಲೇಜಿನ ಅವಶ್ಯಕತೆ ಇದೆಯೇ ಎಂಬುದನ್ನು ಮನಗಂಡು ತೀರ್ಮಾನಿಸಬೇಕಾಗಿದೆ.

## ಪ್ರಶ್ನೋತ್ತರ ವೇಳೆ– 27 ಮಾರ್ಚ್ 1954

## ದ.ಕ.ಜಿಲ್ಲೆಯ ಉದ್ಯಾವರದಲ್ಲಿ ಅಣೆಕಟ್ಟು ನಿರ್ಮಾಣ

**ಶ್ರೀ ಟಿ. ಅನಂತ ಪೈ:** ಮಾನ್ಯ ಲೋಕೋಪಯೋಗಿ ಇಲಾಖೆಯ ಸಚಿವರುಗಳು, ದ.ಕ.ಜಿಲ್ಲೆಯ ನಡಿಬೆಟ್ಟೂರು ಗ್ರಾಮದ ಉದ್ಯಾವರ ನದಿಗೆ ಶಿರ್ವ ಎಂಬಲ್ಲಿ ಆಣೆಕಟ್ಟನ್ನು ನಿರ್ಮಿಸುವ ಬಗೆಗೆ ಪ್ರಸ್ತಾಪವಿದೆಯೇ?

**ಗೌ. ರಾಜಾ ಶ್ರೀಷಣ್ಮುಗ ರಾಜೇಶ್ವರ ಸೇತುಪತಿ:** ಈ ಪ್ರಶ್ನೆಯನ್ನು ಲೋಕೋಪಯೋಗಿ ಇಲಾಖೆ ಪರಿಶೀಲಿಸುತ್ತದೆ.

## ಪ್ರಶ್ನೋತ್ತರ ವೇಳೆ–30 ಮಾರ್ಚ್ 1954

## ಕೂರ್ಗ್‌ನಿಂದ ಅಕ್ಕಿಯ ಆಮದು

**ಶ್ರೀ ಟಿ.ಅನಂತ ಪೈ:** ಮಾನ್ಯ ವಿತ್ತ ಸಚಿವರು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸುವಿರಾ?

1. ರಾಜ್ಯದಲ್ಲಿ ಅಕ್ಕಿ ದಾಸ್ತಾನಿನ ಕೊರತೆಯ ಅಂದಾಜು

2. ಕೂರ್ಗ್ ಸರಕಾರದೊಂದಿಗೆ ಅಕ್ಕಿ ಸರಬರಾಜಿನ ವಿಷಯದಲ್ಲಿ ಒಪ್ಪಂದವಾಗಿದೆಯೇ?

3. ಹಾಗಿದ್ದಲ್ಲಿ ಒಪ್ಪಂದದ ಷರತ್ತುಗಳೇನು?

4. ಈ ಅಕ್ಕಿಯನ್ನು ಎಲ್ಲಿ ವಿತರಣೆ ಮಾಡಲಾಗುತ್ತೆ?

**ಗೌ. ಶ್ರೀ ಪಿ.ಸುಬ್ರಹ್ಮಣ್ಯಂ:** 1. 1954ರಲ್ಲಿ ಅಕ್ಕಿ ಕೊರತೆಯ ಅಂದಾಜು ಸುಮಾರು 4.3ಲಕ್ಷ ಟನ್ನುಗಳು.

2. ಇದಕ್ಕೆ ನಕಾರಾತ್ಮಕ ಉತ್ತರ. ಕೂರ್ಗ್‌ನಿಂದ ಕೇಂದ್ರ ಸರಕಾರ ಅಕ್ಕಿಯ ಕೋಟಾವೊಂದನ್ನು ನಿಗದಿಪಡಿಸಿದೆ.

3. ಪ್ರಶ್ನೆ ಏಳುವುದಿಲ್ಲ.

4. 14,000 ಟನ್ ಅಕ್ಕಿಯನ್ನು ಕೂರ್ಗ್‌ನಿಂದ ಮಲಬಾರಿಗೆ ನಿಗದಿಪಡಿಸಲಾಗಿದೆ.

**ಶ್ರೀ ಟಿ.ಅನಂತ ಪೈ:** ಪ್ರಸ್ತಾವಿತ ಅಕ್ಕಿಯ ವಿತರಣೆಯಲ್ಲಿ ಒಂದು ಅಂಶವನ್ನು ದ.ಕ.ಜಿಲ್ಲೆಯತ್ತ ತಿರುಗಿಸುವಂತೆ ಮಾಡುವುದಕ್ಕೆ ಏನಾದರೂ ತೀರ್ಮಾನ ಕೈಗೊಳ್ಳಲಾಗಿದೆಯೇ?

**ಗೌ. ಶ್ರೀ ಪಿ.ಸುಬ್ರಹ್ಮಣ್ಯಂ:** ಹೌದು ಸ್ವಾಮೀ. ಸುಮಾರು 2,000 ಟನ್ನುಗಳಷ್ಟು ಅಕ್ಕಿಯನ್ನು ದ.ಕ.ದತ್ತ ತಿರುಗಿಸುವಂತೆ ಪ್ರಸ್ತಾವನೆ ಸಲ್ಲಿಸಲಾಗಿದೆ.

## ಪ್ರಶ್ನೋತ್ತರ ವೇಳೆ-10, ಮೇ 1954

## ದ.ಕ.ಜಿಲ್ಲೆಯ ಅಲೆವೂರು ಮತ್ತು ನನಿಲ್ತಾರ್‌ಗಳಲ್ಲಿ ಸೇತುವೆ ನಿರ್ಮಾಣ

**ಶ್ರೀ ಟಿ.ಅನಂತ ಪೈ:** ಮಾನ್ಯ ಸ್ಥಳೀಯ ಆಡಳಿತದ ಸಚಿವರು ಮುಂದಿನ ಪ್ರಶ್ನೆಗಳಿಗೆ ಉತ್ತರಿಸುವಿರಾ?

1. ದ.ಕ.ಜಿಲ್ಲೆಯ ಅಲೆವೂರು ಮತ್ತು ನನಿಲ್ತಾರ್‌ಗಳಲ್ಲಿ ಜಿಲ್ಲಾ ಬೋರ್ಡ್ ಸೇತುವೆಗಳ ನಿರ್ಮಾಣಕ್ಕೆ ಶಿಫಾರಸು ಮಾಡಿದ್ದಾರೇನು?

2. ಈ ಶಿಫಾರಸುಗಳ ಬಗ್ಗೆ ಸರಕಾರ ಏನು ಕ್ರಮ ಕೈಗೊಂಡಿದೆ ಎಂದು ಹೇಳಬಹುದೆ?

**ಗೌ. ಶ್ರೀ ಎಸ್.ಎಸ್. ರಾಮಸ್ವಾಮಿ ಪಡಯಚಿ:** 1 ಮತ್ತು 2 ಹೌದು. ಈ ಸೇತುವೆಗಳನ್ನು ಸೆಂಟ್ರಲ್ ರೋಡ್ ಫಂಡ್ ಕಾರ್ಯಕ್ರಮದನ್ವಯ ಕೈಗೊಳ್ಳುವ ನಿರ್ಣಯವನ್ನು ಸರಕಾರ ಪರಿಶೀಲಿಸುತ್ತದೆ.

**ಶ್ರೀ ಟಿ.ಅನಂತ ಪೈ:** ಈ ಎರಡು ಸೇತುವೆಗಳ ನಿರ್ಮಾಣ ಅತ್ಯವಶ್ಯವಾಗಿರುವುದರಿಂದ, ಕೇಂದ್ರ ಸರಕಾರದಿಂದ ಆದೇಶ ಕರಗತವಾದ ತಕ್ಷಣ ಇವುಗಳ ನಿರ್ಮಾಣಕ್ಕೆ ಸರಕಾರ ತೊಡಗುವುದೆಂದು ನಾನು ಎಣಿಸಲೆ?

**ಗೌ. ಶ್ರೀ ಎಸ್.ಎಸ್.ರಾಮಸ್ವಾಮಿ ಪಡಯಚಿ:** ಖಂಡಿತವಾಗಿಯೂ ನಾವು ಅದನ್ನು ಪರಿಗಣಿಸುತ್ತೇವೆ.

## ಪ್ರಶ್ನೋತ್ತರ ವೇಳೆ-11 ಮೇ 1954

## ದ.ಕ. ಜಿಲ್ಲೆಯಲ್ಲಿ ಕುಷ್ಠರೋಗ ಬಾಧಿತ ಪ್ರದೇಶಗಳಿಗೆ ಒದಗಿಸಲಾದ ನಿರ್ಮೂಲನಾ ಕಾರ್ಯಕ್ರಮ

**ಶ್ರೀ ಟಿ.ಅನಂತ ಪೈ:** ಆರೋಗ್ಯ ಮಂತ್ರಿಗಳು ಈ ಮುಂದಿನ ಪ್ರಶ್ನೆಗಳಿಗೆ ಉತ್ತರಿಸುವಿರಾ?

1. ದ.ಕ.ಜಿಲ್ಲೆಯಲ್ಲಿ ಕುಷ್ಠರೋಗದಿಂದ ಬಳಲುತ್ತಿರುವ ಪ್ರದೇಶಗಳು ಯಾವುವು?

2. ಈ ಪ್ರದೇಶಗಳಲ್ಲಿನ ನಿವಾರಣಾ ಕಾರ್ಯಕ್ರಮಕ್ಕಾಗಿ ಸರಕಾರ ಕೈಗೊಂಡಿರುವ ಕ್ರಮಗಳೇನು?

**ಗೌ. ಶ್ರೀ ಎ.ಬಿ.ಶೆಟ್ಟಿ:** 1. ಶಿರ್ವ ಮತ್ತು ಕುಂಬಳೆಗಳಲ್ಲಿ ಇದು ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿದೆ.

2. 1952 ಜನವರಿ 15ರಿಂದ, ಕುಂಬಳೆ ಫಿರ್ಕಾದಲ್ಲಿ ಕುಷ್ಠರೋಗ ನಿವಾರಣೆ ಮತ್ತು ತಡೆಗಟ್ಟುವಿಕೆಯ ಕ್ರಮವಾಗಿ ಗ್ರಾಮೀಣ ಅಭಿವೃದ್ಧಿ ಇಲಾಖೆಯ ಮೂಲಕ ಯೋಜನೆಯೊಂದನ್ನು ಅನುಷ್ಠಾನಕ್ಕೆ ತರಲಾಗಿದೆ.

ಶಿರ್ವ ಪ್ರದೇಶಕ್ಕೆ ಸಂಬಂಧಿಸಿದಂತೆ, ಸರಕಾರ ಕುಷ್ಠರೋಗ ಬಾಧೆಯ ಸಮೀಕ್ಷೆಗಾಗಿ ಓರ್ವ ವಿಶೇಷ ಆರೋಗ್ಯ ತಪಾಸಕರನ್ನು ನಿಯುಕ್ತಿಗೊಳಿಸಿದ್ದು, ಕಳೆದ 2ವರ್ಷಗಳಲ್ಲಿ ಅವರು ಈ ಕೆಲಸವನ್ನು ನಿರ್ವಹಿಸಿದ್ದಾರೆ. ಶಿರ್ವದಲ್ಲಿರುವ ಡಿಸ್ಟ್ರಿಕ್ಟ್ ಬೋರ್ಡಿನ ಆರೋಗ್ಯ ಅಧಿಕಾರಿಗೆ ಕುಷ್ಠರೋಗದ ಬಗ್ಗೆ ತರಬೇತಿ ನೀಡಲಾಗಿದ್ದು, ದ.ಕ.ಜಿಲ್ಲೆಯ ಹಿಂದ್ ಕುಷ್ಠ್ ನಿವಾರಣಾ ಸಂಘದ ಶಾಖೆಯ ಸಹಯೋಗದಲ್ಲಿ ಶಿರ್ವದಲ್ಲಿ ಒಂದು ಕುಷ್ಠರೋಗ ತಪಾಸಣಾ ಕೇಂದ್ರವನ್ನು ಸ್ಥಾಪಿಸುವ ಯೋಜನೆಯಿದೆ. ಈ ಕೇಂದ್ರಕ್ಕೋಸ್ಕರ ಸರಕಾರ ಶಿರ್ವದಲ್ಲಿ ಒಂದು ಜಾಗವನ್ನು ಗುರುತಿಸಿದ್ದು, ಅವರು ಶಿರ್ವಾ ಪಂಚಾಯತ್ ಬೋರ್ಡ್‌ನ ಆರ್ಥಿಕ ನೆರವಿನೊಂದಿಗೆ ಅಲ್ಲೊಂದು ಕೇಂದ್ರದ ಕಟ್ಟಡ ನಿರ್ಮಾಣಕ್ಕೆ ಸಜ್ಜಾಗುತ್ತಿದ್ದಾರೆ. ಇದಲ್ಲದೆ, ಸರಕಾರದ ಅನುದಾನಿತ ಕುಷ್ಠರೋಗ ಆಸ್ಪತ್ರೆ ಕಂಕನಾಡಿಯಲ್ಲಿದ್ದು ಅಲ್ಲಿ 142 ರೋಗಿಗಳಿಗೆ ತಂಗಲು ವ್ಯವಸ್ಥೆಯಿದೆ. ಅಂತೆಯೇ, ಬದಿಯಡ್ಕದಲ್ಲಿ ಕುಷ್ಠರೋಗ ಚಿಕಿತ್ಸಾ ಕೇಂದ್ರವೊಂದನ್ನು ಗ್ರಾಮ ಸೇವಾ ಸಮಾಜದವರು ಸರಕಾರದ ಅನುದಾನದಿಂದ ನಡೆಸುತ್ತ ಬಂದಿದ್ದಾರೆ.

### ಪ್ರಶ್ನೋತ್ತರ ವೇಳೆ–18 ಮೇ 1954

## ದ.ಕ.ಜಿಲ್ಲಾ ಬೋರ್ಡ್‌ನಿಂದ ಅಧ್ಯಾಪಕರಿಗೆ ವಿಳಂಬಿತ ವೇತನ

**ಶ್ರೀ ಟಿ.ಅನಂತ ಪೈ:** ಮಾನ್ಯ ವಿತ್ತ ಸಚಿವರು ಈ ಮುಂದಿನ ಪ್ರಶ್ನೆಗಳಿಗೆ ಉತ್ತರಿಸುವಿರಾ?

1. ಇತ್ತೀಚೆಗೆ, ದ.ಕ.ಜಿಲ್ಲೆಯ ಜಿಲ್ಲಾ ಬೋರ್ಡ್ ಪ್ರಾಥಮಿಕ ಶಾಲೆಯ ಅಧ್ಯಾಪಕರಿಗೆ ವೇತನ ಸಂದಾಯಮಾಡುವಲ್ಲಿ ವಿಳಂಬವಾಗುತ್ತಿದೆ, ಹೌದೆ?

2. ಇದು 2ತಿಂಗಳಿಗೂ ಹೆಚ್ಚಿನ ಪ್ರಮಾಣದಲ್ಲಿ ಬಾಕಿ ಉಳಿದುಕೊಂಡಿರುವುದು ನಿಜವೆ?

**ಗೌ. ಶ್ರೀ ಸಿ.ಸುಬ್ರಹ್ಮಣ್ಯಂ:** 1.ಹೌದು ಸ್ವಾಮೀ. 2. ಒಂದು ತಿಂಗಳಿಗಷ್ಟೆ ವೇತನ ಬಟವಾಡೆ ಮಾಡಲು ಉಳಿದುಕೊಂಡಿರುವುದು. ಡಿಸೆಂಬರ್ ತಿಂಗಳು, ಅದೂ ಕಾಸರಗೋಡು ಮತ್ತು ಪುತ್ತೂರು ತಾಲೂಕುಗಳಲ್ಲಿ ಮಾತ್ರ.

**ಶ್ರೀ ಟಿ.ಅನಂತ ಪೈ:** ಇದೇ ಬಗೆಯ ದೂರು ಎರಡು ವರ್ಷಗಳ ಹಿಂದೆಯೂ ಕೇಳಿ ಬಂದಿತ್ತು. ಬಡ ಶಾಲಾ ಮಾಸ್ತರರು ತಮ್ಮ ವೇತನವನ್ನು ವಿಳಂಬವಾಗಿ ಪಡೆಯುವುದರಿಂದ ಸಾಕಷ್ಟು ಬವಣೆಯನ್ನು ಎದುರಿಸುವಂಥದ್ದು ಖಂಡಿತವಾಗಿಯೂ ಸರಕಾರ ಕನಿಕರಿಸುವುದು ಶಕ್ಯ ತಾನೇ? ಭವಿಷ್ಯದಲ್ಲಿ ಹೀಗಾಗದಂತೆ ಸರಕಾರ ನೋಡಿಕೊಳ್ಳುವುದೇ?

**ಪ್ರಶ್ನೋತ್ತರ ವೇಳೆ–30 ಮೇ 1954**

## ಸರಕಾರೀ ನೌಕರರಿಗೆ ಮತ್ತು ಶಾಲಾ ಮಕ್ಕಳಿಗೆ ಉಡುಪಿನ ಕಟ್ಟುಪಾಡು

**ಶ್ರೀ ಟಿ.ಅನಂತ ಪೈ:** ಮಾನ್ಯ ವಿತ್ತ ಸಚಿವರು, ಈ ಮುಂದೆ ಹೇಳಲಾಗುವವರಿಗೆ, ಸರಕಾರ ಯಾವುದೇ ಉಡುಪಿನ ಕಟ್ಟುಪಾಡನ್ನು ವಿಧಿಸುವ ಯೋಜನೆಯಲ್ಲಿದೆಯೇ?

1. ಖಾದಿ ಮತ್ತು ಕೈಮಗ್ಗದ ಬಟ್ಟೆಗಳಿಗೆ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ಸರಕಾರೀ ಉದ್ಯೋಗಸ್ಥರಿಗೆ,

2. ಬಡವ ಬಲ್ಲಿದ ಎಂಬ ಹೊರನೋಟದ ಅಂತರವನ್ನು ತೊಡೆದು ಹಾಕುವ ಸಲುವಾಗಿ ಶಾಲಾ ಮಕ್ಕಳಿಗೆ ಸಮವಸ್ತ್ರ ವಿಧಿಸುವ ಯೋಜನೆಯಿದೆಯೇ?

**ಗೌ.ಸಿ.ಸುಬ್ರಹ್ಮಣ್ಯಂ:** ಅಂತಹ ಯಾವುದೇ ಪ್ರಸ್ತಾಪ ಸರಕಾರದ ಪರಿಶೀಲನೆಯಲ್ಲಿಲ್ಲ.

## ಮದ್ರಾಸು ಹಿಂದೂ ಧಾರ್ಮಿಕ ದತ್ತಿ

## ತಿದ್ದುಪಡಿ ವಿಧೇಯಕ, 1954

### 7 ಆಗಸ್ಟ್ 1954

**ಶ್ರೀ ಅನಂತ ಪೈ:** ಮಾನ್ಯ ಸಭಾಧ್ಯಕ್ಷರೇ, ಸ್ವಾಮೀ ನನ್ನನ್ನು ಈ ತಿದ್ದುಪಡಿ ಮಸೂದೆಯನ್ನು ವಿರೋಧಿಸುತ್ತಿರುವುದರಿಂದ ದಯವಿಟ್ಟು ಕ್ಷಮಿಸಿ. ಸರಕಾರ ಈ ಮಸೂದೆಯನ್ನು ಅಂಗೀಕರಿಸಬಾರದೆಂಬುದಾಗಿ ನಾನು ಕಾರಣಗಳನ್ನು ಸೂಚಿಸುತ್ತೇನೆ. ಎಲ್ಲಾ ಮಠಾಧಿಪತಿಗಳು ಒಂದೇ ಬಗೆಯ ಕುಲಕ್ಕೆ ಸೇರಿದವರಾಗಿದ್ದು, ಅವರೆಲ್ಲ ಸಮಾಜದ ಮತ್ತು ನಮ್ಮ ಗೌರವಕ್ಕೆ ಪಾತ್ರರಾಗುವಂಥವರು. ಯಾವನೇ ಅನುಯಾಯಿ ಏನಾದರೊಂದು ಕೊಡುಗೆ ನೀಡುವಾಗ ಅದನ್ನು ಮಠಕ್ಕೇ ಸಲ್ಲಿಸುತ್ತಾನೆ ಎಂಬುದಾಗಿ ತಿಳಿಯಲಾಗಿದೆ. ಈ ಬಗ್ಗೆ ಸುಪ್ರೀಂ ಕೋರ್ಟು ಪ್ರಶ್ನೆಯನ್ನೆತ್ತಿಕೊಂಡಾಗ, ಯಾವನೇ ನೀಡಿದ ಪಾದಕಾಣಿಕೆ ಅದು ಮಠದ ಸ್ವತ್ತಾಗಿರಬೇಕೆಂದು ಪದ್ಧತಿಯಾಗಿರಬೇಕೆಂದು ಎಣಿಸಿದಾಗ್ಯೂ, ಇತರ ಸಂದರ್ಭಗಳಲ್ಲಿ ವೈಯಕ್ತಿಕವಾಗಿ ನೀಡಲಾದ ಪಾರಿತೋಷಕ ಮಠಾಧಿಪತಿಗೆ ಸೇರುತ್ತದೆ ಎಂದು ಭಾವಿಸಲಾಗಿದೆ. ಅಂಥದ್ದು ಆತನ ವೈಯಕ್ತಿಕ ಸ್ವತ್ತಾಗುವುದರ ಮೂಲಕ ಅದನ್ನು ತನ್ನ ಇಚ್ಛಾನುಸಾರ ವ್ಯವಹಾರ ಮಾಡಬಹುದೆಂದು ತಿಳಿಯಲಾಗಿದೆ. ಸುಪ್ರೀಂ ಕೋರ್ಟು ಈ ನಿಲುವನ್ನು ತಳೆದಿರುವ ಕಾರಣ ಈ ಸಂಬಂಧದ ಕಾನೂನು ನಿರರ್ಥಕವೆನಿಸುತ್ತಿದೆ. ತಮಗೆ ಕೊಡಮಾಡಿದ ಪಾದಕಾಣಿಕೆಗಳ ಬಗೆಗೆ ರಶೀದಿ ನೀಡಿ ಲೆಕ್ಕವನ್ನು ಇಟ್ಟುಕೊಳ್ಳುವಂತೆ ತಾಕೀತು ಮಾಡುವುದು, ಅವರ ವೈಯಕ್ತಿಕ ಹಕ್ಕಿನಲ್ಲಿ ನಾವು ತಲೆತೂರಿಸಿದಂತಾಗುತ್ತದೆ- ಇದು ಸದ್ಯದ ವಿಧಾಯಕದ ಚಾಲನೆಗಿರುವ ಕಾರಣವೆಂದನಿಸುತ್ತಿದೆ. ಆತ ತನಗೆ ದೊರೆತ ಮೊಬಲಗಿನ ಮೊತ್ತದ ಲೆಕ್ಕವನ್ನು ರಶೀದಿಯ ಮೂಲಕ ಇಟ್ಟುಕೊಂಡಿದ್ದರೆ ಸಾಕೆಂದೂ, ಸರಕಾರ ಅದನ್ನು ಹೇಗೆ ವ್ಯಯ ಮಾಡಲಾಯಿತು ಎನ್ನುವುದರ ಬಗೆಗೆ ತಲೆಕೆಡಿಸಿಕೊಳ್ಳುವುದಿಲ್ಲವೆಂತಾದರೆ ಆಯಿತು. ಹಾಗಿರುವಾಗ, ಈ ತಿದ್ದುಪಡಿ, ಸುಪ್ರೀಂ ಕೋರ್ಟಿನ ತೀರ್ಪಿನ ವ್ಯತಿರಿಕ್ತವಾಗಿ ಮಾಡಿದಂತಾಗುತ್ತದೆ. ಪಾದ ಕಾಣಿಕೆಗಳನ್ನು ಅರ್ಪಿಸುವ ಸಂದರ್ಭದಲ್ಲಿ ಜನರು ಹೆಚ್ಚು ಅದರ ಬಗೆಗೆ ಚಿಂತಿಸಲು ಹೋಗುವುದಿಲ್ಲ. ಇಂದಿನ ದಿನಗಳಲ್ಲಿ, ಹಿಂದಿನ ಕಾಲದಂತೆ, ಎಲ್ಲಾ ಮಠಾಧಿಪತಿಗಳು ಸುಲಭವಾಗಿ

ಪಾದಕಾಣಿಕೆಗಳನ್ನು ಪಡೆಯುತ್ತಾರೆ ಎಂದು ಹೇಳುವುದಕ್ಕಾಗುವುದಿಲ್ಲ. ಇಂದು ಯಾರಿಗೆ ಗೌರವ ಕೊಡಬೇಕು, ಯಾರು ಗೌರವಕ್ಕೆ ಅರ್ಹರಾಗಿರುವುದಿಲ್ಲ ಎಂಬುದು ಜನರಿಗೆ ಚೆನ್ನಾಗಿ ಗೊತ್ತಿದೆ. ಒಂದು ವೇಳೆ ಕೆಲವು ಮಠಗಳು ಬಹಳ ಉನ್ನತ ಆದರ್ಶಗಳನ್ನು ಪಾಲಿಸಿ, ಸಮಾಜದಲ್ಲಿ ವಿಶೇಷ ಆದರಕ್ಕೆ ಪಾತ್ರವಾಗಿದ್ದರೆ ಅಂತಹ ಮಠಗಳಿಗೆ ನಾವು ಗೌರವವನ್ನು ತೋರಿಸಬಾರದು ಮತ್ತು ಎಲ್ಲಾ ಮಠಗಳನ್ನು ಒಂದೇ ರೀತಿಯಲ್ಲಿ ಪರಿಗಣಿಸಬೇಕು ಎಂದರೆ ತಪ್ಪಾಗುತ್ತದೆ. ನನ್ನ ಅಭಿಪ್ರಾಯದಲ್ಲಿ ಮಠಕ್ಕೆ ಸಲ್ಲಿಸಲಾಗುವ ಪಾದಕಾಣಿಕೆಯನ್ನು ಮಠಾಧಿಪತಿ ತನ್ನದೇ ಇಚ್ಛಾನುಸಾರ ವ್ಯವಹರಿಸುವಂತಿರಬೇಕು.

ಯಾವುದೇ ಮಠಾಧಿಪತಿಗೂ ತನ್ನದೇ ಆದ ಸಂಸಾರವೊಂದಿದೆ ಅಂತ ಇಲ್ಲ. ಇಡೀ ಜಗತ್ತೇ ಆತನ ಕುಟುಂಬ. ಅನೇಕ ಶ್ರೇಷ್ಠಮಟ್ಟದ ಮಠಾಧಿಪತಿಗಳು ಬಹಳ ದಾನಧರ್ಮಗಳನ್ನು ಮಾಡುತ್ತಿದ್ದು, ಕೆಲವು ಸಂದರ್ಭಗಳಲ್ಲಿ ಅರ್ಹ ವಿದ್ಯಾರ್ಥಿಗಳಿಗೆ ಸಹಾಯಧನವನ್ನು ನೀಡುವಂಥ ಉದಾಹರಣೆಗಳೂ ಇವೆ. ಯಾವನೇ ಧನಸಹಾಯಕ್ಕಾಗಿ ಅವರಲ್ಲಿಗೆ ಹೋದಾಗ ಅಂಥವರಿಗೆ ಧನಸಹಾಯ ನೀಡಿ ಉಪಕರಿಸಿದ ಸಂದರ್ಭಗಳೂ ಇಲ್ಲದಿಲ್ಲ. ಬಡ ಹೆಣ್ಣುಮಕ್ಕಳ ವಿವಾಹಕ್ಕೆ ಖರ್ಚು ಮಾಡಿದ ಉದಾಹರಣೆ ನನಗೆ ಗೊತ್ತಿದೆ.

ಅಂತಹ ಮಠಾಧಿಪತಿಗಳು ಇಂತಹ ತಮ್ಮ ದಾನಧರ್ಮಕ್ಕಾಗಿ ಹಿಂದೂ ಧಾರ್ಮಿಕ ದತ್ತಿ ಕಮಿಷನರ ಪರವಾನಗಿ ಪಡೆಯಬೇಕಾಗುತ್ತದೆ ಎಂದರೆ ತಪ್ಪಲ್ಲವೇ? ನನ್ನ ಸಲಹೆ ಅಂದರೆ, ಮಠಾಧಿಪತಿಗಳು ತಮಗೆ ಸಿಗುವಂಥ ಪಾದಕಾಣಿಕೆಗಳನ್ನು ತಮ್ಮಷ್ಟಕ್ಕೇ ವ್ಯಯಮಾಡುವಂತೆ ಉಳಿಸಿಕೊಳ್ಳುವಂತೆ ಅನುವುಮಾಡಿಕೊಡಬೇಕು. ಅಂಥವರು ಈ ಆದಾಯದ ಲೆಕ್ಕಪತ್ರ ಮತ್ತು ರಶೀದಿಗಳನ್ನು ಇರಿಸಬೇಕೆಂದು ಒತ್ತಾಯಪಡಿಸಿದರೆ ಅದು ಒಂದು ವಿಧವಾದ ಪೀಡನೆ ಎಂದು ನನ್ನ ಭಾವನೆ.

***

## ಪ್ರಶ್ನೋತ್ತರ ವೇಳೆ– 9 ಆಗಸ್ಟ್ 1954

## ದ.ಕ. ಜಿಲ್ಲೆಯಲ್ಲಿ ನೀರಾವರಿ ಯೋಜನೆಗಳು

**ಶ್ರೀ ಟಿ.ಅನಂತ ಪೈ:** ಮಾನ್ಯ ಲೋಕೋಪಯೋಗಿ ಇಲಾಖೆಯ ಸಚಿವರುಗಳು, ಈ ಮುಂದೆ ಹೇಳಲಾಗುವ ವಿಷಯಗಳನ್ನು ತಿಳಿಸಬಹುದೇ?

1.1954–55ರ ಅವಧಿಯಲ್ಲಿ ದ.ಕ.ಜಿಲ್ಲೆಯಲ್ಲಿ ಕೈಗೊಳ್ಳಲು ತೀರ್ಮಾನಿಸಿರುವ ನೀರಾವರಿ ಯೋಜನೆಗಳು

2. ಅದರ ಮೇಲೆ ವಿನಿಯೋಗಿಸಲು ಉದ್ದೇಶಿಸಿರುವ ಮೊಬಲಗು?

**ಗೌ.ರಾಜಾ ಶ್ರೀಷಣ್ಮುಗ ರಾಜೇಶ್ವರ ಸೇತುಪತಿ:**

1. 21

2. ರೂ.21,17,319.00

**ಶ್ರೀ ಟಿ.ಅನಂತ ಪೈ:** ಸ್ವಾಮೀ ಅನೇಕ ಯೋಜನೆಗಳನ್ನು ದ.ಕ.ಜಿಲ್ಲೆಯಲ್ಲಿ ಕಳೆದ 4–5 ವರ್ಷಗಳ ಅವಧಿಯಲ್ಲಿ ಅನುಷ್ಠಾನಕ್ಕೆ ಹಮ್ಮಿಕೊಳ್ಳಲಾಗಿದ್ದರೂ, ಅವು ಸರಕಾರದ ನಿರೀಕ್ಷಿತ ಮಟ್ಟಕ್ಕೆ ಬರಲಾಗದು, ಯಾಕಂದರೆ, ಅಲ್ಲಿನ ಭೌತಿಕ ಸ್ವರೂಪ ಹಾಗಿದೆ. ಈ ಯೋಜನೆಗಳು ಸಾಕಷ್ಟು ಆದಾಯ ನೀಡದಿದ್ದರೂ ದ.ಕ. ಜಿಲ್ಲೆಗಳಿಗೆ ಪ್ರತ್ಯೇಕವಾದ ರೀತಿಯಲ್ಲಿ ಸರಕಾರ ರಿಯಾಯಿತಿಯನ್ನು ತೋರ್ಪಡಿಸಿ, ಸಹಕರಿಸಬೇಕೆಂದು ಕೇಳಿಕೊಳ್ಳುತ್ತೇನೆ.

**ಗೌ.ರಾಜಾ ಶ್ರೀಷಣ್ಮುಗ ರಾಜೇಶ್ವರ ಸೇತುಪತಿ:** ಆದ್ದರಿಂದಲೇ ಸ್ವಾಮೀ, ನಾವು ಈ ಯೋಜನೆಗಳಿಗಾಗಿ ರೂ.21,17,319ನ್ನು ವಿನಿಯೋಗಿಸುತ್ತಿರುವುದು ಮತ್ತು ಅದೊಂದು ಹಿಂದುಳಿದ ಜಿಲ್ಲೆಯೆಂದು ನಾವು ನಮ್ಮ ವಿಶೇಷ ಕಾಳಜಿಯನ್ನು ಅಲ್ಲಿ ತೋರ್ಪಡಿಸುತ್ತಿರುವುದು.

## ಅಭಿವೃದ್ಧಿ ಶುಲ್ಕದ ದೇಣಿಗೆ ಕುರಿತು

## ಮದ್ರಾಸು ನೀರಾವರಿ ಮಸೂದೆ

## 12 ಫೆಬ್ರವರಿ, 1955

**ಶ್ರೀ ಟಿ.ಅನಂತ ಪೈ:** ಸಭಾಧ್ಯಕ್ಷರೇ, ಇಲ್ಲಿಯವರೆಗೆ ಸರಕಾರ, ಎಲ್ಲೆಲ್ಲಿ ನಿರ್ದಿಷ್ಟ ಬೆಳೆ ಬರುತ್ತಿತ್ತೋ ಅಲ್ಲೆಲ್ಲ ನೀರಾವರಿಯನ್ನು ಒದಗಿಸುವ ಕ್ರಮ ಕೈಗೊಳ್ಳುತ್ತಿತ್ತು. ಅಭಿವೃದ್ಧಿ ತೆರಿಗೆಯ ಅನುಷ್ಠಾನವನ್ನು ಈ ಮಸೂದೆಯ ಮೂಲಕ ಮಾಡಿದ್ದೇ ಆದಲ್ಲಿ –ಮಾನ್ಯ ಸಚಿವರು ಆಶ್ವಾಸನೆ ನೀಡಬೇಕು– ಎಲ್ಲೆಲ್ಲಿ ಜನ

ಅಭಿವೃದ್ಧಿ ತೆರಿಗೆಯನ್ನು ದೇಣಿಗೆಯಾಗಿ ನೀಡಬಯಸುತ್ತಾರೋ, ಅಲ್ಲಲ್ಲಿ ಸರಕಾರ ನೀರಾವರಿ ಯೋಜನೆಗಳನ್ನು ಹಮ್ಮಿಕೊಳ್ಳಬಲ್ಲುದು ಅಂತ. ಈ ಆಶ್ವಾಸನೆಗೆ ಮಾನ್ಯ ಸಚಿವರು ಬದ್ಧರಾಗಿರುತ್ತಾರೆ ಎಂದು ಭಾವಿಸುತ್ತೇನೆ.

ನಮ್ಮ ದ.ಕ.ಜಿಲ್ಲೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಆಹಾರ ಯಾವಾಗೆಲ್ಲ ತುಟ್ಟಿಯಾಗುತ್ತೋ, ನಮ್ಮ ಜಿಲ್ಲೆಯ ಜನರೂ ಅದರಿಂದ ಸಂತ್ರಸ್ತರಾಗಿರುತ್ತಿದ್ದರು, ಯಾಕಂದರೆ ನೆರೆಯ ಮಲಬಾರಿನಲ್ಲಿ ಆಹಾರದ ಪ್ರಬಲ ಕ್ಷಾಮ ಕಂಡುಬರುತ್ತಿತ್ತು. ಕಂದಾಯ ಸಚಿವರು ಹೇಳುವಂತೆ, ಹಸಿವಿನ ಕೂಗು ಸಾಂಕ್ರಾಮಿಕವಾಗಿದ್ದು, ಅದು ಮಲಬಾರಿನಲ್ಲಿ ಎದ್ದಾಗ, ಸ್ವಾಭಾವಿಕವಾಗಿ ದ.ಕ.ಜಿಲ್ಲೆಗೂ ಹಬ್ಬುತ್ತಿತ್ತು. ನಾವು ಅಂತಹ ಸಂದರ್ಭಗಳಲ್ಲಿ ನಮ್ಮ ಕೈಲಾದ ಸಹಾಯವನ್ನು ಮಾಡಿದ್ದೇವೆ ಎಂದು ಹೇಳಬೇಕಾಗುತ್ತದೆ.

ಮಲಬಾರ್ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಸಮಸ್ಯೆಗಳು ಹೆಚ್ಚುಕಡಿಮೆ ಒಂದೇ ತೆರನಾಗಿವೆ ಎಂದು ಹೇಳಬಹುದು. ಸರಕಾರ ಕೆಲವು ನೀರಾವರಿ ಯೋಜನೆಗಳನ್ನು ಮಲಬಾರಿನಲ್ಲಿ, ಅದೂ ಒಂದೂ ಒಂದೂವರೆ ಶೇಕಡಾದಷ್ಟು ಬೆಳೆ ಪ್ರಾಪ್ತವಾಗುವಂತಿದ್ದರೂ, ಯೋಜನೆಗಳನ್ನು ಹಮ್ಮಿಕೊಂಡಿದ್ದರೆ, ಅಂಥದ್ದೇ ಯೋಜನೆಗಳನ್ನು ದ.ಕ.ಜಿಲ್ಲೆಯಲ್ಲೂ ಯಾಕಾಗಿ ಹಮ್ಮಿಕೊಳ್ಳಬಾರದೆಂದು ಕೇಳುತ್ತಿದ್ದೇನೆ? ಮಲಬಾರಿನ ಸಮಸ್ಯೆಗಳಿಗಿಂತ ದ.ಕ.ಜಿಲ್ಲೆಯ ಸಮಸ್ಯೆಗಳು ಭಿನ್ನವಾಗಿಲ್ಲವೆಂದು ಈ ಸಂದರ್ಭದಲ್ಲಿ ನಾನು ಹೇಳಬಯಸುತ್ತೇನೆ. ಹೆಚ್ಚುಕಡಿಮೆ ಸಮಸ್ಯೆಗಳು ಒಂದೇ ತೆರನಾಗಿದ್ದರೂ, ನಮ್ಮಲ್ಲಿ ಮಲಬಾರಿನಷ್ಟು ಜನಸಂಖ್ಯೆ ಇಲ್ಲ. ಈವರೆಗೆ ನಮ್ಮಲ್ಲಿ ಯಾವುದೇ ಯೋಜನೆಗಳನ್ನು ಹಮ್ಮಿಕೊಂಡಿಲ್ಲವೆಂದರೆ, ಅದನ್ನು ನಮ್ಮಲ್ಲಿ ಪತ್ತೆಹಚ್ಚಲೇ ಇಲ್ಲವೆಂದಲ್ಲ; ತಾಂತ್ರಿಕ ಅನುಮೋದನೆ ಲಭಿಸಿಲ್ಲ ಎನ್ನುವುದಕ್ಕಾಗಿ ಅಲ್ಲ; ಸರಕಾರ ಈ ಭೂಮಿಯಲ್ಲಿ ಹೆಚ್ಚಿನ ಬೆಳೆ ಬರಲಾರದು ಎಂಬ ಇಂಗಿತವನ್ನು ಹೊಂದಿರುವ ಕಾರಣದಿಂದ ಮತ್ತು ಆ ಕಾರಣದಿಂದಾಗಿ ಹೊಸ ಯೋಜನೆಗಳು ಇಲ್ಲಿ ಬೇಕಾಗಿಲ್ಲವೆಂದು ತೀರ್ಮಾನಿಸಿದ್ದು.

ದ.ಕ. ಜಿಲ್ಲೆಯ ಯಾವ ನದಿಗಳಲ್ಲಿ ವರ್ಷದ 365 ದಿನಗಳೂ ನೀರು ನಿರಂತರವಾಗಿ ಹರಿಯುತ್ತದೆಯೋ, ಅಲ್ಲಲ್ಲಿ ಸೇತುವೆಗಳನ್ನು ನಿರ್ಮಿಸಲಾಗಿದೆ, ಮತ್ತು ಇದೊಂದು ಐಶಾರಾಮಿಗಾಗಿ ನಿರ್ಮಾಣಗೊಂಡಿರುವುದಲ್ಲವೆಂದು ತಿಳಿಯೋಣ. ಅದಕ್ಕೂ ನೀರಾವರಿ ಯೋಜನೆಗಳಿಗೂ ಸಂಬಂಧವಿಲ್ಲ.

ನೀರಾವರಿ ಯೋಜನೆಗಳಿಗೆ ಅತೀ ಮಹತ್ವದ ಸ್ಥಾನವನ್ನು ನೀಡಬೇಕಾಗಿದ್ದು ಅನಿವಾರ್ಯವಾಗಿದ್ದು, ಈಗ ತೋರಿಸಿದ ಕಾಳಜಿಗಿಂತ, ದ.ಕ. ಜಿಲ್ಲೆಗೆ ಇನ್ನಷ್ಟು ವಿಶೇಷವಾದ ಕಾಳಜಿಯನ್ನು ಸರಕಾರದಿಂದ ಬಯಸುತ್ತೇನೆ. ಧನ್ಯವಾದಗಳು. **

## ತಿದ್ದುಪಡಿ ಮಸೂದೆ–1955

## ದ.ಕ.ಜಿಲ್ಲಾ ಗೇಣಿದಾರರ ಸಂರಕ್ಷಣೆ

**ಶ್ರೀ ಟಿ.ಅನಂತ ಪೈ:** ಮಾನ್ಯ ಸದಸ್ಯರಾದ ಶ್ರೀ ನಾರಾಯಣ ಕುರುಪ್ ಅವರು ಈ ಮೊದಲು ಮಾತನಾಡಿದಾಗ, ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದಿರುವ ಸದಸ್ಯರು ಮಾನ್ಯ ಕಂದಾಯ ಮಂತ್ರಿಗಳ ಬಗೆಗೆ ಬಹಳ ಸೂಕ್ತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲ ಎಂದು ಹೇಳಿದರು. ಅವರ ಮಾತನ್ನು ನಾನು ಒಪ್ಪುತ್ತೇನೆ. ಯಾಕಂದರೆ, ಕಾಂಗ್ರೆಸ್ ಸಂಸ್ಥೆ ಜನರಿಗೆ ನೀಡಿದ ಆಶ್ವಾಸನೆಯ ಪ್ರಕಾರ, ಭೂಸುಧಾರಣೆಯನ್ನು ದ.ಕ.ಜಿಲ್ಲೆಯಲ್ಲಿ ಕೈಗೊಳ್ಳಲಾಗಿಲ್ಲ. ನಾವು ಕಾಂಗ್ರೆಸ್ ಸಂಸ್ಥೆಯ ಆಶಯಕ್ಕೆ ಮಾತ್ರವಲ್ಲ, ಯಾವ ಜನತೆ ನಮ್ಮನ್ನು ಆರಿಸಿಕೊಂಡು ಇಲ್ಲಿಗೆ ಕಳುಹಿಸಿದೆಯೊ ಅವರ ಆಶಯಗಳಿಗೂ ಬದ್ಧರಾಗಿರಬೇಕಾಗುತ್ತದೆ. ಯಾಕೆ ಒಂದು ಶಾಶ್ವತವಾದ ಕ್ರಮವನ್ನು ಕೈಗೊಳ್ಳುವುದಕ್ಕೆ ವಿಳಂಬವಾಗಿದೆ ಎಂದು ಮಾನ್ಯ ಕುರುಪ್ ಅವರು ಹೇಳಿದಾಗ ಅದರಲ್ಲಿ ಭಾಗಶಃ ಸತ್ಯವಿದೆ ಎಂದು ನನಗನಿಸಿತು.



ಶ್ರೀ ಸಿ.ಸುಬ್ರಹ್ಮಣ್ಯಂ ಅವರ ಜತೆಗಿನ ಈ ಬಾಂಧವ್ಯ ಮುಂದೆ ಇನ್ನಷ್ಟು ಗಟ್ಟಿಯಾಯಿತು

ಅವನ್ನು ಅನುಮೋದಿಸುವ ಅವರ ಪಕ್ಷದವರೇ ಆದ ಮಾನ್ಯ ಸದಸ್ಯ ಶ್ರೀ ಕೊಳ್ಕೆಬೈಲ್ ಅವರು ಇಂದು ಇಲ್ಲಿ ಇಲ್ಲದಿರುವುದು ದುರ್ದೈವದ ಸಂಗತಿ. ಮಾನ್ಯ ಕಂದಾಯ ಸಚಿವರು ಇತ್ತೀಚೆಗೆ ದ.ಕ.ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡಾಗ, ಕಾಂಗ್ರೆಸ್ ಪಕ್ಷ ಮತ್ತು ಪ್ರಜಾ ಸೋಶಲಿಷ್ಟ್ ಪಕ್ಷಕ್ಕೆ ಸೇರಿದ ಜಮೀನ್ದಾರರು–ಪ್ರಜಾ ಸೋಶಲಿಷ್ಟ್ ಪಕ್ಷದವರು ತಮ್ಮ ಉತ್ಸಾಹವನ್ನು ತೋರಿಸುವುದರಲ್ಲಿ ಹಿಂದೆ ಬೀಳದೆ –ಭೂಮಸೂದೆಗೆ ಸಂಬಂಧಿಸಿ ಒಂದು ಶಾಶ್ವತ ಕ್ರಮ ಕೈಗೊಳ್ಳದಂತೆ ಅವರಲ್ಲಿ ಪಿತೂರಿ ನಡೆಸಿದರು.

ಅದೇ ರೀತಿ ಮಾನ್ಯ ಶ್ರೀ ಸಿ. ಸುಬ್ರಹ್ಮಣ್ಯಂ ಅವರು ಇತ್ತೀಚೆಗೆ ಉಡುಪಿಗೆ ಬಂದಾಗ, ಪ್ರಜಾ ಸೋಶಲಿಷ್ಟ್ ಪಕ್ಷದ ಉಪಾಧ್ಯಕ್ಷರು ಈ ವಿಚಾರವನ್ನು ಸೂಚಿಸುವ ಮೆಮೊರಂಡಮ್ ಒಂದನ್ನು ಅವರಿಗೆ ನೀಡಿದ್ದರು. ಅದಕ್ಕೂ ಮೊದಲಿನ ವಾರದಲ್ಲಿ ಇದೇ ಉಪಾಧ್ಯಕ್ಷರು ಗ್ರಾಮವೊಂದರ ಸಭೆಯಲ್ಲಿ ಮಾತನಾಡುವಾಗ ಭೂಮಸೂದೆಯನ್ನು ಜಾರಿಗೆ ತರದಿರುವ ಈ ಸರಕಾರವನ್ನು ಟೀಕಿಸಿದ್ದರು. ಈ ಎಲ್ಲಾ ಹಿನ್ನೆಲೆಯಲ್ಲಿ ಶ್ರೀ ಕುರುಪ್ ಅವರನ್ನು ನಾನು ದೂಷಿಸುವುದಿಲ್ಲ. ಆದರೆ ಅವರದೆ ಪಕ್ಷ ನಮ್ಮ ಜಿಲ್ಲೆಯಲ್ಲಿ ಹೇಗೆ ನಡೆದುಕೊಳ್ಳುತ್ತದೆ ಎಂಬುದರ ಕಡೆಗೆ ಬೊಟ್ಟುಮಾಡಿ ತೋರಿಸುತ್ತಿದ್ದೇನೆ ಅಷ್ಟೆ.

## ಗೇಣಿದಾರರ ಸಂರಕ್ಷಣೆ ಅವಶ್ಯ

ಸ್ವಾಮೀ, ಸರಕಾರಕ್ಕೆ ಚೆನ್ನಾಗಿ ಗೊತ್ತಿದೆ. ದ.ಕ.ಜಿಲ್ಲೆಯ ಗೇಣಿದಾರರು ಯಾವ ಬಗೆಯ ಸ್ಥಿತಿಯನ್ನು ಅನುಭವಿಸುತ್ತಿದ್ದಾರೆ ಮತ್ತು ಅವರಿಗೆ ಸಂರಕ್ಷಣೆಯನ್ನು ಒದಗಿಸಬೇಕೆಂಬುದಾಗಿ. ಗೇಣಿದಾರರನ್ನು ಎಬ್ಬಿಸುವುದನ್ನು ತಡೆಯುವಂತೆಯೂ, ಭೂಮಸೂದೆಗೆ ಸಂಬಂಧಿಸಿದ ಕಾಯಿದೆಯನ್ನು ಜಾರಿಗೆ ತರುವಂತೆಯೂ ಸರಕಾರ ಬದ್ಧವಾಗಿದೆ ಎಂಬುದನ್ನು ನಾನು ಬಲ್ಲೆ. ಮಾನ್ಯ ಸಚಿವರು ತಮ್ಮ ಉತ್ತರದಲ್ಲಿ ಇದೇ ವಿಷಯವನ್ನು ಹೇಳುವರು ಎಂದು ಭಾವಿಸುತ್ತೇನೆ. ಈ ಮಸೂದೆಯ ಪ್ರಸ್ತಾವನೆಯಲ್ಲೂ ಮಸೂದೆಯನ್ನು ಶಾಶ್ವತವಾಗಿ ಯಾವಾಗ ಜಾರಿಗೆ ತರಲಾಗುತ್ತಿದೆ ಎಂದು ನಮೂದಿಸಿದ್ದರೆ ಚೆನ್ನಾಗಿತ್ತು ಎಂದು ನಾನು ಎಣಿಸುತ್ತೇನೆ.

## ಆತ್ಮಸಾಕ್ಷಿಗೆ ಅನುಗುಣವಾಗಿ

ಎರಡನೆಯದಾಗಿ, ಈ ಮಸೂದೆಯ ಜಾರಿಗೆ ಕಾಂಗ್ರೆಸ್ ಶಾಸಕರೇ ಮುಂದಿನ ಚುನಾವಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಶ್ರಮಿಸುತ್ತಿದ್ದಾರೆ ಎಂದು ಹೇಳಲಾಗುತ್ತಿದೆ. ಏನಿದ್ದರೂ, ನಾವು ಯಾರಿಂದ ಆರಿಸಿ ಬಂದಿದ್ದೇವೆ ಎಂಬುದು ನಮಗೆ ತಿಳಿದಿಲ್ಲವೇ? ನಮಗೆ ಜಮೀನ್ದಾರರೂ ಗೇಣಿದಾರರೂ ಆರಿಸಿಬರಲು ಕಾರಣರಾಗಿದ್ದಾರೆ. ಮತ್ತು ಯಾರು ನಮಗೆ ಮತ ನೀಡಿದ್ದಾರೆ ಎಂಬುದು ಊಹಿಸುವುದೂ ಕಷ್ಟವೇ. ಆದರೆ, ಆರಿಸಿ ಬಂದ ಮೇಲೆ, ನಾವು ನಮ್ಮ ಪಕ್ಷದ ಧೋರಣೆ ಮತ್ತು ಕಾರ್ಯಕ್ರಮದ ಪ್ರಕಾರ ನಡೆದುಕೊಂಡು, ಭೂಮಸೂದೆಯ ಜಾರಿಗೆ ಪ್ರಯತ್ನಪಡಬೇಕಾಗಿದೆ. ಇದು ನ್ಯಾಯಯುತವಾಗಿದ್ದು, ನಮ್ಮ ಆತ್ಮಸಾಕ್ಷಿಯಾಗಿ ಮಾಡುವಂಥ ಕೆಲಸವಾಗಿದೆ. ಹೀಗೆ ನಮ್ಮ ಆತ್ಮಸಾಕ್ಷಿಗೆ ಸರಿಯಾಗಿ ನಡೆದುಕೊಂಡಾಗ್ಯೂ ನಮ್ಮನ್ನು ಮುಂದಿನ ಚುನಾವಣೆಯಲ್ಲಿ ಆರಿಸದಿದ್ದಲ್ಲಿ ಅದಕ್ಕೂ ನಾವು ತಯಾರಿದ್ದೇವೆ ಎಂದು ಹೇಳಬಯಸುತ್ತೇನೆ. ನಾವು ಮಾಡದೆ ಇರುವ ಕೆಲಸಗಳ ಬಗೆಗೆ, ಆಶ್ವಾಸನೆ ನೀಡುತ್ತಾ ಹೋಗುವುದು ನಮ್ಮ ಜಾಯಮಾನಕ್ಕೆ ಒಪ್ಪಿದ್ದಲ್ಲ. ನಮ್ಮಿಂದ ಜನರು ರಾಜಕೀಯ ಶಿಸ್ತನ್ನು ಬಯಸುತ್ತಿದ್ದು, ಹೇಳುವುದು ಒಂದು ಮಾಡುವುದು ಒಂದು ಆಗಬಾರದು. ನಮ್ಮ ಪಕ್ಕದ ಜಿಲ್ಲೆ ಮುಂಬಯಿ ಸಂಸ್ಥಾನಕ್ಕೆ ಸೇರಿದ್ದು, ಅಲ್ಲಿ ಒಟ್ಟು ಉತ್ಪತ್ತಿಯಿಂದ 6ನೇ ಒಂದಂಶವನ್ನು ಜಮೀನುದಾರರಿಗೆ ಸಲ್ಲಿಸಬೇಕೆಂದು ಕಾನೂನು ಜಾರಿಗೆ ಬಂದಿದೆ. ಮತ್ತು ಅದನ್ನು ಜಮೀನುದಾರರು ತಮ್ಮ ಲೆಕ್ಕ ಪತ್ರದಲ್ಲಿ ತೋರಿಸಬೇಕಾಗಿದೆ. ಇನ್ನೊಂದು ಕಡೆ ಮಲಬಾರು ಗೇಣಿದಾರರ ಕಾಯಿದೆ ಇದ್ದು ಅದರಲ್ಲಿ ದ.ಕ.ಜಿಲ್ಲೆಯ ಕೆಲವು ತಾಲೂಕುಗಳ ಭಾಗಗಳು ಒಳಗೊಂಡಿವೆ. ಇವೆರಡರ ನಡುವೆ ದ.ಕ.ಜಿಲ್ಲೆಯಿದ್ದು, ಇಲ್ಲಿನ ಗೇಣಿದಾರರು ಸಂಘರ್ಷಕ್ಕೆ ಇಳಿದು ತಮ್ಮ ಹಕ್ಕು ಮತ್ತು ಸವಲತ್ತುಗಳ ರಕ್ಷಣೆಗಾಗಿ ಹೋರಾಟ ನಡೆಸುವಂಥ ಪರಿಸ್ಥಿತಿ ಸ್ವಾಭಾವಿಕವಾಗಿಯೇ ಒದಗಿ ಬಂದಿದೆ.

## ಬದ್ಧತೆ ಬೇಕು

ಇನ್ನೊಂದು ವಿಚಾರ ಸರಕಾರಕ್ಕೆ ಸಲ್ಲಿಸಿದ ನಿರೂಪದಲ್ಲಿರುವಂಥದ್ದು, ಸರಕಾರ ಕೈಗೊಂಡ ಸಮಗ್ರ ಭೂಸುಧಾರಣಾ ಮಸೂದೆಯೇ ದ.ಕ.ಜಿಲ್ಲೆಗೂ ಅನ್ವಯಿಸಿ ಅನುಷ್ಠಾನಕ್ಕೆ ತಂದರೆ ಸಾಕು ಅನ್ನುವಂಥದ್ದು. ತಮಿಳು ನಾಡಿಗೆ ಯಾವುದೇ ಭೂಮಸೂದೆ ಕಾಯಿದೆ ಅನ್ವಯಿಸುವಂತೆ ಜಾರಿಗೆ ತರುವಂಥದ್ದು

ನನಗೆ ಅನುಮಾನವಿದೆ. ಹಾಗಾಗಿ ರಾಜ್ಯಕ್ಕೆ ಸಮಗ್ರವಾಗಿ ಅನ್ವಯಿಸುವಂತೆ ಭೂಮಸೂದೆಯನ್ನು ಜಾರಿಗೆ ತಂದರೆ, ನಮಗೂ ಅದು ಅನ್ವಯಿಸುವುದರಿಂದ ನಮಗೇನೂ ಅಭ್ಯಂತರವಿರಲಾರದು ಎಂದು ಅವರ ಹೇಳಿಕೆ ಇದೆ. ನಮ್ಮನ್ನು ಪ್ರತ್ಯೇಕವಾಗಿ ಯಾಕೆ ಪರಿಗಣಿಸಬೇಕು? ಆವಾಗ ನಾನು ಮದ್ರಾಸಿಗೆ ಬಂದು ಮಾನ್ಯ ಕಂದಾಯ ಮಂತ್ರಿಗಳನ್ನು ಭೇಟಿಮಾಡಿ ಈ ವಿಷಯವನ್ನು ವೈಯಕ್ತಿಕವಾಗಿ ಚರ್ಚಿಸಿದ್ದೇನೆ. ಜೂನ್ ಅಥವಾ ಜುಲೈ ತಿಂಗಳಲ್ಲಿ ನಾವು ಸಮಗ್ರ ಮಸೂದೆಯೊಂದನ್ನು ಅಳವಡಿಸಲಿದ್ದೇವೆ ಎಂದು ಅವರು ನನಗೆ ಹೇಳಿದರು. ಇಡೀ ರಾಜ್ಯಕ್ಕೆ ಅನ್ವಯವಾಗುವಂತೆ ಸಮಗ್ರ ಮಸೂದೆಯೊಂದನ್ನು ಜೂನ್ ಅಥವಾ ಜುಲೈ ತಿಂಗಳಲ್ಲಿ ಜ್ಯಾರಿಗೆ ತರಲಾಗುವುದು ಅಂತ ನಾನು ಒಂದು ಪತ್ರಿಕಾ ಹೇಳಿಕೆಯನ್ನು ಕೊಟ್ಟಿದ್ದೆ. ಮತ್ತು ಅದರ ಜತೆಗೆ ನಮ್ಮ ದ.ಕ.ಜಿಲ್ಲೆಗೂ ಮಸೂದೆಯೊಂದು ಜಾರಿಗೆ ಬರಲಿದೆ ಎಂದು ಹೇಳಿದ್ದೆ.

ಇದು ಕೆಲವೊಂದು ಜಮೀನುದಾರರನ್ನು ವಿಚಲಿತರನ್ನಾಗಿ ಮಾಡಿದ್ದು. ಅದರ ಬಳಿಕ ಹೊಸ ನಿರೂಪಗಳನ್ನು ತಯಾರು ಮಾಡಿ, ದ.ಕ.ಜಿಲ್ಲೆಯ ಪರಿಸ್ಥಿತಿ ವಿಚಿತ್ರವಾಗಿದ್ದು, ರಾಜ್ಯದ ಮಿಕ್ಕುಳಿದ ಭಾಗಗಳಿಗೆ ಅದನ್ನು ತುಲನೆ ಮಾಡಬಾರದಾಗಿಯೂ, ರಾಜ್ಯದ ಇತರ ಭಾಗಗಳಲ್ಲಿ ಭೂಮಸೂದೆಯನ್ನು ಜಾರಿಗೊಳಿಸಿದರೂ, ದ.ಕ. ಜಿಲ್ಲೆಗೆ ಅದರ ಅವಶ್ಯಕತೆ ಇಲ್ಲ ಎಂಬುದಾಗಿ ನಿಲುವನ್ನು ತಳೆದರು. ಸರಕಾರ ಈ ಬಲೆಗೆ ಬೀಳಲಾರದೆಂದು ನಾನು ಎಣಿಸುತ್ತೇನೆ. ಸರಕಾರ ಜನತೆಗೆ ನೀಡಿದ ಭರವಸೆಗಳಿಗೆ ಬದ್ಧವಾಗಿರುತ್ತದೆ ಎಂದು ತಿಳಿಯುತ್ತೇನೆ. ಆ ಮೇಲೆ ಜನರೇ ಹೇಳಬಹುದು, 'ಯಾರು ಈ ಶಾಸಕರು?, ಅವರು ನಮ್ಮನ್ನು ಪ್ರತಿನಿಧಿಸುತ್ತಿಲ್ಲ' ಎಂಬುದಾಗಿ. ನಮ್ಮ ಮಾತನ್ನು ಸರಕಾರ ಕೇಳದೇ ಹೋದಲ್ಲಿ, ನಮ್ಮ ರಾಜೀನಾಮೆಯನ್ನು ಸರಕಾರ ಬಯಸಲಿ. ನಾವು ಜಮೀನುದಾರರನ್ನೂ ಗೇಣಿದಾರರನ್ನೂ ಇನ್ನಿತರ ವರ್ಗದವರನ್ನೂ ಪ್ರತಿನಿಧಿಸುತ್ತೇವೆ. ಯಾವುದೇ ಮುಲಾಜಿಲ್ಲದೆ, ಭಯವಿಲ್ಲದೆ, ಜನತೆಯ ಪ್ರತಿನಿಧಿಗಳಾಗಿ ಇಂದಿನ ಪರಿಸ್ಥಿತಿಯನ್ನು ಸರಕಾರಕ್ಕೆ ನಿವೇದನೆಮಾಡಿಕೊಳ್ಳುವ ಹಕ್ಕು ಮತ್ತು ಬಾಧ್ಯತೆ ನಮಗಿದೆ. ಕಾಂಗ್ರೆಸ್ ಭೂಮಸೂದೆಯನ್ನು ಬೆಂಬಲಿಸುತ್ತದೆ ಮತ್ತು ಯಾವದೇ ಸಂಘರ್ಷ ಉತ್ಪನ್ನವಾದ ಸಂದರ್ಭ ಅಂಥವರ ಸಂರಕ್ಷಣೆಗೆ ಬದ್ಧವಾಗಿದೆ. ಅಂತೆಯೇ ಜಮೀನುದಾರರಿಗೆ ಸೂಕ್ತ ರೀತಿಯ ಗೇಣಿಯ ಭರವಸೆಯನ್ನು ನೀಡುತ್ತದೆ.

## ಗೇಣಿಯ ಪ್ರಮಾಣ

ಗೇಣಿ ಯಾವ ಪ್ರಮಾಣ ಮತ್ತು ಹೇಗೆ ನೀಡಬೇಕೆಂಬುದರ ಕುರಿತು ಯಾವುದೇ ಕರಡು ಲೆಕ್ಕಾಚಾರ ಹಾಕಿರುವಂತೆ ತೋರುತ್ತಿಲ್ಲ. ಜಮೀನುದಾರರು ಎಲ್ಲಿಯುವರೆಗೆ ತಮ್ಮ ಅಧಿಕಾರ ಹೊಂದಿರುತ್ತಾರೋ, ಅಲ್ಲಿಯುವರೆಗೆ ಅವರ ದೃಷ್ಟಿಕೋನವನ್ನು ಪರಿಗಣಿಸಿ, ನ್ಯಾಯಯುತವಾದ ತೀರ್ಮಾನಕ್ಕೆ ಬರುವುದು ಉಚಿತ. ಆ ದೃಷ್ಟಿಕೋನವೇನು? ಒಂದು ವೇಳೆ ಗೇಣಿದಾರ ಗೇಣಿ ನೀಡಲು ಅಸಮರ್ಥನಾದರೆ, ಜಮೀನುದಾರ ಕಾನೂನಿನ ಮೊರೆ ಹೋಗಿ ಗೇಣಿಯನ್ನು ಪಡೆಯುವಂಥ ದೀರ್ಘ ವಿಧಾನದ ದುಬಾರಿ ಮಾರ್ಗ ಬಳಸುವಂಥ ಪ್ರಮೇಯ ಉಂಟಾಗಬಾರದು. ಜಮೀನುದಾರನ ಹಕ್ಕುಗಳನ್ನು ಸಂರಕ್ಷಿಸುವುದೂ ಅವಶ್ಯವಿದೆ. ಜಮೀನುದಾರ ಒಂದು ವೇಳೆ ಸ್ವತಃ ವ್ಯವಸಾಯ ಮಾಡಲು ಆಸಕ್ತನಾದರೆ, ಕೆಲವೊಂದು ಕಟ್ಟುಪಾಡುಗಳಿಗೆ ಅನ್ವಯಿಸಿ, ಅದರ ಉಪಭೋಗಕ್ಕೆ ಅನುವು ಮಾಡಿಕೊಡುವುದು ಅಷ್ಟೇ ಉಚಿತ. ಏನಿದ್ದರೂ ನಮ್ಮದು ಜಮೀನುದಾರರ ಸಂರಕ್ಷಣಾ ಮಸೂದೆಯಾಗಿರದೆ, ಜಮೀನುದಾರರು ಬಲವಂತದಿಂದ ಗೇಣಿದಾರರನ್ನು ಒಕ್ಕಲೆಬ್ಬಿಸದಂತೆ ಸಂರಕ್ಷಿಸುವ ಮಸೂದೆ ಎಂಬುದನ್ನು ಮರೆಯಬಾರದು. ಇಷ್ಟಾಗಿಯೂ ಅನಿವಾರ್ಯದ ಸಂದರ್ಭಗಳಲ್ಲಿ ಜಮೀನುದಾರರ ಆಸಕ್ತಿಗಳನ್ನೂ ರಕ್ಷಿಸಿ, ಅಂಥ ವೇಳೆ ಆತನಿಗೆ ಭೂಮಿ ಲಭ್ಯವಾಗುವಂತೆ ಮಾಡಬೇಕು.

ಸ್ವಾಮೀ, ಮತ್ತೆ, ಗೇಣಿಯ ಪ್ರಮಾಣವನ್ನು ನಿರ್ದಿಷ್ಟವಾಗಿ ವಿಧಿಸುವಂಥದ್ದು ಅನಿವಾರ್ಯ. ಆ ಕುರಿತು ಮುಂದೆ ಯಾವುದೇ ತಕರಾರು ಇರಬಾರದು. ಜಮೀನುದಾರರು ಅಂತೆಯೇ ಗೇಣಿದಾರರು ತಮ್ಮ ಅಹವಾಲುಗಳನ್ನು ಪರಿಹರಿಸಿಕೊಳ್ಳಲು ನ್ಯಾಯಾಂಗದ ಕಾನೂನಿಗೆ ಮೊರೆಹೋಗುವಂಥ ಸಂದರ್ಭ ಒದಗಿ ಅದರಿಂದ ಬಹಳಷ್ಟು ಹಣ ವ್ಯಯವಾಗುವ ಸಂಭವ ನಿರ್ಮಾಣವಾಗಬಾರದು. ಈ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟು, ಆದಷ್ಟು ಬೇಗನೆ ಈ ಕುರಿತು ತೀರ್ಮಾನ ಕೈಗೊಳ್ಳಬೇಕು– ಯಾಕೆಂದರೆ ವಿಳಂಬವಾದಷ್ಟು ಇದರಲ್ಲಿ ವಿವಿಧ ರೀತಿಯ ಅಸಮರ್ಪಕತೆ ನುಸುಳುವ ಸಾಧ್ಯತೆ ಇದೆ. ಜಮೀನುದಾರ ಮತ್ತು ಗೇಣಿದಾರರ ನಡುವಿನ ಸಂಬಂಧ ಅಮೂಲ್ಯವಾದದ್ದು. ಅದು ಗಂಡಹೆಂಡತಿ ನಡುವಿನ ಸಂಬಂಧವನ್ನು ಊರ್ಜಿತಗೊಳಿಸಲು ತರಲಾಗುವ ಕಾನೂನಿನಂತೆ ಇರುತ್ತದೆ.

ಜಮೀನುದಾರ ಮತ್ತು ಗೇಣಿದಾರರ ನಡುವಿನ ಸಂಬಂಧದಲ್ಲಿ ರಾಜಕೀಯ ಪಕ್ಷಗಳು ತಲೆತೂರಿಸಿ, ತಮ್ಮ ಅನುಕೂಲಕ್ಕಾಗಿ ಬಳಸುವಂಥ ಸಂದರ್ಭದಲ್ಲಿ, ಎಲ್ಲ ಪಕ್ಷಗಳ ನಡುವೆ ಅವರು ಫುಟ್‌ಬಾಲಿನಂತಾಗುವುದಕ್ಕೆ ಸಂಶಯವಿಲ್ಲ. ಆದ್ದರಿಂದ ಆದಷ್ಟು ಶೀಘ್ರ ತೀರ್ಮಾನ ಕೈಗೊಂಡರೆ ಒಳಿತು.

## ಭರವಸೆಯನ್ನು ಈಡೇರಿಸಬೇಕು

ಯೋಜನಾ ಆಯೋಗದ ನಿರ್ದೇಶನದಂತೆ, ಭೂಮಸೂದೆಯನ್ನು ಮೊದಲ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿಯೇ ಕಾರ್ಯಗತಗೊಳಿಸಬೇಕಾಗಿದ್ದು, ಪ್ರಸಕ್ತ ಪಂಚವಾರ್ಷಿಕ ಯೋಜನೆಯಲ್ಲಿ ಇದೀಗ ಕೇವಲ ಒಂದು ವರ್ಷ ಮಾತ್ರ ಬಾಕಿ ಉಳಿದಿರುತ್ತದೆ. ಜಮೀನುದಾರನಲ್ಲಿರುವ ಸರ್ವಸರ್ವಸ್ವವನ್ನು ನಾವು ಕಿತ್ತುಕೊಳ್ಳಬೇಕೆಂಬ ಇರಾದೆಯಿಂದಿರುವುದಲ್ಲ ಈ ಮಸೂದೆ. ಭಾರತದ ಜನತೆಯ ಜೀವನ ಮಟ್ಟವನ್ನು ಸುಧಾರಿಸುವ ಹಿನ್ನೆಲೆಯಲ್ಲಿ, ಜನಸಂಖ್ಯೆಯ ಬಹುಪಾಲು ರೈತರೇ ಇರುವುದರಿಂದ, ಅವರು ತಮ್ಮ ಆದಾಯವನ್ನು ಹೆಚ್ಚಿಸಿಕೊಂಡಾಗ ತನ್ನಿಂದ ತಾನೆ ಸುಧಾರಿತ ರಾಜ್ಯದ ಕಲ್ಪನೆ ಮಾಡುವುದಕ್ಕೆ ಸಾಧ್ಯ. ತಮ್ಮ ದುಡಿತದ ಪ್ರಮುಖವಾದ ಭಾಗವನ್ನು ಅನುಭೋಗಿಸುವ ಹಕ್ಕು ರೈತರಿಗಿದೆ ಎಂದು ಭಾವಿಸುವುದು ಸಹಜವೇ.

ಸ್ವಾಮೀ, ನಾನು ಹೇಳುವುದಿಷ್ಟೇ: ನಮಗೆ ಜಮೀನುದಾರರ ವಿರುದ್ಧ ಯಾವುದೇ ಭಾವನೆ ಇಲ್ಲ ಅಥವಾ ಇದು ಮುಂಬರುವ ಚುನಾವಣೆಯನ್ನು ದೃಷ್ಟಿಯಲ್ಲಿಕೊಂಡು ಮಾಡುವಂಥ ಕಾರ್ಯವೂ ಅಲ್ಲ– ಯಾಕೆಂದರೆ, ನಮ್ಮಲ್ಲಿ ಅನೇಕರು ಮುಂದಿನ ಚುನಾವಣೆಯಲ್ಲಿ ಸ್ಪರ್ಧಿಸದೇ ಇರಬಹುದು – ಇದು ಯಾಕೆಂದರೆ, ಒಮ್ಮೆ ನಾವು ಸಾಮಾಜಿಕ ನ್ಯಾಯವನ್ನು ಒದಗಿಸುತ್ತೇವೆ ಎಂದು ಭರವಸೆಯನ್ನು ನೀಡಿದ ಬಳಿಕ ನಾವು ಆ ಭರವಸೆಯನ್ನು ಈಡೇರಿಸುವ ನಿಟ್ಟಿನಲ್ಲಿ ಬದ್ಧರಾಗಿರಬೇಕಾಗಿದೆ–ಎಂದಷ್ಟೇ ನಾನು ಹೇಳುವುದು.

***

## ವಿದ್ಯುಚ್ಛಕ್ತಿ ಮತ್ತು ಬೇಡಿಕೆಗಳು

# ವಿದ್ಯುತ್ ಯೋಜನೆಗಳ ಮೇಲೆ ಬಂಡವಾಳ ಹೂಡಿಕೆ

## 16 ಮಾರ್ಚ್ 1955

**ಶ್ರೀ ಅನಂತ ಪೈ:** ಸಭಾಧ್ಯಕ್ಷರೇ, ಸುಂದರವಾದ ತಮಿಳು ಭಾಷಣವನ್ನು ಕೇಳಿದ ಬಳಿಕ ನನ್ನನ್ನು ಭಾಷಣ ಮಾಡಲು ಕರೆಯಲಾಗಿದೆ. ಇಲ್ಲಿ ತಮ್ಮ ಪ್ರದೇಶದ ಭಾಷೆಯಲ್ಲಿ ಮಾತನಾಡಲು ಸಾಧ್ಯವಾಗಿರುವ ಸದಸ್ಯರ ಬಗೆಗೆ ನನಗೆ ಅಸೂಯೆಯಾಗುತ್ತಿದೆ. ನನಗೂ ನನ್ನ ಸ್ಥಳೀಯ ಭಾಷೆ ಕನ್ನಡದಲ್ಲಿ ಮಾತನಾಡಲು ಅಷ್ಟೇ ಉತ್ಸುಕತೆ ಇದೆ. ನನ್ನ ಆತಂಕವೆಂದರೆ ಮಾನ್ಯ ಸಚಿವರಿಗೆ ನನ್ನ ಭಾಷೆ ಅರ್ಥವಾಗುವುದಿಲ್ಲವಲ್ಲ? ನನ್ನ ಜಿಲ್ಲೆಗೆ ಸಲ್ಲಬೇಕಾದ ಸವಲತ್ತುಗಳನ್ನು ಅವರಿಗೆ ಮನದಟ್ಟು ಮಾಡಿ ಸರಕಾರ ಅದನ್ನು ಕಾರ್ಯ ರೂಪಕ್ಕೆ ತರುವಂತೆ ಮಾಡಬೇಕಾಗಿರುವುದರಿಂದ ನನ್ನ ಆಸೆಯನ್ನು ಅಲ್ಲಿಗೇ ಬಿಡಬೇಕಾಯಿತು. ಆದ್ದರಿಂದ ನಾನು ಕನ್ನಡದಲ್ಲಿ ಮಾತನಾಡಲು ಇಷ್ಟಪಡುವುದಿಲ್ಲ.

ಮಾನ್ಯರೇ, ವಿದ್ಯುಚ್ಛಕ್ತಿಯ ಪರ್‌ಕ್ಯಾಪಿಟಾ ಉತ್ಪಾದನೆ ಮತ್ತು ಪರ್‌ಕ್ಯಾಪಿಟಾ ಬಳಕೆಯ ಬಗೆಗೆ ನಾವು ಪರದೇಶಗಳ ಹೇಳಿಕೆಗಳನ್ನು ಕೇಳುತ್ತಿರುತ್ತೇವೆ. ಆ ದೃಷ್ಟಿಯಿಂದ ನಮ್ಮ ಸಾಧನೆ ಆತ್ಮ ಪ್ರಶಂಸೆ ಮಾಡಿಕೊಳ್ಳುವ ಮಟ್ಟಕ್ಕೇನೂ ಸಾಗಿಲ್ಲವೆಂದು ಹೇಳಬೇಕಾಗುತ್ತದೆ. ಅಂತಹ ಸಾಧನೆಗೆ ನಾವು ಏನೂ ಮಾಡಿಲ್ಲ ಎನ್ನುವುದಕ್ಕಿಂತ, ನಾವು ಬಹಳಷ್ಟು ದೂರ ಕ್ರಮಿಸಬೇಕಾಗಿದೆ ಎಂದು ಹೇಳಿದರೂ ತಪ್ಪಾಗದು. ಈ ವರ್ಷಗಳಲ್ಲಿ ಸರಕಾರ ಏನು ಸಾಧಿಸಿದೆ, ಹಿಂದೆ ಏನು ಸಾಧಿಸಿತ್ತು ಮತ್ತು ಮುಂದೆ ಯಾವ ರೀತಿಯಲ್ಲಿ ಸಾಧನೆಯ ಗುರಿ ಇಟ್ಟುಕೊಂಡಿದೆ– ಆ ಕುರಿತು ಹೆಮ್ಮೆ ಪಡಬೇಕು. ಆದರೆ ಪ್ರತಿಯೊಂದು ಪ್ರದೇಶದಲ್ಲೂ ಸರಕಾರ ಎಷ್ಟು ಬೇಕೋ ಅಷ್ಟೆಲ್ಲ ಮಾಡಿದೆ ಎಂದು ಹೇಳುವುದಕ್ಕಾಗುವುದಿಲ್ಲ. ಈ ಸಲದ ಆಯವ್ಯಯದಲ್ಲಿ ರೂ.7ಕೋಟಿಯನ್ನು ಸೂಕ್ತವಾಗಿ ನಿಭಾಯಿಸುತ್ತದೆ ಎನ್ನುವುದು ಈ ನಿಟ್ಟಿನಲ್ಲಿರುವ ಜೀವಂತ ನಿದರ್ಶನ ಎನ್ನಬಹುದು. ಇಲ್ಲೂ ನಾವು ಕೊಂಚ ಜಾಗೃತರಾಗಿರಬೇಕಾಗಿದೆ. ಓರ್ವ ಸದಸ್ಯರು ಸೂಕ್ತವಾದುದನ್ನೇ ಹೇಳಿದರು– ವಿದ್ಯುಚ್ಛಕ್ತಿ ಕೊಡಮಾಡುವ ಜತೆಜತೆಗೆ ಉದ್ಯೋಗವನ್ನೂ ಕಲ್ಪಿಸಿಕೊಡಬೇಕು ಎಂಬುದಾಗಿ.

ಮಾನ್ಯರೇ, ನಾವು ಕೋಟಿಗಟ್ಟಲೆ ಹಣವನ್ನು ವಿದ್ಯುಚ್ಛಕ್ತಿಯ ಮೇಲೆ ವ್ಯಯಮಾಡಿದರೆ, ಮತ್ತು ಆ ಹಣವನ್ನು ಉದ್ಯೋಗಾವಕಾಶಕ್ಕೆ ಅನುವು ಮಾಡಿಕೊಡದಿದ್ದರೆ, ಆ ಕುರಿತು ನಾವು ವಿಮರ್ಶೆ ಮಾಡುವುದು ಅವಶ್ಯವಿದೆ.

ಒಂದು ವೇಳೆ ಇದೇ ಹಣವನ್ನು ಜಪಾನಿನಲ್ಲಿ ಯಾವುದೇ ಸಂಸ್ಥೆಯ ಮೇಲೆ ಹೂಡಿದ್ದಾದಲ್ಲಿ ಜಪಾನೀ ಸರಕಾರ ಒಂದಷ್ಟು ಜನರಿಗೆ ಉದ್ಯೋಗಾವಕಾಶವನ್ನು ಒದಗಿಸಿಕೊಡಲು ಶಕ್ತವಾಗುತ್ತಿತ್ತು. ಯಾಕೆಂದರೆ ವಿದ್ಯುಚ್ಛಕ್ತಿಗೆ ಬೇಕಾದ ಯಾವುದೇ ಯಂತ್ರದ ಯಾವುದೇ ಭಾಗವನ್ನು ಆ ದೇಶದಲ್ಲೇ ತಯಾರು ಮಾಡಿರುತ್ತಾರೆ. ಇದರರ್ಥ ಬಹಳಷ್ಟು ಜನರಿಗೆ ಉದ್ಯೋಗಾವಕಾಶವಾದಂತೆ.

ವಿದ್ಯುಚ್ಛಕ್ತಿ ಬೇಡಿಕೆಯ ಮೇಲೆ ಗಮನ ಸೆಳೆದಾಗ, ನಾನು ನನ್ನದೇ ಜಿಲ್ಲೆಯ ಉಡುಪಿ ಪೇಟೆಯ ವಿದ್ಯುಚ್ಛಕ್ತಿ ಸರಬರಾಜಿನ ಕುರಿತು ಗಮನಸೆಳೆಯ ಬಯಸುತ್ತೇನೆ. ಸರಕಾರ ಒಂದು ಖಾಸಗಿ ಸಂಸ್ಥೆಗೆ ಅದನ್ನು ನೀಡಿ ಅದರ ಮೇಲೆ ಒಂದಿಷ್ಟು ಹಣವನ್ನು ಹೂಡಿದೆ. ಇಂದು ಪ್ರತಿ ಯೂನಿಟ್ ವಿದ್ಯುಚ್ಛಕ್ತಿಗೆ ನಮ್ಮಿಂದ 9ಆಣೆಯನ್ನು ವಸೂಲು ಮಾಡಲಾಗುತ್ತದೆ. ಇದು ಬಹಳ ದುಬಾರಿ ದರ ಎಂದು ಹೇಳಬೇಕಾಗುತ್ತದೆ. ಖಾಸಗಿ ಕಂಪೆನಿಗೆ ನಾವು 12ಆಣೆ ನೀಡಬೇಕಾದ್ದಲ್ಲಿ ನಾವು ನಿಮ್ಮಿಂದ ಬರೀ ಒಂಭತ್ತು ಆಣೆಯನ್ನು ಪಡೆಯುತ್ತಿದ್ದೇವೆ ಎಂದು ಸರಕಾರ ಹೇಳಬಹುದು. ಮಾನ್ಯರೇ, ಅದು ಒಂದು ಸಮಜಾಯಿಷಿ ಅಲ್ಲ. ಆ ಪ್ರದೇಶದಲ್ಲಿ ವಿದ್ಯುಚ್ಛಕ್ತಿ ಉತ್ಪಾದನೆಯ ವೆಚ್ಚ ಹೆಚ್ಚೆಂದು ಹೇಳಬಹುದು. ಅದು ಸರಕಾರ ನೋಡಿಕೊಳ್ಳಬೇಕಾದ ಅಂಶವಾಗಿದ್ದು, ನಮ್ಮ ಜನರಿಗೆ 9ಆಣೆಗಿಂತ ಕಡಿಮೆ ದರದಲ್ಲಿ ವಿದ್ಯುತ್ ಸರಬರಾಜು ಮಾಡಲು ಸಾಧ್ಯವಿಲ್ಲವೇ ಎಂದು ಪರಿಶೀಲಿಸಬೇಕಾಗಿದೆ. ಬಳಕೆ ಹೆಚ್ಚಾಗಿರಲಿ ಕಡಿಮೆಯಾಗಿರಲಿ, ಅದೇ ಸಿಬ್ಬಂದಿಗಳನ್ನು ನೇಮಿಸಲಾಗಿದೆ.

ಜೋಗ ಜಲಪಾತದ ವಿದ್ಯುಚ್ಛಕ್ತಿ ನಮಗೆ ಲಭ್ಯವಾಗುವುದಕ್ಕೆ ಮೊದಲೇ ಮಾನ್ಯ ಮಂತ್ರಿಗಳು ನಮ್ಮ ಯೂನಿಟ್ ದರವನ್ನು ಕಡಿಮೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ವಿದ್ಯುಚ್ಛಕ್ತಿ ಇಲಾಖೆಯನ್ನು ಒಂದು ವಾಣಿಜ್ಯ ಸಂಸ್ಥೆಯಾಗಿ ಬಳಸಬೇಕೆಂಬ ಉದ್ದೇಶ ಸರಕಾರದದ್ದ ಪಕ್ಷದಲ್ಲಿ, ಜನ ಹೆಚ್ಚು ಹೆಚ್ಚು ವಿದ್ಯುತ್ತನ್ನು ಬಳಸುವಂತೆ ಪ್ರೋತ್ಸಾಹಿಸಬೇಕು. ಜನರು ಹೆಚ್ಚು ಹೆಚ್ಚು ವಿದ್ಯುತ್ತನ್ನು ಬೇರೆ

ಬೇರೆ ಉಪಯೋಗಕ್ಕೆ ಬಳಸದೇ ಹೋದಲ್ಲಿ ಸರಕಾರದ ಈ ಗ್ರಹಿಕೆ ಈಡೇರಲು ಸಾಧ್ಯವಾಗದು. ಅದೇ ವೇಳೆ ಸರಕಾರ ಏನಾದರೂ ಮಿತವ್ಯಯವನ್ನು ಕಾಣಬಹುದು. ಕೆಲವೊಂದು ಕೆಲಸಗಳಲ್ಲಿ ಸುಮಾರು 10%ದಷ್ಟು ಆದಾಯ ಬರಬೇಕೆಂದು ಹೇಳಲಾಗಿದೆ. ಇದರಲ್ಲಿ ಮೂರುವರೆ ಶೇಕಡಾ ಬಡ್ಡಿಯನ್ನು ತೆರಬೇಕೆಂದು ಮನವರಿಕೆ ಮಾಡಿಕೊಳ್ಳುತ್ತಾ, ಉಳಿದ ಅಂಶವನ್ನು ಇನ್ನಿತರ ವೆಚ್ಚಗಳಿಗೆ ಉಪಯೋಗಿಸುವುದು ವಿಹಿತ. ಇನ್ನಿತರ ವೆಚ್ಚಗಳನ್ನು ಯಾಕೆ ಕಡಿಮೆ ಮಾಡಬಾರದು? ಅದಕ್ಕೋಸ್ಕರವೇ ನಾನು ಹೇಳುವುದು, ಇಲ್ಲಿ ಮಿತವ್ಯಯ ಸಾಧಿಸುವುದರಿಂದ ಬಳಿಕ ದರವನ್ನು ಕಡಿತಗೊಳಿಸಲು ಸಾಧ್ಯ ಅಂತ. ಈ ನಿಟ್ಟಿನಲ್ಲಿ ಟ್ರಾವಂಕೂರ್ ಸರಕಾರ ಮಾಡಿದ ಮಾದರಿಯನ್ನು ಗಣನೆಗೆ ತೆಗೆದುಕೊಳ್ಳಬೇಕು. ಅವರು ವಿದ್ಯುತ್ ಬಳಕೆಗೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ಆದಾಯವನ್ನು ಏಳುವರೆ ಶೇಕಡಾದಿಂದ 5ಶೇಕಡಾಕ್ಕೆ ಇಳಿಸಿದ್ದಾರೆ. ನಾನಿಷ್ಟೇ ಹೇಳುವುದು, ಸರಕಾರ ಮೇಲ್‌ವೆಚ್ಚ ಖರ್ಚುಗಳನ್ನು ಕಡಿಮೆ ಮಾಡುವುದರ ಮೂಲಕ ಮಿತವ್ಯಯವನ್ನು ಸಾಧಿಸಿ, ದರಗಳಲ್ಲಿ ಕಡಿತ ತೋರಿಸಿದಲ್ಲಿ ಜನರು ಹೆಚ್ಚು ಹೆಚ್ಚು ವಿದ್ಯುತ್ ಬಳಸುವಂತೆ ಪ್ರೋತ್ಸಾಹಿಸಿದಂತಾಗುವುದಲ್ಲದೆ, ಸರಕಾರ ತನ್ನ ಗುರಿಯನ್ನು ಮುಟ್ಟಲು ಸಾಧ್ಯವಾಗುವುದು.

**ತಾತ್ಕಾಲಿಕ ಅಧ್ಯಕ್ಷರು:** (ಶ್ರೀ ಪಿ.ಜಿ.ಕರುತ್ತಿರುಮಾನ್): ಮಾನ್ಯ ಸದಸ್ಯರಿಗೆ ಇನ್ನು ಕೇವಲ ಒಂದು ನಿಮಿಷ ಮಾತ್ರ ಬಾಕಿ ಉಳಿದಿರುವುದು.

**ಶ್ರೀ ಟಿ.ಅನಂತ ಪೈ:** ಧನ್ಯವಾದಗಳು ಸ್ವಾಮಿ. ಈ ಒಂದು ನಿಮಿಷದಲ್ಲಿ ಸರಕಾರ ದ.ಕ.ಜಿಲ್ಲೆಗೆ ಜೋಗ್ ಜಲಪಾತದಿಂದ ವಿದ್ಯುತ್ ಸರಬರಾಜಿಗೆ ಕೈಗೊಂಡ ಅತ್ಯುತ್ತಮ ಕಾರ್ಯಗಳ ಕುರಿತಾಗಿ ಮಾತನಾಡಲು ಬಯಸುತ್ತೇನೆ. ಸರಕಾರ ಇದಕ್ಕೆ ಸಂಬಂಧಿಸಿದ ಏನೇನು ಕಾರ್ಯಕ್ರಮಗಳನ್ನು ಮಾಡಲು ಬಾಕಿ ಇದೆಯೋ ಅವನ್ನೆಲ್ಲ ಅತೀ ಶೀಘ್ರದಲ್ಲಿ ಪೂರೈಸಿಕೊಡಬೇಕೆಂದು ನಾನು ವಿನಂತಿಸಿಕೊಳ್ಳುತ್ತೇನೆ. ಈ ಕೆಲಸವನ್ನು ಮೈಸೂರು ಸರಕಾರದ ಸಹಯೋಗದಲ್ಲಿ ಮಾಡಬೇಕಾದುದು ಅನಿವಾರ್ಯವೆಂದು ನನಗನಿಸುತ್ತಿದೆ. ಅಲ್ಲಿನ ದ.ಕ.ಜಿಲ್ಲೆಯ ಪ್ರತಿನಿಧಿಗಳು ಇದು ಆದಷ್ಟು ಬೇಗನೆ ಕೈಗೊಳ್ಳಲಾಗುವುದೆಂದು ಹೇಳಿರುತ್ತಾರೆ. ತಮ್ಮ ಕಾರ್ಯಕ್ರಮದ ಪ್ರಕಾರ ನಮಗೆ 1956ರ ಮೊದಲ ಮೂರು ತಿಂಗಳ ಅವಧಿಯಲ್ಲೇ ವಿದ್ಯುಚ್ಛಕ್ತಿಯನ್ನು ನೀಡಲು ಸಾಧ್ಯವೆಂದು ಭರವಸೆಯಿತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ನಮ್ಮ ಸರಕಾರ ಗ್ರಾಮೀಣ ವಿದ್ಯುಚ್ಛಕ್ತಿ ಯೋಜನೆಯ ಅನುಷ್ಠಾನವನ್ನು

ಮುಂದುವರಿಸಬಹುದೆಂದು ತೋರುತ್ತದೆ. ಅವರು ಜೋಗ ವಿದ್ಯುತ್‌ಗಾಗಿ ಕಾಯುವ ಅವಶ್ಯಕತೆ ಕಂಡುಬರುವುದಿಲ್ಲ. ಮಾನ್ಯ ಲೋಕೋಪಯೋಗಿ ಸಚಿವರು ದ.ಕ.ಜಿಲ್ಲೆಯಲ್ಲಿ ವಿದ್ಯುಚ್ಛಕ್ತಿಯ ಕೆಲಸ ಕಾರ್ಯಗಳನ್ನು ಕೈಗೊಳ್ಳಲು ಜೋಗ್ ವಿದ್ಯುತ್ ಸರಬರಾಜಿಗೆ ಕಾಯುವ ಅವಶ್ಯಕತೆಯಿಲ್ಲ ಎಂದು ಹೇಳಬಯಸುತ್ತೇನೆ. ಮಾನ್ಯ ಸಭಾಧ್ಯಕ್ಷರೇ, ಧನ್ಯವಾದಗಳು.

***

## ನೀರಾವರಿ ಬೇಡಿಕೆ

## ನೀರಾವರಿ ಯೋಜನೆಗಳ ಮೇಲೆ ಬಂಡವಾಳ ಹೂಡಿಕೆ – ಚರ್ಚೆ

### 10 ಜೂನ್ 1955

**ಶ್ರೀ ಟಿ.ಎ.ಪೈ:** ಸ್ವಾಮೀ, ಮಾನ್ಯ ಮಂತ್ರಿಗಳಲ್ಲಿ ಒಂದು ವಿಷಯದ ಬಗ್ಗೆ ಸ್ಪಷ್ಟೀಕರಣವನ್ನು ನಾನು ಯಾಚಿಸುತ್ತಿದ್ದೇನೆ. ಕಳೆದ ವರ್ಷ ನಾನು ದ.ಕ. ಜಿಲ್ಲೆಯಲ್ಲಿ ನೀರಾವರಿ ಯೋಜನೆಗಳನ್ನು ಅನುಷ್ಠಾನಕ್ಕೆ ತರಬೇಕೆಂದು ಆಗ್ರಹ ಪಡಿಸಿದಾಗ, ಸರಕಾರ ಕೆಲವು ಲಕ್ಷ ರೂಪಾಯಿಗಳನ್ನು ಪಶ್ಚಿಮ ಕರಾವಳಿಗೆ ಮೀಸಲಾಗಿಡಲಾಗಿದೆ ಎಂದು ಉತ್ತರಿಸಿದ್ದು ನೆನಪಿರಬಹುದು. ಪಶ್ಚಿಮ ಕರಾವಳಿಯ ಜಿಲ್ಲೆಗಳ ಬೇಡಿಕೆಗಳನ್ನು ಈಡೇರಿಸುವಲ್ಲಿ ಸರಕಾರ ತತ್ಪರವಾಗಿದೆ ಎಂಬುದು ನನಗೆ ಸಂತಸ ತಂದಿದೆ. ಆದರೆ, ಈ ವಿಷಯದಲ್ಲಿ ಮಲಬಾರ್ ಮತ್ತು ದ.ಕ.ಜಿಲ್ಲೆಯನ್ನು ಜತೆಯಾಗಿ ಕಲ್ಪಿಸಿ, ಕೆಲವು ಲಕ್ಷ ರೂಪಾಯಿಗಳನ್ನು ವಿನಿಯೋಗಿಸಲಾಗಿದೆ ಎನ್ನುವುದರಲ್ಲಿ ಏನೂ ತಾತ್ಪರ್ಯವಿಲ್ಲವೆಂದು ನಾನು ಹೇಳುತ್ತೇನೆ. ಮಲಬಾರಿನ ಅನೇಕ ಯೋಜನೆಗಳು ಇಂದು ಬಹಳ ಮುಂದಿನ ಹಂತಕ್ಕೆ ತಲುಪಿವೆ. ಅವುಗಳ ಪರೀಕ್ಷೆ ಮತ್ತು ಕಾರ್ಯನಿರ್ವಹಣೆಯನ್ನು ಬಹಳ ಹಿಂದೆಯೇ ಕೈಗೊಳ್ಳಲಾಗಿತ್ತು.

### ನಮ್ಮಲ್ಲೂ ಇರಲಿ

ಎರಡನೇ ಪಂಚವಾರ್ಷಿಕ ಯೋಜನೆಯಲ್ಲೂ ಮಲಬಾರಿಗೋಸ್ಕರ ಕೆಲವು ಯೋಜನೆಗಳನ್ನು ಹಮ್ಮಿ ಕೊಳ್ಳಲಾಗಿದೆ ಎಂದು ನನಗೆ ತಿಳಿದು ಬಂದಿದೆ.

ದ.ಕ.ಜಿಲ್ಲೆಯ ಸಮಸ್ಯೆಗಳು ವಿಶೇಷವಾಗಿದೆ ಎಂಬ ಭಾವನೆ ಎಲ್ಲರಲ್ಲೂ ಮೂಡುವಂಥ ಸನ್ನಿವೇಶ ಒದಗಿದೆ ಎಂದು ಭಾವಿಸುತ್ತೇನೆ. ಆದರೆ, ನಾನು ಹೇಳಬಯಸುವುದಿಷ್ಟೇ: ಮಲಬಾರ್ ಮತ್ತು ದ.ಕ.ಜಿಲ್ಲೆಗಳ ಸಮಸ್ಯೆಗಳು ಒಂದೇ ತೆರನಾಗಿವೆ. ಮಲಬಾರಿನಲ್ಲಿ ಕೆಲವು ಯೋಜನೆಗಳನ್ನು ಹಮ್ಮಿಕೊಳ್ಳುವ ಸಂದರ್ಭ ದ.ಕ.ಜಿಲ್ಲೆಯಲ್ಲೂ ಒಂದಿಷ್ಟು ಯೋಜನೆಗಳನ್ನು ಕಾರ್ಯಗತಗೊಳಿಸಬಹುದಿತ್ತು. ಇಂಜಿನಿಯರಿಂಗ್ ಇಲಾಖೆಯುವರು ನೀರಾವರಿ ಅನುಕೂಲಗಳನ್ನು ಕಲ್ಪಿಸಿಕೊಡುವ ನಿಟ್ಟಿನಲ್ಲಿ ಯಾವುದೇ ವೀಕ್ಷಣೆಗಳನ್ನು ಕೈಗೊಂಡಿಲ್ಲವೆಂದು ನನಗನಿಸುತ್ತಿದೆ. ಮಾನ್ಯ ಮಂತ್ರಿಗಳಲ್ಲಿ ನನ್ನ ನಿವೇದನೆ ಏನಂದರೆ, ದ.ಕ. ಜಿಲ್ಲೆಯಲ್ಲೂ ಇನ್ನಷ್ಟು ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಮಾನ್ಯ ಮಂತ್ರಿಗಳು ಇಂಜಿನಿಯರಿಂಗ್ ಇಲಾಖೆಗೆ ಸೂಕ್ತ ಆದೇಶವನ್ನು ನೀಡಿ ಸಹಕರಿಸಬೇಕೆಂದು ಪ್ರಾರ್ಥಿಸುತ್ತೇನೆ.

***

## ಭಾಷಾವಾರು ಪ್ರಾಂತ್ಯ ರಚನೆಯ ಆಯೋಗ

## ವರದಿಯ ಮೇಲಿನ–ಚರ್ಚೆ

## 23 ನವೆಂಬರ್ 1955

**ಶ್ರೀ ಅನಂತ ಪೈ:** ಉಪಸಭಾಪತಿಗಳೇ, ಮಹಾ ಮದರಾಸು ಸಂಸ್ಥಾನದ ಪುನರ್ಘಟನೆ ಇದೀಗ ನಾವು ಎಣಿಸಿರುವುದಕ್ಕಿಂತ ಬೇಗನೇ ಆಗುವುದೆಂದು ತಿಳಿಯಲಾಗಿದೆ. ದ.ಕ.ಜಿಲ್ಲೆ ಮತ್ತು ಮಲಬಾರ್ ಈ ಸಂಸ್ಥಾನದಲ್ಲಿ ಶತಮಾನಗಳ ಕಾಲ ಇದ್ದಾಗ್ಯೂ, ತನ್ನದೇ ರೀತಿಯಲ್ಲಿ ಸಂಸ್ಥಾನಕ್ಕೆ ಕೊಡುಗೆಯನ್ನಿತ್ತು ಇದೀಗ ಹೊರಗೆ ಹೋಗುತ್ತಿದೆ. ಇದು ಎಷ್ಟೇ ವಿಷಾದನೀಯವಾಗಿದ್ದರೂ, ಈ ಭಾಷಾವಾರು ರಾಜ್ಯ ಸಂಘಟನೆಯ ಕಾರ್ಯದಿಂದ ವಿಚಲಿತರಾಗುವಂಥದ್ದು ಹೆಡ್ಡತನ. ಯಾಕಂದರೆ, 20–25 ವರ್ಷಗಳ ಹಿಂದೆಯೇ ಈ ಕುರಿತಂತೆ ನಮ್ಮ ನಾಯಕರು ಮತ್ತು ರಾಜಕಾರಣಿಗಳು ಈ ವಿಷಯವನ್ನೇ ಹಿಡಿದುಕೊಂಡು ಜನರನ್ನು ಹುರಿದುಂಬಿಸುತ್ತಿದ್ದರೆಂಬುದನ್ನು ಮರೆಯಬಾರದು.

## ಕೆಟ್ಟ ವ್ಯವಹಾರದ ಅತ್ಯುತ್ತಮ ದಂಥೆ

ಈ ಸದನದಲ್ಲಿ ನಾವೆಲ್ಲಾ ಭಾರತೀಯರು ಎಂಬ ಮಾತಿನಿಂದ ಪ್ರಾರಂಭವಾದ ಚರ್ಚೆ ಕಟ್ಟಕಡೆಗೆ, ಕನ್ನಡಿಗರು, ಮಲೆಯಾಳಿಗಳು, ತಮಿಳರು ಎನ್ನುವ ಮಟ್ಟಕ್ಕೆ ಇಳಿದದ್ದು ನೋಡಿದ್ದೇವೆ. ಈ ಸಮಸ್ಯೆಯನ್ನು ಹೀಗೆಯೇ ಎದುರಿಸುವುದು ವಿಹಿತ, ಯಾಕಂದರೆ, ನಮ್ಮ ಭೌತಿಕ ಸಂಘಟನೆಗಿಂತ, ಮಾನಸಿಕ ಸಂಘಟನೆಯಲ್ಲಿ ನಾವೆಲ್ಲರೂ ಒಂದೇ ದೇಶದ ಪ್ರಜೆಗಳು ಎಂಬ ಭಾವನೆ ಸ್ಫುಟಗೊಂಡರೆ ಸಾಕು. ರಾಜ್ಯ ರಚನೆಯ ಆಯೋಗದ ವರದಿ, ಅತೀ ಕೆಟ್ಟ ವ್ಯವಹಾರದ ಅತ್ಯುತ್ತಮ ದಂಥೆಯನ್ನು ಪೂರೈಸಿದೆ ಎಂದು ನಾನು ಹೇಳಬೇಕಾಗುತ್ತದೆ. ಪ್ರತಿ ಪ್ರಾಂತ್ಯಕ್ಕೂ ಅವರು ಅಲ್ಲೊಂದು ಇಲ್ಲೊಂದು ಸಮಸ್ಯೆಗಳನ್ನು ಬಿಟ್ಟುಕೊಟ್ಟಿದ್ದಾರೆ, ಮತ್ತು ನನಗೆ ಖಂಡಿತವಾಗಿಯೂ ಗೊತ್ತು ಅವರು ಈ ತೀರ್ಮಾನಗಳನ್ನು ಕೈಗೊಂಡಿದ್ದರೂ, ನಾವು ನಮ್ಮ ನಮ್ಮೊಳಗೆ ಇಂತಹ ವಿಷಯಗಳನ್ನು ಎತ್ತಿ ಹಿಡಿದೇ ಇರುತ್ತಿದ್ದೆವು ಅಂತ.

## ಪರಶುರಾಮ ಮಲೆಯಾಳಿಯೇ?

ನಮ್ಮ ಗಡಿಪ್ರದೇಶಗಳು ಎಲ್ಲೆಲ್ಲಿ ಇದ್ದವು ಎಂಬುದನ್ನು ಮನವರಿಕೆ ಮಾಡಿಕೊಳ್ಳುವ ಸಲುವಾಗಿ, ನಮ್ಮಲ್ಲಿ ಅನೇಕರು ಕರ್ನಾಟಕ, ತಮಿಳುನಾಡು ಮತ್ತು ಮಲಬಾರಿನ ಇತಿಹಾಸವನ್ನು ಅಧ್ಯಯನ ಮಾಡುವುದಕ್ಕೆ ತೊಡಗಿದ್ದೇವೆ.

ನಮ್ಮ ಮಲಬಾರಿನ ಮಿತ್ರರೊಬ್ಬರು ತಮ್ಮ ಕೇರಳದ ಪರವಾಗಿ, ಅದು ಗೋಕರ್ಣದ ತನಕ ಇತ್ತೆಂದು ವಾದಿಸಿದ್ದನ್ನು ಕೇಳಿದೆ. ಪರಶುರಾಮನೂ ಮಲೆಯಾಳಿ ಆಗಿದ್ದನೇ ಎಂದು ನಾನು ಅವರಿಗೆ ಪ್ರಶ್ನೆ ಹಾಕಿದೆ! ಇತಿಹಾಸವನ್ನು ಕೆದಕಿದರೆ, ಸ್ವಾಮೀ ನಿಮಗೆ ಅಚ್ಚರಿಯಾಗಬಹುದು, ಕರ್ನಾಟಕದಲ್ಲಿ ಪುಲಿಕೇಶಿ ಎಂಬ ರಾಜನಿದ್ದು ಆತ ಹರ್ಷನನ್ನು ಸೋಲಿಸಿದ್ದ. ಆ ಕಾರಣಕ್ಕಾಗಿ ನಾವು ಉತ್ತರ ಭಾರತವನ್ನು ನಮ್ಮ ಹಕ್ಕಿನದು ಅಂತ ಕೇಳಲು ಆಗುತ್ತದೆಯೇ? ಅಥವಾ ವಿಜಯನಗರ ಸಾಮ್ರಾಜ್ಯದ ಗಡಿಗಳು ನಮ್ಮ ಪರಿಧಿಯೊಳಗೆ ಸೇರುತ್ತವೆಯೆಂದು ಹಕ್ಕು ಸಾಧಿಸುವುದಕ್ಕೆ ಬರುತ್ತದೆಯೇ? ಅಥವಾ ಟಿಪ್ಪುವಿನ ರಾಜ್ಯ ವಿಸ್ತಾರವನ್ನು ಪರಿಗಣಿಸಲು ಸಾಧ್ಯವೇ? ನಾವು ಒಂದು ಹಂತದವರೆಗೆ ನಮ್ಮ ಈ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವುದು ಅವಶ್ಯವೆಂದು ನನಗನಿಸುತ್ತಿದೆ.

## ಬಳ್ಳಾರಿ ವಿವಾದ ಸದ್ಯಕ್ಕೆ ಬೇಡ

ಕರ್ನಾಟಕ ರಾಜ್ಯ ರಚನೆಯ ಸಂದರ್ಭದಲ್ಲಿ ರಾಜ್ಯ ಸಂಘಟನಾ ಆಯೋಗ ನಾವು ನಮ್ಮೊಳಗೆ ಪರಿಹರಿಸಿಕೊಳ್ಳುವಂತೆ ನಮಗೆ ಎರಡು ಪ್ರಮುಖವಾದ ಸಮಸ್ಯೆಗಳನ್ನು ಬಿಟ್ಟುಹೋಗಿದ್ದಾರೆ– ಒಂದು ಬಳ್ಳಾರಿಯದ್ದು, ಇನ್ನೊಂದು ಕಾಸರಗೋಡಿನದ್ದು. ಮೊದಲನೆಯದಾಗಿ ಬಳ್ಳಾರಿಯ ಕುರಿತಂತೆ ನಾನು ಮತ್ತೆ ಅದನ್ನು ತೆರೆಯಲು ಇಚ್ಛಿಸುವುದಿಲ್ಲ. ಯಾಕೆಂದರೆ, ಈಗಾಗಲೇ ಬಹಳಷ್ಟು ಹೋರಾಟದೊಂದಿಗೆ ಅದು ಇದೀಗ ತಹಬಂದಿಗೆ ಬಂದಿದೆ. ಒಂದು ಗಡಿಸಮಸ್ಯೆಯನ್ನು ಸಾರ್ವಕಾಲಿಕವಾಗಿ ತೀರ್ಮಾನಿಸಿದ ಮೇಲೆ ಒಂದು ಹೋರಾಟದ ಮೂಲಕ ಸಮಸ್ಯೆಗೆ ಮತ್ತೆ ಜೀವಕೊಡಲು ಸಾಧ್ಯವಿದೆ ಎಂದಾದಲ್ಲಿ, ಗಡಿ ಭಾಗಗಳು ಸುರಕ್ಷಿತವಾಗಿರುವುದಿಲ್ಲ. ಮಾತ್ರವಲ್ಲ, ಅಲ್ಲಿನ ಜನರು ಒಂದಲ್ಲ ಒಂದು ಕಾರಣವಿಟ್ಟುಕೊಂಡು ಹೋರಾಟಮಾಡುವ ಮನಸ್ಸನ್ನು ಹೊಂದುವಂತಾಗುತ್ತದೆ. ಈ ಕಾರಣದಿಂದ ಮತ್ತು ಬಳ್ಳಾರಿಯ ಜನತೆ ಈಗಿರುವಂತೆ ಕರ್ನಾಟಕದ ಭಾಗವಾಗಿಯೇ ಮುಂದುವರಿಯಲು ಇಚ್ಛಿಸಿದಾದಲ್ಲಿ ಅದು ಹಾಗೆಯೇ ತೀರ್ಮಾನವಾಗಲಿ. ಮತ್ತು ಮತ್ತೆ ಗಡಿ ವಿವಾದ ಇರಬಾರದು.

## ಕಾಸರಗೋಡು ಸಮಸ್ಯೆ

ಗಡಿವಿವಾದ ಇದೇ ತೆರನಾಗಿ ಮುಂದುವರಿಯುತ್ತಾ ಹೋದಲ್ಲಿ ನಾವು ಎಲ್ಲಿಗೆ ಹೋಗಿ ತಲುಪುತ್ತೇವೆ ಎಂಬುದು ತಿಳಿಯಲಾಗದು. ಒಂದು ರಾಜ್ಯದ ವ್ಯಕ್ತಿ ಇನ್ನೊಂದು ರಾಜ್ಯದಲ್ಲಿ ಪರಕೀಯನಂತೆ ಇರಬೇಕೆಂದು ನೀವು ಭಾವಿಸುತ್ತೀರೇನು? ನನ್ನ ಅಭಿಪ್ರಾಯದ ಪ್ರಕಾರ ದೇಶದ ಯಾವುದೇ ಭಾಗದಲ್ಲಿ ಅತೀ ಹೆಚ್ಚಿನ ಜನ ವಾಸ್ತವ್ಯ ಇರಬಾರದು ಮತ್ತು ಯಾವುದೇ ಖಾಲಿ ಪ್ರದೇಶ ಜನ ವಸತಿ ಇಲ್ಲದೆ ಬರಡಾಗುವಂತೆ ಮಾಡಬಾರದು. ಹೀಗಾಗಿ ಜನನಿಬಿಡವಾದ ಕೇರಳದಂಥ ರಾಜ್ಯಗಳಿಂದ ಜನರ ವಲಸೆಗೆ ಅನುವು ಮಾಡಿಕೊಡಬೇಕು. ಮತ್ತು ಅಂತಹ ವಲಸೆಗೆ ಯಾವುದೇ ಮಾನಸಿಕ ತಡೆಯೂ ಇರಬಾರದು ಎಂಬುದು ನನ್ನ ಅಭಿಪ್ರಾಯ. ಇದೇ ಕಾರಣದಿಂದಲೇ ಇಡೀ ಕಾಸರಗೋಡು ತಾಲೂಕು ದ.ಕ. ಜಿಲ್ಲೆಯಲ್ಲೇ ಮುಂದುವರಿಯಬೇಕೆಂದು ನಾನು ಒತ್ತಾಯಿಸಿದ್ದು. ಈ ಮಾತನ್ನು ನಾನು ಹೇಳುವಾಗ ನನ್ನ ಅನೇಕ ಮಲೆಯಾಳಿ ಮಿತ್ರರು

ನನ್ನನ್ನು ಪರಿಹಾಸ್ಯ ಮಾಡಿದರು. ಇಡೀ ಕಾಸರಗೋಡು ತಾಲೂಕನ್ನು ನಾನು ನಮಗಿರಬೇಕೆಂದಾಗ ಅದು ವಿಚಿತ್ರವೆಂದು ಅವರು ಬಗೆದಿರಬೇಕು. ಅದೇ ವೇಳೆ ಇಡೀ ಕಾಸರಗೋಡು ತಾಲೂಕು ತಮಗೆ ಬೇಕು ಎಂದಾಗ ಅದು ನ್ಯಾಯಬದ್ಧವಲ್ಲವೆಂದು ಅವರು ಯಾಕೆ ಗಣಿಸುತ್ತಿಲ್ಲ? ಯಾಕಂದರೆ ಅವರು ಈ ವಿಚಾರವನ್ನು ಬರೀ ಮಲೆಯಾಳೀ ದೃಷ್ಟಿಯಿಂದ ಮಾತ್ರ ನೋಡುತ್ತಿದ್ದಾರೆ. ಈ ವಿಷಯದ ಕುರಿತು ಪ್ರಸ್ತಾಪಿಸಿದ ಆಯೋಗ, ದ.ಕ.ಜಿಲ್ಲೆಯ ಕನ್ನಡಿಗರ ಅಭಿಪ್ರಾಯದ ಪ್ರಕಾರ ಚಂದ್ರಗಿರಿ ನದಿಯ ತನಕ ಮಾತ್ರ ಕೇರಳಕ್ಕೆ ಅಧಿಕಾರವಿದೆ ಎಂದಾಗ ಭಾಷಾವಾರು ತಳಹದಿಯ ಮೇಲೆ ತಾಲೂಕನ್ನು ವಿಭಾಗಿಸುವುದರ ಬದಲು ಆಡಳಿತಾತ್ಮಕ ದೃಷ್ಟಿಕೋನದಿಂದ ಇಡೀ ತಾಲೂಕನ್ನು ಕೇರಳಕ್ಕೆ ಸೇರಿಸುವ ತೀರ್ಮಾನ ಕೈಗೊಂಡರು. ಅಂದರೆ ಚಂದ್ರಗಿರಿಯ ಉತ್ತರಕ್ಕಿರುವ ದ.ಕನ್ನಡದ ಭಾಗ ನ್ಯಾಯ ಪ್ರಕಾರ ಕೇರಳಕ್ಕೆ ಸೇರಿಸುವುದು ವಿಹಿತವಲ್ಲವೆಂದು ಆಯೋಗಕ್ಕೆ ಅನಿಸಿದ್ದರೂ, ಆಡಳಿತಾತ್ಮಕ ಕಾರಣಗಳಿಗೋಸ್ಕರ ತಾಲೂಕನ್ನು ವಿಭಾಗಿಸದೆ ಕೇರಳಕ್ಕೆ ಹೋಗಲಿ ಎಂದು ತೀರ್ಮಾನಿಸಿತು. ಹಾಗಾಗಿ ಇಡೀ ತಾಲೂಕು ಕೇರಳಕ್ಕೆ ಸೇರ್ಪಡೆಗೊಂಡಿತು.

## ಇಡೀ ತಾಲೂಕು ನಮಗಿರಲಿ

ಇದೇ ವಾದದ ಪ್ರಕಾರ, ಇಡೀ ತಾಲೂಕು ಶತಮಾನಗಳ ಕಾಲ ದ.ಕ.ಜಿಲ್ಲೆಯ ಜತೆ ಇದ್ದಂತೆ, ಹಾಗೆಯೇ ಇರಲಿ. ನಾನು ಯಾವದೇ ಅಂಕಿ ಅಂಶವನ್ನು ಎತ್ತಿ ಹಿಡಿದು ಈ ವಾದವನ್ನು ಮಂಡಿಸಲು ಇಷ್ಟಪಡುವುದಿಲ್ಲ. ಯಾಕಂದರೆ, ಈ ಭಾಗಗಳಲ್ಲಿ ಯಾವುದೇ ಒಂದು ಭಾಷೆ ಸಾಮೂಹಿಕವಾಗಿ ಪತ್ತೆಹಚ್ಚುವುದು ಅಸಾಧ್ಯವಾದ ಮಾತು. ಇಡೀ ಕಾಸರಗೋಡು ತಾಲೂಕು ಕೇರಳಕ್ಕೆ ಸೇರ್ಪಡೆಗೊಂಡಾಗ್ಯೂ, ಉಳಿದ 13 ಲಕ್ಷ ದ. ಕನ್ನಡಿಗರಲ್ಲಿ ಒಂದು ಲಕ್ಷ ಮಲೆಯಾಳಿಗಳು ಇದ್ದೇ ಇರುತ್ತಾರೆ. ಹಾಗಿರುವಾಗ, ಕಾಸರಗೋಡಿನ ಮಲೆಯಾಳಿಗಳು ಶತಮಾನಗಳ ಕಾಲ ನಮ್ಮೊಡನೆ ಇದ್ದಂತೆ ಮುಂದೆಯೂ ಇರಬಹುದಲ್ಲ?

ಮುಂಬರುವ ಕರ್ನಾಟಕ ರಾಜ್ಯ ಬಹುಭಾಷಾ ರಾಜ್ಯವಾಗಲಿದ್ದು, ಅದರಲ್ಲಿ ಕನ್ನಡಿಗರು, ತಮಿಳರು, ಮಲೆಯಾಳಿಗಳು, ತೆಲುಗರು, ತುಳುವರು, ಮರಾಠಿಗರು ಮತ್ತು ಕೊಂಕಣಿಗಳು ಸೇರಿರುತ್ತಾರೆ ಎಂದು ನನಗೆ ಸಂತಸ

ತಂದಿದೆ. ಮಲೆಯಾಳಿಗಳ ಜನಸಂಖ್ಯೆಗೆ ಅನುಗುಣವಾಗಿ, ಅವರು ಹೆಚ್ಚಿನ ಪ್ರದೇಶವನ್ನು ಕೇಳುವುದು ಸಮಂಜಸವಾಗಲಾರದು. ಅವರು, ಶ್ರೀ ವೈಕುಂಠ ಬಾಳಿಗರು ಹೇಳಿದಂತೆ, ದೇಶದ ಯಾವುದೇ ಪ್ರದೇಶಕ್ಕೆ ವಲಸೆ ಹೋಗಿ ಅಲ್ಲಿ ನೆಲೆಸಬಹುದಾದ ಕಾರಣ, ತಮ್ಮ ಜನಸಂಖ್ಯೆಯ ನಿಮಿತ್ತವನ್ನು ಮುಂದಿಟ್ಟುಕೊಂಡು ತಮ್ಮ ಬೇಡಿಕೆಗಾಗಿ ಪ್ರಯತ್ನಿಸುವುದು ತರವಲ್ಲ. ಆದ್ದರಿಂದ ಸ್ವಾಮೀ, ಪೂರ್ತಿ ಕಾಸರಗೋಡು ತಾಲೂಕು ನಮ್ಮ ಜತೆಯಲ್ಲೇ ಉಳಿಯಬೇಕಾದ್ದು ಅನಿವಾರ್ಯ. ಕಾಸರಗೋಡು ತಾಲೂಕು ವಿಭಾಗಿಸಿ ಹಂಚಿಹೋಗುವುದಕ್ಕೆ ನನ್ನ ಮನಸ್ಸು ಒಪ್ಪುತ್ತಿಲ್ಲ. ಯಾಕಂದರೆ ಅದು ಮುಂದೆ ಮಲೆಯಾಳಿ ಮತ್ತು ಕನ್ನಡಿಗರ ನಡುವಿನ ಒಂದು ಸಂಘರ್ಷದ ಭಾಗವಾಗಿ ಹೋಗಬಾರದು. ನನಗನಿಸುತ್ತಿದೆ, ಈ ವಿಷಯದಲ್ಲಿ ಯಾವುದೇ ಭಿನ್ನಾಭಿಪ್ರಾಯ ಇರಬಾರದು ಮಾತ್ರವಲ್ಲ, ರಾಜ್ಯ ಪುನರ್ಘಟನೆಯ ಆಯೋಗದ ವರದಿ ನಮ್ಮೊಳಗೆ ಯಾವುದೇ ಭಿನ್ನಾಭಿಪ್ರಾಯಕ್ಕೆ ಎಡೆಮಾಡಿಕೊಡಬಾರದು.

## ಹಿಟ್ಲರ್ ಅಂಬೋಣ

ಒಂದು ವೇಳೆ ಚಂದ್ರಗಿರಿಯ ದಕ್ಷಿಣಕ್ಕಿರುವ ಜನರು ತಾವು ಮಲಬಾರಿಗೇ ಸೇರಲು ಇಷ್ಟಪಡುತ್ತಿದ್ದರೆ, ಅವರ ದಾರಿಗೆ ನಾವು ಅಡ್ಡಗಟ್ಟಲಾರೆವು. ಈ ಸದನದಲ್ಲಿ ಕಾಸರಗೋಡು ತಾಲೂಕಿನ ಪ್ರತಿನಿಧಿಗಳಾದ ಶ್ರೀ ಮೊಗ್ರಾಲ್ ಮತ್ತು ಶ್ರೀ ಬಾಳಿಗಾ ಅವರು ತಾವು ದ.ಕ. ಜಿಲ್ಲೆಯಲ್ಲೇ ಮುಂದುವರಿಯಲು ಇಷ್ಟಪಟ್ಟಿದ್ದಾರೆ. ಹೊಸದುರ್ಗ ತಾಲೂಕನ್ನು ಪ್ರತಿನಿಧಿಸುತ್ತಿರುವ ಶ್ರೀ ನಾರಾಯಣನ್ ನಂಬ್ಯಾರ್ ಅವರು ಇಡೀ ತಾಲೂಕು ಕೇರಳಕ್ಕೇ ಸೇರಬೇಕೆಂದು ಪಟ್ಟು ಹಿಡಿದಿದ್ದಾರೆ. ಇದು ಯುದ್ಧ ಕಾಲದ ಒಂದು ಆಖ್ಯಾಯಿಕೆಯನ್ನು ನನಗೆ ನೆನಪಿಗೆ ತರುತ್ತದೆ. ಒಂದು ಔತಣ ಕೂಟದಲ್ಲಿ ಹಿಟ್ಲರ್, ಮುಸ್ಸೋಲಿನಿ ಮತ್ತು ಫ್ರಾಂಕೋ ಭೋಜನ ಮಾಡುತ್ತಿರುವ ಕಾಲದಲ್ಲಿ, ಫ್ರಾಂಕೋ ಹೇಳಿದರಂತೆ, ದೇವರು ನನಗೆ ಜಗತ್ತಿನ ಇಡೀ ಅರ್ಧ ಭಾಗವನ್ನು ನೀಡುತ್ತೇನೆ ಎಂದು ಭರವಸೆಯಿತ್ತಿದ್ದಾನೆ ಅಂತ. ಜಗತ್ತಿನ ಉಳಿದರ್ಧ ಭಾಗವನ್ನು ತನಗೆ ನೀಡುತ್ತಾನೆ ಎಂದು ದೇವರು ಆಶ್ವಾಸನೆಗೈದಿರುವುದಾಗಿ ಮುಸ್ಸೋಲಿನಿ ಹೇಳಿದಾಗ, 'ನಾನು ಹಾಗೆ ನಿಮ್ಮಿಬ್ಬರಿಗೂ ಭರವಸೆ ನೀಡಿಲ್ಲವಲ್ಲ' ಎಂದು ಹಿಟ್ಲರ್ ಹೇಳಿದನಂತೆ. ಸ್ವಾಮೀ, ಯಾವ ಭಾಗದ ಜನರು ಮಲಬಾರಿಗೆ ಹೋಗಲು ಇಷ್ಟಪಡುತ್ತಾರೋ ಅವರೆಲ್ಲ ಹೋಗಲಿ, ಆದರೆ, ಕಾಸರಗೋಡಿನ ಜನತೆಯನ್ನು

ದಕ್ಷಿಣ ಕನ್ನಡದಿಂದ ಬೇರ್ಪಡಿಸಲು ಮಾತ್ರ ಪ್ರಯತ್ನಿಸಬೇಡಿ ಎಂಬುದೇ ನನ್ನ ಸವಿಯ ಪ್ರಾರ್ಥನೆ. ಧನ್ಯವಾದಗಳು.

***

## ಕೈಗಾರಿಕಾಭಿವೃದ್ಧಿಗೆ ಬಂಡವಾಳ ಹೂಡಿಕೆ

## ಕೈಗಾರಿಕೆ ಮತ್ತು ಸಿಂಕೋನಾ ಬೇಡಿಕೆಗಳು

## 23 ಮಾರ್ಚ್ 1956

**ಶ್ರೀ ಅನಂತ ಪೈ:** ಸಭಾಧ್ಯಕ್ಷರೇ, ಜನರ ಜೀವನ ಮಟ್ಟವನ್ನು ಎತ್ತರಿಸುವ ಹಿನ್ನೆಲೆಯಲ್ಲಿ ನಮ್ಮ ಜನಕ್ಕೆ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಹೆಚ್ಚಿನ ಉದ್ಯೋಗಾವಕಾಶಗಳನ್ನು ಕಲ್ಪಿಸುವ ದೃಷ್ಟಿಯಿಂದ ಇಂದಿನ ಚರ್ಚೆಗೆ ಹೆಚ್ಚಿನ ಮಹತ್ವವಿದೆ ಎಂದು ನಾನು ಬಗೆದಿದ್ದೇನೆ. ನಮ್ಮಂಥ ಆರ್ಥಿಕ ಹಿಂದುಳಿಯುವಿಕೆಯ ಸಮಾಜದಲ್ಲಿ, ಸ್ವಲ್ಪವೇ ಬಂಡವಾಳವನ್ನು ಗ್ರಾಮೀಣ ಪ್ರದೇಶಗಳಲ್ಲಿ ಹೂಡಿದರೂ, ಗ್ರಾಮೀಣ ನೆಲೆಯಲ್ಲಿ ಅದು ಉದ್ಯೋಗಾವಕಾಶಕ್ಕೆ ಬಹುದೊಡ್ಡ ಕೊಡುಗೆಯಾಗಿ ಪ್ರವರ್ತಿಸುತ್ತದೆ ಎಂದು ನಾವು ಕಂಡುಕೊಂಡಿದ್ದೇವೆ– ಇದು ಸಾಮಾಜಿಕ ಯೋಜನೆಯಾಗಲಿ, ರಾಷ್ಟ್ರೀಯ ವಿಸ್ತರಣಾ ಸೇವೆಯಾಗಲೀ, ಸ್ಥಳೀಯ ಅಭಿವೃದ್ಧಿಗಳಲ್ಲಿಯಾಗಲೀ, ನಾವು ಈಗಾಗಲೇ ಕಂಡುಕೊಂಡಿದ್ದೇವೆ.

## ಕೈಗಾರಿಕಾ ಘಟಕಗಳು ಅವಶ್ಯ

ಹೀಗಿರುವಾಗ ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕಾ ಘಟಕಗಳನ್ನು ಅಲ್ಲಲ್ಲಿ ಸ್ಥಾಪಿಸಿದರೆ, ಮನೆಯ ಬಳಿಯಲ್ಲೇ ಉದ್ಯೋಗವಕಾಶ ದೊರೆತು, ಆರ್ಥಿಕ ಸ್ಥಿರತೆಯತ್ತ ಸಮಾಜ ಮುಂದೊಯ್ಯಲು ಸಹಕಾರಿಯಾಗುತ್ತದೆ ಎಂದು ನನ್ನ ಭಾವನೆ. ಉದಾಹರಣೆಗೆ ತೈಲ ಸಂಸ್ಕರಣಾ ಘಟಕಗಳು. ಅಂಥವನ್ನು ಮುಂಬಯಿಯಂಥ ಸ್ಥಳಗಳಲ್ಲಿ ಸ್ಥಾಪಿಸುವುದಕ್ಕಿಂತ, ಕೊಚ್ಚಿ ಅಥವಾ ಮರ್ಮಗೋವಾದ ನಡುವಿನ ಯಾವುದೇ ಜಾಗದಲ್ಲಿ ಸ್ಥಾಪಿಸುವುದು ಹೆಚ್ಚು ಕ್ಷೇಮ– ಇದಕ್ಕೆ ರಾಜ್ಯ ಸರಕಾರವನ್ನು ಹೊಣೆಯನ್ನಾಗಿ ನಾನು ಪರಿಗಣಿಸುವುದಿಲ್ಲ. ಇಂತಹ ಭಾಗಗಳಲ್ಲಿ ಸೂಕ್ತ ಸಂಪರ್ಕ ವ್ಯವಸ್ಥೆಗಳು ಇರುವುದಿಲ್ಲವೆಂಬ ಕಾರಣವನ್ನೊಡ್ಡಿ, ಘಟಕಗಳ ಸ್ಥಾಪನೆಗೆ ಅಡ್ಡಿಯಾಗುತ್ತದೆ ಎಂದು ನಾನು

ಕೇಳಿದ್ದೇನೆ. ಅಂತಹ ಸಂಪರ್ಕ ವ್ಯವಸ್ಥೆಯನ್ನು ಹುಟ್ಟು ಹಾಕಲು ಯಾರ ತಡೆಯಿದೆ ಎಂಬುದು ಪ್ರಶ್ನೆ.

ಮದ್ರಾಸು ಸರಕಾರ ಮಲ್ಪೆಯಲ್ಲಿ ಮೀನು ಸಂಸ್ಕರಣಾ ತಂತ್ರಜ್ಞಾನದ ಘಟಕವನ್ನು ಸ್ಥಾಪಿಸಲು ಮುಂದೆ ಬಂದಾಗ, ಅಲ್ಲಿ ಮೀನು ಬಂದರು ಇಲ್ಲವೆಂಬ ಕಾರಣವನ್ನು ಕೇಂದ್ರ ಸರಕಾರ ಮುಂದೊಡ್ಡಿತು. ಬಂದರುಗಳನ್ನು ಜನತೆ ನಿರ್ಮಾಣ ಮಾಡುವ ಹಾಗೆ ಸರಕಾರ ಎಣಿಸಬಹುದೆ? ಒಟ್ಟು ಉದ್ದೇಶವೇನೆಂದರೆ, ಸಮಸ್ತ ನೈಸರ್ಗಿಕ ಸಂಪತ್ತನ್ನು ಪೂರ್ಣವಾಗಿ ವಿನಿಯೋಗಿಸಿ, ಅದು ದೇಶದ ಒಳಿತಿಗಾಗಿ ಉಪಯೋಗಿಸಲ್ಪಡಬೇಕು. ಈ ಪ್ರಶ್ನೆಯನ್ನು ಎತ್ತಿದಾಗ, ರಾಜ್ಯ ಸರಕಾರದ ಕಡೆಯಿಂದ ಅನೇಕ ತೊಡಕುಗಳು ಪ್ರಾಥಮಿಕ ನೆಲೆಯಲ್ಲೇ ಕಂಡು ಬಂದವು. ನಾವು ಕೈಗಾರಿಕೆಯ ಬಗ್ಗೆ ಮಾತನಾಡುವಾಗ, ಆ ಪ್ರದೇಶದಲ್ಲಿ ಲಭ್ಯವಿರುವ ಕಚ್ಚಾ ವಸ್ತುಗಳ ಒಂದು ಸರ್ವೆಯನ್ನು ಮಾಡುವುದು ಮತ್ತು ಅವುಗಳನ್ನು ಸೂಕ್ತವಾಗಿ ಕೈಗಾರಿಕೆಗೆ ಬಳಸುವುದು ಉಚಿತವಲ್ಲವೆ?

## ಮತ್ಸ್ಯೋದ್ಯಮ ದೊಡ್ಡ ಸಂಪತ್ತು

ದ.ಕ. ಜಿಲ್ಲೆಗೆ ಸಂಬಂಧಿಸಿದಂತೆ, ನಮ್ಮ ಮತ್ಸ್ಯ ಸಂಪತ್ತಿನ ವಿಷಯವಾಗಿ ನಾವು ಯಾವುದೇ ವಿಶೇಷ ಗಮನವನ್ನು ನೀಡಿಲ್ಲವೆಂದೇ ಹೇಳಬೇಕಾಗುತ್ತದೆ. ಪಶ್ಚಿಮ ಕರಾವಳಿಯಲ್ಲಿ ಮತ್ಸ್ಯೋದ್ಯಮ ಒಂದು ಬಹುದೊಡ್ಡ ಕೈಗಾರಿಕೆಯಾಗಿ ಬೆಳೆಸುವ ಸಾಧ್ಯತೆಯಿದೆ ಮತ್ತು ಮೀನು ಸಂಸ್ಕರಣಾ ಘಟಕಗಳನ್ನು ಸ್ಥಾಪಿಸುವ ಸಾಧ್ಯತೆಗಳಿವೆ. ನಾವು ಮೀನು ಆಹಾರ ಘಟಕವನ್ನು ಅಂದರೆ, ಕಲ್ಲಿಕೋಟೆಯಲ್ಲಿರುವಂಥದ್ದಲ್ಲ, ಅದಕ್ಕೂ ದೊಡ್ಡ ಘಟಕವನ್ನು ಸ್ಥಾಪಿಸಬಹುದು. ಮೀನನ್ನು ಗೊಬ್ಬರವಾಗಿ ಉಪಯೋಗಿಸುವ ಬದಲು, ಅದನ್ನು ಮೀನಿನ ಆಹಾರವನ್ನಾಗಿ ಪರಿವರ್ತಿಸಿದರೆ, ಅದಕ್ಕೆ ರಫ್ತು ಮಾಡುವ ಮೌಲ್ಯ ಬರುತ್ತಿತ್ತು. ಅವನ್ನೆಲ್ಲ ನಾವು ಯೋಚಿಸಲೇ ಇಲ್ಲ. ಆಹಾರ ಸಂಸ್ಕರಣಾ ಘಟಕಗಳಂಥ ಅನೇಕ ಸಣ್ಣ ಕಾರ್ಖಾನೆಗಳನ್ನು ಸಣ್ಣ ಕೈಗಾರಿಕೆಯ ಅಡಿಯಲ್ಲಿ ಸ್ಥಾಪಿಸಬಹುದು. ಆಹಾರದ ವಿಷಯದಲ್ಲಿ, ವಸತಿಯ ವಿಷಯದಲ್ಲಿ ಮತ್ತು ವಸ್ತ್ರೋದ್ಯಮದ ವಿಷಯದಲ್ಲಿ ನಿಜವಾದ ರೀತಿಯಲ್ಲಿ ನಾವು ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಿ ಅದಕ್ಕೆ ನಿಜವಾದ ಬೇಡಿಕೆಗಳು ಬರುವಂತೆ ಮಾಡಬಹುದಿತ್ತು.

## ಎಲ್ಲೆಲ್ಲೂ ವಿದೇಶೀ ವಸ್ತುಗಳೇ!

ನಾವು ಯಾವುದೇ ನಮ್ಮ ಹಳ್ಳಿಯ ಸ್ಥಳೀಯ ಅಂಗಡಿಯೊಂದಕ್ಕೆ ಹೋದರೆ ನಮಗೆ ಅಲ್ಲಿ ಸಿಗುವಂಥದ್ದು, ಎಲ್ಲ ವಿದೇಶೀ ವಸ್ತುಗಳೇ. ಭಾರತದಲ್ಲಿ ತಯಾರಾದ ವಸ್ತುಗಳೇ ಇಲ್ಲ. ಉದಾಹರಣೆಗೆ ಟೂಥ್ ಬ್ರಶ್ ಆಗಲೀ, ಶೇವಿಂಗ್ ಕ್ರೀಂ ಆಗಲೀ ಸ್ವದೇಶಿಯದ್ದು ಇರುವುದಿಲ್ಲ. ನನ್ನ ದೃಷ್ಟಿಯಲ್ಲಿ ಇಂದಿನ ದಿನಗಳಲ್ಲಿ ಈ ವಸ್ತುಗಳ 5% ಕೂಡಾ ನಾವು ಆಮದು ಮಾಡಿಕೊಳ್ಳಬಾರದು. ನಮ್ಮದೇ ಕೈಗಾರಿಕೆಯನ್ನು ಈ ಎಲ್ಲಾ ಬಳಕೆಯ ವಸ್ತುಗಳ ತಯಾರಿಕೆಯಲ್ಲಿ ಸ್ಥಾಪಿಸಿದ್ದಲ್ಲಿ, ಬಹಳಷ್ಟು ವಸ್ತುಗಳು ಅವುಗಳಲ್ಲಿ ಒಳಗೊಳ್ಳುತ್ತವೆ. ನಮ್ಮ ಸಣ್ಣ ಕೈಗಾರಿಕೆಗಳ ದೊಡ್ಡ ಸಮಸ್ಯೆ ಅಂದರೆ, ಏನನ್ನು ತಯಾರಿಸುವುದು ಮತ್ತು ಅದನ್ನು ಎಲ್ಲಿ ಮಾರಾಟ ಮಾಡುವುದು? ಸರಕಾರ ಈ ವಸ್ತುಗಳ ಬೇಡಿಕೆಯ ಮಾಹಿತಿಯನ್ನು ಒದಗಿಸಿದಲ್ಲಿ ಮತ್ತು ಎಲ್ಲಿ ಮಾರುಕಟ್ಟೆ ಸಿಗಬಹುದೆಂದು ತೋರಿಸಿದ್ದಲ್ಲಿ, ನಿಜವಾದ ರೀತಿಯಲ್ಲಿ ಅವಶ್ಯವಾದ ಪ್ರೇರಣೆ ನೀಡಿದಂತಾಗುತ್ತದೆ. ಸರಕಾರ ಒಂದು ಶಕ್ತಿಶಾಲಿಯಾದ ಮಾರುಕಟ್ಟೆ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ನಾನು ಸಲಹೆ ಮಾಡುತ್ತೇನೆ. ಸಹಕಾರಿ ಮಾರುಕಟ್ಟೆಯಾದರೂ ಆದೀತು. ತಮ್ಮ ಉತ್ಪನ್ನಗಳಿಗೆ ಸರಿಯಾದ ಮಾರುಕಟ್ಟೆ ಸಿಕ್ಕಿದಂತಾಗುತ್ತದೆ.

***

### ಖರ್ಚುವೆಚ್ಚದ ಬಗೆಗಿನ

### ಅಂತಿಮ ಸಪ್ಲಿಮೆಂಟರಿ ವರದಿ(1955–56)--ಚರ್ಚೆ

### 24 ಮಾರ್ಚ್ 1956

ಶ್ರೀ ಟಿ.ಅನಂತ ಪೈ: ನಾವು ಪ್ರಾಥಮಿಕ ಶಾಲೆಯ ಅಧ್ಯಾಪಕರಿಗಾಗಿ ಬಹಳಷ್ಟು ಮಾಡಿದ್ದೇವೆ. ಅವರ ಮಕ್ಕಳಿಗೆ ಶೈಕ್ಷಣಿಕ ರಿಯಾಯತಿಯನ್ನು ಕೊಟ್ಟಿದ್ದೇವೆ. ಈ ರಿಯಾಯಿತಿಯನ್ನು ಅವರು 55ವರ್ಷಕ್ಕೆ ನಿವೃತ್ತರಾದ ಬಳಿಕವೂ ನೀಡಲು ಸಾಧ್ಯವೇ? ನಿವೃತ್ತಿಯ ಬಳಿಕ ಈ ಅಧ್ಯಾಪಕರಲ್ಲಿ ಸ್ವಲ್ಪವೇ ಹಣ ಉಳಿಕೆಯಾಗುವಂಥದ್ದು. ಸರಕಾರ ಅವರಿಗೆ ನಿವೃತ್ತಿ ವೇತನವನ್ನು ಅವರ

ವೇತನದ ಕಾಲಂಶ ಮಾತ್ರ ಕೊಡುತ್ತದೆ. ನಿವೃತ್ತರಾದ ಬಳಿಕ ಮಕ್ಕಳಿಗೋಸ್ಕರ ನೀಡಲಾಗುವ ರೀಯಾಯಿತಿಯನ್ನು ಹಿಂತೆಗೆದುಕೊಂಡರೆ, ಅವರ ಮಕ್ಕಳಿಗೆ ಶಿಕ್ಷಣಕೊಡುವಂಥ ಅವಕಾಶ ಕಷ್ಟವೇ ಸರಿ.

**ಮಾನ್ಯ ಶ್ರೀ.ಸಿ.ಸುಬ್ರಹ್ಮಣ್ಯಂ:** ಪ್ರಾಥಮಿಕ ಶಾಲಾ ಅಧ್ಯಾಪಕರು ತಮ್ಮ ಅರವತ್ತನೇ ವಯಸ್ಸಿನಲ್ಲಿ ನಿವೃತ್ತರಾಗುತ್ತಾರೆ ಮತ್ತು ಆ ವೇಳೆಗೆ ಅವರ ಮಕ್ಕಳು ಕನಿಷ್ಠ ಎಸ್.ಎಸ್.ಎಲ್.ಸಿ. ದರ್ಜೆಯನ್ನು ಪಾಸು ಮಾಡಿರುತ್ತಾರೆ. 45 ವರ್ಷಗಳ ಬಳಿಕವೂ ಅವರಿಗೆ ಮಕ್ಕಳಾಗುವುದು ದೂರವೇ ಉಳಿಯಿತು.

**ಶ್ರೀ ಟಿ.ಅನಂತ ಪೈ:** ಮಾನ್ಯ ವಿತ್ತ ಸಚಿವರು ಹೇಳಿರುವಂತೆ, 45 ವರ್ಷಗಳ ನಂತರ ಅವರಿಗೆ ಮಕ್ಕಳಾಗದಿರುವ ಕಾರಣ, ಹಾಗೊಮ್ಮೆ ಆದರೂ ಅಂಥವರ ಸಂಖ್ಯೆ ನಗಣ್ಯವಾಗಿರುವ ಕಾರಣ ಏನೂ ತೊಂದರೆ ಇಲ್ಲ.

## ಗೇಣಿದಾರರ ಸಂರಕ್ಷಣೆ

ಇನ್ನು ದಕ್ಷಿಣ ಕನ್ನಡ ಜಿಲ್ಲಾ ಗೇಣಿದಾರ ರೈತರ ಸಂರಕ್ಷಣಾ ಮಸೂದೆಯ ಕುರಿತು–ಅದು ಒಂದು ವರ್ಷವಷ್ಟೇ ಚಾಲ್ತಿಯಲ್ಲಿರುತ್ತದೆ. ಈಗ ಸರಕಾರ ಗೇಣಿದಾರರು ನೀಡಬೇಕಾದ ಗೇಣಿಯನ್ನು ನಿಗದಿಪಡಿಸಲು ನಿರ್ಧರಿಸಿದೆ. ಈಗ ಈ ಕಾಯಿದೆಯ ಕಾಲಾವಧಿಯನ್ನು ಮುಂದಿನ 5 ವರ್ಷಗಳಿಗೆ ಮುಂದುವರಿಸದೆ ಹೋದಲ್ಲಿ, ಆ ನಂತರ ಕಾಯಿದೆಯನ್ನು ಮುಂದುವರಿಸುವ ಬಗ್ಗೆ ಭರವಸೆ ಇಲ್ಲ. ಯಾಕೆಂದರೆ, ದ.ಕ.ಜಿಲ್ಲೆ ಭಾಷಾವಾರು ಪ್ರಾಂತ್ಯ ನಿರ್ಮಾಣವಾಗುವ ಕಾಲಕ್ಕೆ, ಅಂದರೆ, ಇಷ್ಟರಲ್ಲೇ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಗುವುದು ನಿಶ್ಚಿತ. ದ.ಕ. ಜಿಲ್ಲಾ ಗೇಣಿದಾರ ರೈತರ ಸಂರಕ್ಷಣಾ ಮಸೂದೆಯನ್ನು ಮುಂದಿನ 5ವರ್ಷಗಳಿಗೆ ವಿಸ್ತರಿಸಿದ್ದೇ ಆದಲ್ಲಿ, ಮುಂಬರುವ ಮೈಸೂರು ರಾಜ್ಯದಲ್ಲಿ ಆ ಕಾಯಿದೆ ಮುಂದುವರಿದುಕೊಂಡು ಹೋಗುತ್ತದೆ ಮಾತ್ರವಲ್ಲ, ಅಲ್ಲಿನ ನಿಯಮಗಳಿಗೆ ಬದ್ಧವಾಗಿರುತ್ತದೆ.

## ವಿದ್ಯುಚ್ಛಕ್ತಿ ಕಂಪೆನಿಯ ರಾಷ್ಟ್ರೀಕರಣ

ಮಂಗಳೂರು ವಿದ್ಯುಚ್ಛಕ್ತಿ ಕಂಪೆನಿಯನ್ನು ರಾಷ್ಟ್ರೀಕರಣಗೊಳಿಸಬೇಕೆಂಬ ಇನ್ನೊಂದು ಕಳಕಳಿಯ ವಿಜ್ಞಾಪನೆ ನನ್ನದು. ಕೆಲವು ದಿನಗಳ ಹಿಂದೆ ಮಾನ್ಯ

ಮಂತ್ರಿಗಳು ಆದು ಕಂಪೆನಿಗಳನ್ನು ರಾಷ್ಟ್ರೀಕರಣಗೊಳಿಸುತ್ತೇವೆ ಎಂದು ಹೇಳಿದ್ದಾರೆ. ಸರಕಾರ ನಮ್ಮ ಬೇಡಿಕೆಯನ್ನು ಈಡೇರಿಸುತ್ತದೆ ಎಂದು ಭಾವಿಸುತ್ತೇನೆ. ರಾಷ್ಟ್ರೀಕರಣವಾಗದಿದ್ದಲ್ಲಿ, ಗ್ರಾಮೀಣ ವಿದ್ಯುದ್ದೀಕರಣದ ಕಾರ್ಯ ಆಗಲಾರದು. ಮೈಸೂರು ಸರಕಾರ ಜಿಲ್ಲೆಗೆ ವಿದ್ಯುತ್ತನ್ನು ಜೂನ್ 1956ರ ಸುಮಾರಿಗೆ ನೀಡಲು ಒಪ್ಪಿದೆ. ಒಂದು ವೇಳೆ ಮಂಗಳೂರು ವಿದ್ಯುಚ್ಛಕ್ತಿ ಕಂಪೆನಿ ಅದನ್ನು ಸ್ವೀಕರಿಸುವ ಸ್ಥಿತಿಯಲ್ಲಿಲ್ಲದಿದ್ದಲ್ಲಿ, ಜಿಲ್ಲೆ ಬಹಳಷ್ಟು ರೀತಿಯಲ್ಲಿ ಬವಣೆಪಡಬೇಕಾದೀತು.

## ಸಾರ್ವಜನಿಕ ಆರೋಗ್ಯ

ಸಾರ್ವಜನಿಕ ಆರೋಗ್ಯದ ಕುರಿತು ಒಂದೆರಡು ಮಾತು. ನಮ್ಮಲ್ಲಿನ ಪ್ರಮುಖವಾದ ಕಾಯಿಲೆ ಅಂದರೆ ಕ್ಷಯರೋಗ. ಕ್ಯಾನ್ಸರ್ ಇನ್ನೊಂದು ಭಯಂಕರ ರೋಗ, ನಮ್ಮ ಜನರನ್ನು ಪೀಡಿಸುವಂಥದ್ದು. ಸರಕಾರದಿಂದ ಈ ಎರಡು ರೋಗಗಳಿಗೆ ಉಚಿತ ವೈದ್ಯಕೀಯ ಚಿಕಿತ್ಸೆ ಬೇಕಾಗಿರುವಂಥದ್ದು ಅನಿವಾರ್ಯ. ಹೇಗೆ ಗುಹ್ಯರೋಗಗಳಿಗೆ ಸರಕಾರ ಉಚಿತ ವೈದ್ಯಕೀಯ ಚಿಕಿತ್ಸೆಯ ಸೌಲಭ್ಯವನ್ನು ನೀಡುತ್ತದೆಯೋ, ಹಾಗೆಯೇ ಈ ಎರಡು ಕಾಯಿಲೆಗಳಿಗೆ ಉಚಿತ ಚಿಕಿತ್ಸೆಯನ್ನು ನೀಡಬೇಕೆಂದು ಕೇಳಿಕೊಳ್ಳುತ್ತೇನೆ. ವೈದ್ಯರನ್ನು ಹೇಗೆ ರಾಷ್ಟ್ರೀಕರಣಗೊಳಿಸಲು ಸಾಧ್ಯವಿಲ್ಲವಾದರೂ, ಕನಿಷ್ಠ ಈ ಪ್ರಮುಖ ರೋಗಗಳನ್ನು ದೇಶದಿಂದ ನಿರ್ಮೂಲನ ಮಾಡಲು ಉದ್ಯುಕ್ತವಾಗಬೇಕೆಂದು ಮತ್ತು ರಾಷ್ಟ್ರೀಯ ಆರೋಗ್ಯ ಮಸೂದೆಯ ಅಂಗೀಕಾರಕ್ಕೆ ಮೊದಲು ಈ ಕೆಲಸ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

## ಅಧಿಕಾರಿ ಮೊಕ್ಕಾಂ ಮಾಡಲಿ

ಮಾನ್ಯರೇ, ಉದ್ಯೋಗ ವಿನಿಮಯ ಕೇಂದ್ರಗಳ ಕುರಿತು ನಾನು ಹೇಳಬೇಕಾಗಿದೆ. ಇಂದಿನ ಕಾನೂನಿನ ಪ್ರಕಾರ ಪ್ರತಿಯೊಬ್ಬನೂ ತನ್ನ ಹೆಸರನ್ನು ನೋಂದಾಯಿಸುವ ಸಲುವಾಗಿ ಜಿಲ್ಲಾ ಕೇಂದ್ರಕ್ಕೆ ಸ್ವತಃ ಹೋಗಬೇಕಾಗಿದೆ. ನಮ್ಮ ನಿರುದ್ಯೋಗಿ ಯುವಕ ಜಿಲ್ಲಾ ಕೇಂದ್ರಕ್ಕೆ ಹೋಗಿ ನೋಂದಾಯಿಸುವುದು ಕಷ್ಟಸಾಧ್ಯವಾದ ಮಾತು. ಅವರಿಗೆ ಕೆಲಸ ಸಿಗದಿದ್ದಲ್ಲಿ ಕಾಲಕಾಲಕ್ಕೆ ಅವರು ಜಿಲ್ಲಾ ಕೇಂದ್ರಕ್ಕೆ ಬಂದು ತಮ್ಮ ದಾಖಲಾತಿಯನ್ನು ನವೀಕರಿಸಬೇಕಾಗುತ್ತದೆ. ನನ್ನ ಸಲಹೆ ಅಂದರೆ, ಉದ್ಯೋಗ ವಿನಿಮಯ ಅಧಿಕಾರಿ ಆಗಿಂದಾಗ್ಗೆ



H-058-10

ಮೊಕ್ಕಾಂ ಹೂಡಿ, ನಿರುದ್ಯೋಗಿ ಯುವಕರು ಅವರ ಮುಂದೆ ಹಾಜರಾಗುವಂತೆ ಅನುಕೂಲತೆ ಕಲ್ಪಿಸಿಕೊಟ್ಟಲ್ಲಿ, ಅವರು ತಮ್ಮ ತಮ್ಮ ನೋಂದಣಿಯನ್ನು ನವೀಕರಿಸುವಲ್ಲಿ ಶಕ್ತರಾಗುತ್ತಾರೆ. ಮತ್ತು ಅವರಿಗೆ ಹಣದ ಉಳಿತಾಯವನ್ನು ಮಾಡಿಕೊಟ್ಟಂತಾಗುತ್ತದೆ.

## ದೊಡ್ಡ ಮೊತ್ತ ಬೇಕು

ಸ್ಥಳೀಯ ಅಭಿವೃದ್ಧಿ ಕೆಲಸಗಳು ಬಹಳ ಮುನ್ನಡೆಯಲ್ಲಿದ್ದು, ಕೇಂದ್ರ ಸರಕಾರ ಎಲ್ಲ ರೀತಿಯ ಪ್ರೋತ್ಸಾಹವನ್ನು ನೀಡಬೇಕೆಂದು ನಮ್ಮ ಸರಕಾರ ಕೇಳಿಕೊಂಡರೆ, ಇನ್ನೂ ಹೆಚ್ಚಿನ ಮೊತ್ತದ ದೇಣಿಗೆ ಸಿಗಬಹುದೆಂದು ನಾನು ಭಾವಿಸುತ್ತೇನೆ. ಮಾನ್ಯ ವಿತ್ತ ಸಚಿವರಲ್ಲಿ ನಾನು ಕೇಳಿಕೊಳ್ಳುವುದೇನೆಂದರೆ, ದಕ್ಷಿಣ ಕನ್ನಡ ಜಿಲ್ಲೆ ಈಗ ಪ್ರಸ್ತಾಪಿಸಿದಕ್ಕಿಂತಲೂ, ದೊಡ್ಡ ಮೊತ್ತದ ಹಂಚಿಕೆಯನ್ನು ಪಡೆಯುವಂತಾಗಲಿ ಎಂದು. ಇತರ ಜಿಲ್ಲೆಗಳು ತಮ್ಮ ವೆಚ್ಚದಲ್ಲಿ ಏರುಪೇರು ಮಾಡಿದರೆ ಕೆಲವು ತಮ್ಮ ಲೆಕ್ಕಪತ್ರಕ್ಕಿಂತ ಹೆಚ್ಚಿಗೆ ಹಣವನ್ನು ವ್ಯಯ ಮಾಡದೆ ಇರುವಂಥದ್ದು. ಅಂದರೆ, ನಮ್ಮ ದ.ಕ.ಜಿಲ್ಲಾ ಬೋರ್ಡ್‌ನಲ್ಲಿ ನಾವು ಕೇವಲ ರೂ.75,000 ಮಾತ್ರ ವೆಚ್ಚಮಾಡಿದ್ದೇವೆ. ಜಿಲ್ಲಾ ಬೋರ್ಡಿನ ಕೆಲಸಗಳು ಬಹಳವಾಗಿದ್ದು, ಅದು ಅನೇಕ ಕಾರ್ಯಗಳಿಗೆ ಹಣವನ್ನು ವ್ಯಯಿಸುತ್ತಿದ್ದು, ಈಗ ಬಿಟ್ಟು ಪರಿಸ್ಥಿತಿ ಹದಗೆಟ್ಟಿದೆ. ಹೆಚ್ಚುವರಿ ರೂ.50,000ವೋ, ಒಂದು ಲಕ್ಷವೋ ಅಷ್ಟೊಂದು ಹೆಚ್ಚೇನೂ ಅಲ್ಲ. ಸ್ಥಳೀಯ ಸಂಸ್ಥೆಗಳು ಸಾರ್ವಜನಿಕರ ಎದುರು ಸಣ್ಣದಾಗಬಾರದು ಮತ್ತು ಅವರಿಗೆ ಒಪ್ಪಿಸಿದ ಕೆಲಸವನ್ನು ಅವರು ಸಮರ್ಪಕವಾಗಿ ಮಾಡಬೇಕಾಗುತ್ತದೆ.

ಇನ್ನೊಂದು ನನ್ನ ಪ್ರಾರ್ಥನೆ ಅಂದರೆ, ಇತ್ತೀಚೆಗೆ ರಾಜ್ಯ ಸರಕಾರ ಸ್ಟ್ರಾಬೋರ್ಡ್ ಕಾರ್ಖಾನೆಯನ್ನು ದ.ಕ.ಜಿಲ್ಲೆಯಲ್ಲಿ ಏಲಂನಲ್ಲಿ ಪಡಕೊಂಡಿದೆ. ಈಗ ಅದನ್ನು ಮುಚ್ಚಲಾಗಿದೆ. ನನ್ನ ಇಚ್ಛೆ ಅಂದರೆ, ಸರಕಾರ ಅದನ್ನು ತೆರೆದು ಅದು ಕೆಲಸ ಮಾಡುವ ಸ್ಥಿತಿಗೆ ಮತ್ತೆ ತಂದು ಸಕ್ರಿಯಗೊಳಿಸಬೇಕೆಂಬುದು. ನಾವು ಪ್ರಾರಂಭಿಸಿದ ಒಂದೇ ಒಂದು ಕಾರ್ಖಾನೆ. ಅದು ಕೂಡಾ ಸೋತಿದೆ ಎಂಬ ಭಾವನೆ ಬರಬಾರದಲ್ಲ? ಧನ್ಯವಾದಗಳು.

***

## ಶಿಕ್ಷಣ ಮತ್ತು ಸಾರ್ವಜನಿಕ ಆರೋಗ್ಯ–ಬೇಡಿಕೆ

## 26 ಮಾರ್ಚ್ 1956

**ಶ್ರೀ ಅನಂತ ಪೈ:** ಸಭಾಧ್ಯಕ್ಷರೇ, ಸ್ವಾಮೀ, ಯಾರ ವಾರ್ಷಿಕ ಆದಾಯ ರೂ.1,200ಕ್ಕೆ ಕಡಿಮೆ ಇರುತ್ತದೆಯೋ, ಅಂಥವರ ಮಕ್ಕಳಿಗೆ ಮೂರನೇ ದರ್ಜೆಯವರೆಗೆ ಪೂರ್ತಿ ಫೀಸು ಮನ್ನಾ ಮಾಡಲಾಗಿದೆ. ಆದರೆ ಈ ಸೌಲಭ್ಯವನ್ನು ಓರಿಯಂಟಲ್ ಶಾಲೆ ಮತ್ತು ಸಂಸ್ಕೃತ ಶಾಲೆಗಳಲ್ಲಿ ವಿದ್ಯಾರ್ಜನೆ ಮಾಡುವ ಮಕ್ಕಳಿಗೆ ನೀಡಿಲ್ಲ. ಆದ್ದರಿಂದ ಅವರಿಂದ ಅರ್ಧ ಫೀಸನ್ನು ಸಂಗ್ರಹಿಸಲಾಗುತ್ತಿದೆ. ಅನೇಕ ನಿರೂಪಗಳನ್ನು ಈಗಾಗಲೇ ಸರಕಾರಕ್ಕೆ ಸಲ್ಲಿಸಲಾಗಿದೆ. ಉದಾ: ಕಾರ್ಕಳದ ಸಂಸ್ಕೃತ ಪಾಠಶಾಲೆ. ಸರಕಾರ ಈಗಾಗಲೇ ಅರ್ಧ ಫೀಸನ್ನು ಅಂಗೀಕಾರ ಮಾಡಿರುವುದರಿಂದ, ಅದನ್ನು ತೆಗೆದು ಪೂರ್ತಿ ಮನ್ನಾ ಮಾಡುವುದಕ್ಕಾಗುವುದಿಲ್ಲ ಎನ್ನಲಾಗುತ್ತಿದೆ. ಈ ಎರಡು ತತ್ವಗಳು ಹೇಗೆ ಪರಸ್ಪರ ಪೂರಕವಾಗಿದೆಯೋ ನಾನರಿಯೆ. ನನ್ನ ಬೇಡಿಕೆ ಅಂದರೆ, ಓರಿಯಂಟ್ ಶಾಲೆಗಳಿಗೂ ಪೂರ್ತಿ ಫೀಸು ರೀಯಾಯತಿಯನ್ನು ನೀಡಬೇಕೆಂಬುದು.

## ಅಸ್ಪೃಶ್ಯರಿಗೂ ಗೌರವ ಕೊಡಿ

ಸಭಾಧ್ಯಕ್ಷರೇ, ನಮ್ಮ ಪ್ರಮುಖ ಪಂಚಾಯತು ಮತ್ತು ಮುನಿಸಿಪಾಲಿಟಿಗಳಲ್ಲಿ, ಮಲ ನೀಗಿಸುವ ಸಮಸ್ಯೆಯನ್ನು ಮಾನವ ಕಾರ್ಯಕರ್ತರಿಗೆ ಒಪ್ಪಿಸಿರುವುದು ಸಂಪ್ರದಾಯವಷ್ಟೇ? ಅಸ್ಪೃಶ್ಯತೆಯ ನಿವಾರಣೆಯಲ್ಲಿ ನಾವು ಬಹಳಷ್ಟು ಹಣವನ್ನು ವ್ಯಯಮಾಡುವ ಸಂದರ್ಭದಲ್ಲಿ ಯಾವುದೇ ಕಾಯಕ ಮಾನವ ಘನತೆಗೆ ಕೀಳೆಂದು ನಾನು ಭಾವಿಸುವುದಿಲ್ಲ. ಆದರೆ, ಮಲನೀಗಿಸುವ ಕೆಲಸ ಗೌರವಾನ್ವಿತ ಕೆಲಸವಲ್ಲವಾದ್ದರಿಂದ ಮತ್ತು ಅದನ್ನು ಸಾಮಾನ್ಯವಾಗಿ ಅಸ್ಪೃಶ್ಯರು ಮಾಡುವಂತೆ ಅವರಿಗೆ ಒಪ್ಪಿಸಿರುವುದು ಸರಿಯಲ್ಲ ಎಂದು ನನ್ನ ಭಾವನೆ.

ನಮ್ಮ ಆರೋಗ್ಯವನ್ನು ಕಾಪಾಡುವ ದೃಷ್ಟಿಯಿಂದಲೂ, ಮುನಿಸಿಪಾಲಿಟಿಗಳ ಕ್ಷೇತ್ರದ ಈ ಕಕ್ಕಸುಗಳನ್ನು ಸೇಪ್ಟಿ ಟ್ಯಾಂಕುಗಳಿಗೆ ಅಳವಡಿಸುವಂತೆ ಕೋರಿಕೆ. ಈ ಕೆಲಸಗಳನ್ನು ಶಾಸನದ ಮೂಲಕ ಪರಿವರ್ತಿಸಲು ಸಾಧ್ಯವಾಗದ ಮಾತು, ಯಾಕೆಂದರೆ, ನಮ್ಮ ಬಡಜನತೆ ಸೇಪ್ಟಿ ಟ್ಯಾಂಕುಗಳನ್ನು ನಿರ್ಮಿಸಲು ಶಕ್ತರಾಗಿರುವುದಿಲ್ಲವೆಂದು ನನಗೆ ಗೊತ್ತು. ಈ ಸಲಹೆಯನ್ನು ಸರಕಾರ ಪರಿಗಣಿಸಿ.

ಅಸ್ಪೃಶ್ಯತೆ ನಿವಾರಣೆಯನ್ನು ಕೈಗೊಂಡು ಉತ್ತಮ ಪರಿಸರ ನಿರ್ಮಾಣಕ್ಕೂ ಪ್ರೋತ್ಸಾಹ ನೀಡುವ ಹಿನ್ನೆಲೆಯಲ್ಲಿ ಸೇಪ್ಟಿ ಟ್ಯಾಂಕ್ ನಿರ್ಮಾಣಕ್ಕೆ ಸಹಾಯಧನ ನೀಡಬೇಕೆಂದು ಕೇಳಿಕೊಳ್ಳುತ್ತೇನೆ. ಈ ಕಾರ್ಯಕ್ರಮವನ್ನು 4–5 ವರ್ಷಗಳ ಅವಧಿಗೆ ಹಮ್ಮಿಕೊಂಡು, ಆ ಮೂಲಕ ಮನುಷ್ಯರು ಮಲನೀಗಿಸುವ ಕೆಲಸಕ್ಕೆ ತಿಲಾಂಜಲಿ ನೀಡಬೇಕೆಂದು ಅರಿಕೆಮಾಡಿಕೊಳ್ಳುತ್ತೇನೆ.

***

## ಕೈಗಾರಿಕೆ ಮತ್ತು ಸಿಂಕೋನ ಬೇಡಿಕೆ–ಚರ್ಚೆ

### 26 ಮಾರ್ಚ್ 1956

### ಮೂರ್ತೆದಾರರ ಸಮಸ್ಯೆ

**ಶ್ರೀ ಟಿ.ಅನಂತ ಪೈ:** ನಮ್ಮ ರಾಜ್ಯದಲ್ಲಿ ಮದ್ಯಪಾನ ನಿಷೇಧವನ್ನು ಜಾರಿಗೆ ತಂದು ಕೆಲವೇ ವರ್ಷಗಳು ಸಂದರೂ, ಮೂರ್ತೆದಾರರ ಸಮಸ್ಯೆಯನ್ನು ಪರಿಹರಿಸುವ ನಿಟ್ಟಿನಲ್ಲಿ– ಅವರಿಗೆ ಸೂಕ್ತ ಪುನರ್ವಸತಿಯನ್ನು ಕಲ್ಪಿಸಿಕೊಡುವ ನಿಟ್ಟಿನಲ್ಲಿ – ಯಾವುದೇ ಕ್ರಮವನ್ನು ಈವರೆಗೆ ಕೈಗೊಂಡಿಲ್ಲವೆನ್ನುವುದು ಖೇದದ ವಿಷಯ. ಯಾಕಂದರೆ, ಮೂರ್ತೆದಾರರು ನಮ್ಮ ಜಿಲ್ಲೆಯ ಅತೀ ಬಡ ಸಮುದಾಯಕ್ಕೆ ಸೇರಿದವರು. ಸಹಕಾರೀ ಸಂಘಗಳ ಮೂಲಕ, ತಾಳೆ ಬೆಲ್ಲವನ್ನು ತಯಾರಿಸುವ ಉದ್ದಿಮೆಯನ್ನು ಸ್ಥಾಪಿಸುವ ಬಗೆಗೆ ತೃಪ್ತಿಕರವಾದ ಯಾವುದೇ ಬೆಳವಣಿಗೆ ಆಗಿಲ್ಲವೆನ್ನುವುದು ವಾಸ್ತವ. ನಾವು ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವ ಸಂದರ್ಭದಲ್ಲಿ ಈ ಜನಸಮುದಾಯದ ಸಮಸ್ಯೆಗಳನ್ನೂ ಪರಿಗಣನೆಗೆ ತೆಗೆದುಕೊಳ್ಳುವುದು ಅನಿವಾರ್ಯವೆಂದು ನನಗನಿಸುತ್ತಿದೆ. ಸಣ್ಣ ಕೈಗಾರಿಕೆ ಮತ್ತು ಕರಕುಶಲ ಸಂಸ್ಥೆಗಳಲ್ಲಿ ದುಡಿಯುವುದಕ್ಕೆ ಸೂಕ್ತ ತರಬೇತಿ ಅವಶ್ಯವಿದ್ದು, ಈ ಸಹಕಾರೀ ಸಂಘಗಳಲ್ಲಿ ಬರೀ ತಾಳೆ ಬೆಲ್ಲ ಉತ್ಪಾದನೆ ಅಲ್ಲದೆ, ಇನ್ನಿತರ ಲಾಭದಾಯಕ ಸಾಮಗ್ರಿಗಳ ಉತ್ಪಾದನೆಗೂ ಅವಕಾಶವಿರಬೇಕೆಂದು ಕೋರುತ್ತೇನೆ. ಕೈಗಾರಿಕಾ ಇಲಾಖೆ ಇಂತಹ ಸಹಕಾರೀ ಸಂಘಗಳ ಮೂಲಕ ಇನ್ನಿತರ ಅತ್ಯುಪಯುಕ್ತ ಸಾಮಗ್ರಿಗಳ ತಯಾರಿಕೆಗೂ ಆಸ್ಪದ ನೀಡಲು ಸೂಕ್ತ ಆವಿಷ್ಕಾರಗಳ ಕಡೆಗೆ ಗಮನನೀಡಬೇಕೆಂದು ಆಶಿಸುತ್ತೇನೆ.

ನಮ್ಮ ಜನಸಂಖ್ಯೆಯಲ್ಲಿ 50%ಕ್ಕಿಂತ ಹೆಚ್ಚು ಮಹಿಳೆಯರೇ ಇರುವುದರಿಂದ, ಮತ್ತು ನಮ್ಮ ಮಧ್ಯಮವರ್ಗದ ಕುಟುಂಬಗಳಲ್ಲಿ ನಿಜವಾದ ಸಮಸ್ಯೆ ಅಂದರೆ, ಒಬ್ಬನೇ ದುಡಿಯುತ್ತಿದ್ದು, ನಾಲ್ಕೋ ಐದೋ ಮಂದಿ ಆ ಆದಾಯದಲ್ಲಿ ಉಣ್ಣುವಂಥ ಪ್ರಸಂಗವಿರುತ್ತದೆ.

ಮಹಿಳಾ ಸಹಕಾರೀ ಸಂಘಗಳು ಅಲ್ಲಲ್ಲಿ ಇದೀಗ ತಲೆಎತ್ತುತ್ತಿವೆ- ಆದರೆ, ಅವರು ಯಾವ ರೀತಿಯ ಕೈಗಾರಿಕೆಯನ್ನು ಕೈಗೊಳ್ಳುವುದೆಂಬುದೇ ಅವರ ಸಮಸ್ಯೆಯಾಗಿದೆ. ಸರಕಾರ ಹಪ್ಪಳ ಮಾಡುವ ಕೈಗಾರಿಕೆಗೆ ಉತ್ತೇಜನ ನೀಡುತ್ತಿದೆ, ಆದರೆ ಅದು  ಅಷ್ಟೊಂದು ಲಾಭದಾಯಕವಾಗಿಲ್ಲ ಮಾತ್ರವಲ್ಲ ಅದು ಅವರ ಸಮಸ್ಯೆಯನ್ನು ದೊಡ್ಡ ಪ್ರಮಾಣದಲ್ಲಿ ಪರಿಹರಿಸುವಂಥದ್ದಲ್ಲ. ಸರಕಾರ ಕೆಲವೊಂದೆಡೆ ಕೆಲವು ತರಬೇತಿ ನೀಡುವ ಸಂಸ್ಥೆಗಳನ್ನು ಸ್ಥಾಪಿಸಿ, ಅದು ಕರಕುಶಲವಿರಲಿ ಅಥವಾ ಉದ್ದಿಮೆಗಳಾಗಿರಲಿ, ಅಂಥವನ್ನು ಸ್ಥಾಪಿಸಿ. ಆಸಕ್ತ ಮಹಿಳೆಯರು ತಾಂತ್ರಿಕವಾಗಿ ಅರ್ಹತೆ ಪಡೆದಲ್ಲಿ, ಸ್ವಂತ ನೆಲೆಯಲ್ಲಿ ಸಣ್ಣ ಕೈಗಾರಿಕೆಯನ್ನೋ, ಗುಡಿಕೈಗಾರಿಕೆಯನ್ನೋ ಪ್ರಾರಂಭಿಸಲು ಸಾಧ್ಯವಾಗುತ್ತದೆ. ವಿವಿಧೆಡೆ ಅಸ್ತಿತ್ವಕ್ಕೆ ಬರುತ್ತಿರುವ ಮಹಿಳಾ ಸಹಕಾರ ಸಂಘಗಳ ಸಹಯೋಗದೊಂದಿಗೆ, ಕೈಗಾರಿಕಾ ಇಲಾಖೆ ಈ ನಿಟ್ಟಿನಲ್ಲಿ ಸೂಕ್ತ ಯೋಜನೆಗಳನ್ನು ರೂಪಿಸಿಕೊಳ್ಳಲು ಸಾಧ್ಯವಿದೆ ಎಂದು ನನಗನಿಸುತ್ತಿದೆ. ಯಾವುದೇ ಕುಟುಂಬದ ಆರ್ಥಿಕ ಸ್ಥಿರತೆಯನ್ನು ಕಂಡುಕೊಳ್ಳಬೇಕಾದರೆ, ಆ ಕುಟುಂಬದ ಆದಾಯದಲ್ಲಿ ಹೆಚ್ಚಳ ಸಾಧಿಸಬೇಕಾಗಿದೆ ಮತ್ತು ಕುಟುಂಬದ ಎಷ್ಟು ಸಾಧ್ಯವೋ ಅಷ್ಟು ಸದಸ್ಯರು ದುಡಿದು ಸಂಪಾದಿಸುವಂತಿರಬೇಕು.

ದ.ಕ. ಜಿಲ್ಲೆಯಲ್ಲಿ ಹೆಂಚಿನ ಕಾರ್ಖಾನೆ ದೊಡ್ಡ ಪ್ರಮಾಣದಲ್ಲಿದೆ. ನಮ್ಮಲ್ಲಿ ಆವೆಮಣ್ಣಿನ ಅಥವಾ ಆವೆಮಣ್ಣಿನ ಉಪ ಉತ್ಪನ್ನಗಳ ವಿಷಯದಲ್ಲಿ ಯಾವುದೇ ಸಂಶೋಧನಾ ಕೇಂದ್ರ ಇದ್ದಂತಿಲ್ಲ. ಸರಕಾರ ಹಮ್ಮಿಕೊಳ್ಳುತ್ತಿರುವ ಅನೇಕ ಕೈಗಾರಿಕಾ ಕೇಂದ್ರಗಳಲ್ಲಿ ದ.ಕ.ಜಿಲ್ಲೆಗೂ ಅಂತಹ ಒಂದು ಕೇಂದ್ರವನ್ನು ಸ್ಥಾಪಿಸಿ, ಹಂಚು ಕೈಗಾರಿಕೆಯ ಇನ್ನಷ್ಟು ಬೆಳವಣಿಗೆಗೆ ಉತ್ತೇಜನ ನೀಡಲು ಸಾಧ್ಯವಿದೆ. ಹಂಚಿನ ಬಣ್ಣ ಸದಾಕಾಲ ಹಾಗೆಯೇ ಉಳಿಯುವಂತೆ ಮಾಡಲು ಸಾಧ್ಯವೇ ಎನ್ನುವುದರ ಬಗ್ಗೆಯೂ ಚಿಂತಿಸಲು ಅವಕಾಶವಿದೆ ಮತ್ತು ಅದರಿಂದಾಗಿ ಒಳ್ಳೆಯ ಮಾರುಕಟ್ಟೆಯನ್ನು ಹಂಚಿನ ಕೈಗಾರಿಕೆಗೆ ಪಡೆಯಬಹುದಾಗಿದೆ. ಹಂಚಿನ ಉತ್ಪನ್ನಗಳಿಗೆ ನಮಗೆ ಒಳ್ಳೆಯ ರಫ್ತು ಮಾರುಕಟ್ಟೆ ಇದ್ದು, ಇದೀಗ ಆಸ್ಟ್ರೇಲಿಯಾ

ಮತ್ತು ಆಫ್ರಿಕಾದಿಂದ ಅದಕ್ಕೆ ತೀವ್ರ ಸ್ಪರ್ಧೆ ಏರ್ಪಡುವ ಸಾಧ್ಯತೆಯಿದೆ. ಹೆಚ್ಚಿನ ಸಂಶೋಧನೆಗಳಿಲ್ಲದ ಕಾರಣ, ಹಂಚಿನ ಉದ್ದಿಮೆಗೆ ಯಾವ ಬಗೆಯಲ್ಲೂ ಧಕ್ಕೆ ಉಂಟಾಗದ ರೀತಿಯಲ್ಲಿ ನಾವು ಕ್ರಮಕೈಗೊಳ್ಳಬೇಕಾಗಿದೆ.

ನಾವು ಅನೇಕ ಕರಕುಶಲ ಕೈಗಾರಿಕೆಗಳನ್ನು ಎತ್ತಿಕೊಳ್ಳಬಹುದಿತ್ತು- ಆದರೆ, ಸಾಕಷ್ಟು ಕಚ್ಚಾ ವಸ್ತುಗಳ ಅಭಾವದಿಂದಾಗಿ ಅವನ್ನು ಮಾಡಲಾಗುತ್ತಿಲ್ಲ. ಗಂಧದ ಮರದಿಂದ ಅನೇಕ ವಸ್ತುಗಳನ್ನು ತಯಾರಿಸಬಹುದಿತ್ತು, ಆದರೆ ಗಂಧದ ಮರ ಸರಕಾರದ ಅಧೀನಕ್ಕೆ ಒಳಪಡುವಂಥದ್ದು. ಸಹಕಾರೀ ನೆಲೆಯಲ್ಲಿ ಕುಶಲಕರ್ಮಿಗಳಿಗೆ ಪ್ರೋತ್ಸಾಹ ನೀಡಲು ಅವಕಾಶವಿದೆ. ಅಖಿಲ ಭಾರತ ಕರಕುಶಲ ಸಂಸ್ಥೆ, ಇಂತಹ ಸಣ್ಣ ಸಣ್ಣ ವಿಷಯಗಳತ್ತ ಗಮನ ನೀಡುವುದಕ್ಕೆ ಅತೀ ದೊಡ್ಡ ಸಂಸ್ಥೆಯಾಯಿತು. ಕುಶಲ ಕರ್ಮಿಗಳಿಗೆ ಕಚ್ಚಾ ವಸ್ತುಗಳನ್ನು ಸರಬರಾಜು ಮಾಡಿ, ಅವರಿಂದ ತಯಾರಾದ ಸಿದ್ಧವಸ್ತುಗಳನ್ನು ಮಾರುಕಟ್ಟೆ ಮಾಡುವಂಥ ವ್ಯವಸ್ಥೆಯನ್ನು ವಹಿಸಿಕೊಂಡರೆ, ಅವರು ಕಚ್ಚಾವಸ್ತುಗಳಿಗಾಗಿ ಪರದಾಡುವಂಥ ಪ್ರಮೇಯ ಬರುವುದಿಲ್ಲ. ತಮ್ಮ ಸಿದ್ಧ ವಸ್ತುಗಳಿಗೆ, ಮಾರುಕಟ್ಟೆ ಸಿಗದೆ ಅನೇಕ ದಿವಸಗಳ ಕಾಲ ಉಪವಾಸ ಬೀಳುವಂಥ ಸನ್ನಿವೇಶಗಳು ಕೂಡಾ ಇಲ್ಲದೆ ಇಲ್ಲ. ಆದ್ದರಿಂದ ನಾನು ಹೇಳುವುದಿಷ್ಟೇ: ಕೈಗಾರಿಕೀಕರಣದ ಸಮಸ್ಯೆಗಳನ್ನು ಸಮರ್ಥವಾಗಿ ಲೆಕ್ಕಾಚಾರಮಾಡಿ, ಪ್ರತಿಯೊಂದು ಸೂಕ್ಷ್ಮಗಳತ್ತ ಗಮನನೀಡಿ ಹೊಸ ಕೈಗಾರಿಕಾ ಸಂಸ್ಥೆಗಳ ಸ್ಥಾಪನೆಗೆ ಚಾಲನೆ ನೀಡುವಂತಾಗಬೇಕೆಂದು ಆಶಿಸುತ್ತೇನೆ.

***

## ಸಂಸತ್ತಿನಲ್ಲಿ ಪೈ ಕಲಾಪ

## ಸಂಸತ್ತಿನ ಸತ್ವಶಾಲೀ ಚಿಂತನೆಗಳು

## ರೇಲ್ವೇ ಮಧ್ಯಾವಧಿ ಬೇಡಿಕೆ

## ಹೆಚ್ಚುವರಿ ಅನುದಾನದ ಮೇಲಿನ ಚರ್ಚೆ

## 22 ಮತ್ತು 23 ನವೆಂಬರ್, 1972

ಶ್ರೀ ಟಿ.ಎ. ಪೈ (ಕೇಂದ್ರ ರೇಲ್ವೇ ಸಚಿವರು):

1972–73ರ ಆಯವ್ಯಯದಲ್ಲಿ ರೂಪಾಯಿ 32.53 ಕೋಟಿ ಮಿಗತೆ ಕಂಡು ಬಂದಿದೆ. ಈ ಮಧ್ಯಾವಧಿ ಪರಿಶೀಲನೆಯಲ್ಲಿ ಆದಾಯ ಸುಮಾರು 18 ಕೋಟಿ ಬಂದಿದೆ ಎಂದುತೋರಿಸುತ್ತಿದೆ. ಅಂತೆಯೇ ಖರ್ಚು ಕೂಡಾ ಅದೇ ರೀತಿಯಲ್ಲಿ ಹೆಚ್ಚಾಗಿ, 39 ಕೋಟಿಯನ್ನು ತಲುಪಿದೆ. ನಿಮಗೆಲ್ಲ ತಿಳಿದಿರುವ ಹಾಗೆ, ಈ ಆರ್ಥಿಕ ವರ್ಷದಲ್ಲಿ ಸಿಬ್ಬಂದಿ ವೇತನ, ಕಲ್ಲಿದ್ದಲು ಮತ್ತು ಇಂಧನದ ಬೆಲೆ ಹಾಗೂ ರೇಲ್ವೇಯ ಒಟ್ಟು ನಿರ್ವಹಣೆಯ ವೆಚ್ಚಹೆಚ್ಚುತ್ತ ಹೋಗಿದೆ. ರೇಲ್ವೇಯ ಪ್ರಾಥಮಿಕ ಉದ್ದೇಶ ಸರಕು ಸಾಗಾಣಿಕೆಯಾಗಿದ್ದರೂ, ಪ್ರಯಾಣಿಕರ ಸಾಗಾಟವೂ ಮುಖ್ಯವಾಗಿದೆ ಎಂದು ನಾವು ಪರಿಗಣಿಸುತ್ತೇವೆ. ಸರಕು ಸಾಗಾಣಿಕೆಯ ಲಾಭಾಂಶ, ಪ್ರಯಾಣಿಕರ ಸಾಗಾಟಕ್ಕೆ ವಿನಿಯೋಗವಾಗುವಂಥದ್ದು ನಮ್ಮಲ್ಲಿನ ದುರದೃಷ್ಟದ ವಿಷಯ. ರೇಲ್ವೇ ದರವನ್ನು ಹೆಚ್ಚಿಸುವುದನ್ನು ಯಾರೂ ಬಯಸುವುದಿಲ್ಲ. ಬದಲಾಗಿ, ಪ್ರಯಾಣಿಕರಿಗೆ ಹೆಚ್ಚು ಹೆಚ್ಚು



ಶ್ರೀ ಟಿ.ಎ. ಪೈ ರೇಲ್ವೇ ಸಚಿವರಾಗಿ ರಾಷ್ಟ್ರಾಧ್ಯಕ್ಷ ಶ್ರೀ ವಿ.ವಿ. ಗಿರಿಯವರಿಂದ ಪ್ರತಿಜ್ಞಾಸ್ವೀಕಾರ

ಸೌಲಭ್ಯಗಳನ್ನು ಒದಗಿಸುವಂತೆ ಆಗ್ರಹ ಪಡಿಸುತ್ತಾರೆ. ಹಾಗಾಗಿ ಬಡತನ ರಹಿತವಾದ ಸಮಾಜ ಸೃಷ್ಟಿಯ ಒಂದು ಕಲ್ಪನೆಯು ಸದಾ ನನ್ನ ಮನಸ್ಸಿನಲ್ಲಿ ಜಾಗೃತವಾಗಿದೆ. ರೇಲ್ವೆಯಲ್ಲಿ ಪ್ರಯಾಣಿಸದೆ ಇರುವ ನಾಗರಿಕನೊಬ್ಬ ರೇಲ್ವೇ ಸುರಿಯುವ ಹಣಕ್ಕೆ ಬಾಧ್ಯನಾಗುವಂಥದ್ದು ನ್ಯಾಯಸಮ್ಮತವೇ?

ಈ ವರ್ಷ ನಾವು ವೇತನ ನೀಡುವಾಗ 'ಮಿಯಾಬಾಯಿ' ತೀರ್ಮಾನಕ್ಕೆ ಬದ್ಧರಾಗಿರಬೇಕಾಗಿದೆ. ಮಾತ್ರವಲ್ಲ, ವೇತನ ಆಯೋಗದ ಶಿಫಾರಿಸಿನ ಮೇಲೆ ಮಧ್ಯಾವಧಿ ಪರಿಹಾರವನ್ನು ಕೂಡಾ ನೀಡುವಂಥ ಸಮಸ್ಯೆಗೆ ಬಾಧ್ಯರಾಗಿದ್ದೇವೆ. ಪ್ರಯಾಣಿಕರ ಮತ್ತು ಸರಕು ಸಾಗಾಣಿಕೆಯ ದರವನ್ನು ಹೆಚ್ಚಿಸುವುದಕ್ಕೆ ಸಂಸತ್ತು ಸಮ್ಮತಿಸುವುದಾದರೆ, ನೌಕರರ ವೇತನ ಹೆಚ್ಚಿಸುವುದಕ್ಕೆ ನಾವು ಅಂಜುವಂತಿರಲಿಲ್ಲ. ಈ ವಿಷಯದ ನಿರ್ವಹಣೆಯಲ್ಲಿ ಸಂಸತ್ತು ನೀಡುವ ಸಲಹೆ ಸೂಚನೆಗಳಿಗೆ ಸದಾ ಸ್ವಾಗತವಿದೆ.

## ಸರಕು ಸಾಗಾಣಿಕೆಯ ಮಹತ್ವ

ಒಂದು ವಿಷಯವೆಂದರೆ ಹಿಂದೆಂದಿಗಿಂತಲೂ ಹೆಚ್ಚು ಸರಕು ಸಾಗಾಣಿಕೆಯ ಕುರಿತು ಚಿಂತಿಸುವುದು. ಈ ಕುರಿತು ಸರಕು ಸಾಗಾಣಿಕೆಯ ವ್ಯಾಗನ್‌ಗಳ ಸಂಖ್ಯೆಯನ್ನು ಹೆಚ್ಚಿಸುವ ಕುರಿತು ಚಿಂತಿಸಲಾಗಿದೆ. ಪ್ರತಿವರ್ಷ ನಾವು 6,000 ವ್ಯಾಗನ್‌ಗಳನ್ನು ನಿರುಪಯುಕ್ತ ಮಾಡಿ ಬಿಡುತ್ತಿದ್ದೆವು. ಈ ಸಲ ಅಂತಹ ವ್ಯಾಗನ್ ಗಳನ್ನು ವರ್ಕ್‌ಶಾಪ್‌ಗಳಲ್ಲಿ ದುರಸ್ತಿಗಾಗಿ ಕಳುಹಿಸಿದ್ದೇವೆ. ಖಾಸಗಿ ನಿರ್ಮಾಣ ಸಂಸ್ಥೆಗಳಿಗೂ ವ್ಯಾಗನ್‌ಗಳ ನಿರ್ಮಾಣಕ್ಕಾಗಿ ಬೇಡಿಕೆ ಸಲ್ಲಿಸಲಾಗಿದೆ. ಹಾಗೂ ನಮ್ಮಲ್ಲೂ ನಿರ್ಮಾಣ ಹೆಚ್ಚಿಸುವುದಕ್ಕೆ ಆಸ್ಪದ ನೀಡಲಾಗಿದೆ. ಮುಂದಿನ ಮೂರು ವರ್ಷಗಳಲ್ಲಿ ಸುಮಾರು 40,000ದಷ್ಟು ವ್ಯಾಗನ್‌ಗಳ ಉತ್ಪಾದನೆ ಸಾಧ್ಯವೆಂದು ಪರಿಗಣಿಸಲಾಗಿದೆ.

ಇನ್ನು ಪ್ರಮುಖ ಸರಕುಗಳ ಸಾಗಾಟದ ಕುರಿತೂ ಚಿಂತನೆ ನಡೆದಿದೆ. ಇದರಲ್ಲಿ ಬರಪೀಡಿತ ಪ್ರದೇಶಗಳಿಗೆ ಆಹಾರ ಧ್ಯಾನಗಳ ಸರಬರಾಜಿನ ಕುರಿತು ಒತ್ತು ನೀಡಲಾಗಿದ್ದು, ರಾಷ್ಟ್ರೀಯ ಆಹಾರ ನಿಗಮ ಮತ್ತು ಕೇಂದ್ರ ಕೃಷಿ ಮಂತ್ರಾಲಯದ ಬೇಡಿಕೆಯ ಮೇರೆಗೆ ಆಹಾರ ಧಾನ್ಯಗಳ ಸರಬರಾಜು ವಿವಿಧ ಪ್ರಾಂತ್ಯಗಳಿಗೆ ಮಾಡಲಾಗಿದ್ದು. ಇದರಿಂದ ಧಾನ್ಯಗಳ ಬೆಲೆಯೇರಿಕೆಯನ್ನು

ತಡೆಯುವಲ್ಲಿ ಶ್ರಮ ಕೈಗೊಂಡಿರುತ್ತೇವೆ. ಈ ದೇಶದ ರೇಲ್ವೇ ಸಿಬ್ಬಂದಿಗಳಿಗೆ ಇದಕ್ಕಾಗಿ ಧನ್ಯವಾದ ಸಲ್ಲಬೇಕಾಗಿದೆ.

ಎರಡನೇ ಮಹತ್ವದ ಅಂಶ ಅಂದರೆ, ಗೊಬ್ಬರ ಸರಬರಾಜಿನ ವಿಷಯ. ಅದನ್ನು ಯಶಸ್ವಿಯಾಗಿ ನಿರ್ವಹಿಸಿದ್ದೇವೆ. ಇನ್ನೊಂದು ಸಿಮೆಂಟ್ ಸಾಗಾಟ-ವಾಪಿ ಮತ್ತು ಇನ್ನೊಂದೆರಡು ಸ್ಥಳಗಳನ್ನು ಬಿಟ್ಟರೆ, ಮಿಕ್ಕೆಲ್ಲ ಕಡೆಗಳಿಂದ ಸಾಗಾಟ 90–95 ಶೇಕಡಾದಷ್ಟು ನಿರ್ವಹಿಸಲು ಸಾಧ್ಯವಾಗಿದೆ. ಕಲ್ಲಿದ್ದಲಿನ ಸರಬರಾಜು ಕೂಡಾ ಯಶಸ್ವಿಯಾಗಿ ನಡೆದಿದೆ. ಕಲ್ಲಿದ್ದಲಿನ ಮೇಲೆ ಪ್ರತಿಬಂಧವನ್ನು ಹೇರಿದ್ದೇ ಆದಲ್ಲಿ ದೇಶದ ಎಲ್ಲಾ ಭಾಗಕ್ಕೂ ಸರಬರಾಜನ್ನು ಸುಗಮಗೊಳಿಸಲು ಸಾಧ್ಯವೆಂದು ನಾನು ಉಕ್ಕು ಸಚಿವಾಲಯಕ್ಕೆ ಮನವಿ ಸಲ್ಲಿಸಿದ್ದೇನೆ.

ಕಳೆದ ವರ್ಷಕ್ಕೆ ಹೋಲಿಸಿದರೆ, ಈ ವರ್ಷ ಏಪ್ರಿಲ್‌ನಿಂದ ಸೆಪ್ಟೆಂಬರ್ ತನಕ ನಾವು 2ಮಿಲಿಯ ಟನ್ನುಗಳಿಗೂ ಮಿಕ್ಕಿ ಸರಕನ್ನು ಸಾಗಿಸಿದ್ದೇವೆ ಎಂದು ಹೇಳಬಹುದು. ದೇಶದಲ್ಲಿ ಯಾವುದೇ ಸಂಭವ ನಡೆದರೂ ಅದಕ್ಕೆ ಪ್ರಥಮವಾಗಿ ಬಲಿಪಶುವಾಗುವಂಥದ್ದು ರೇಲ್ವೇ. ದಕ್ಷಿಣದಲ್ಲಿ ಟೋಕೋ ಮುಷ್ಕರವಿರಲಿ. ಪಂಜಾಬಿನಲ್ಲಿ ಸಿನಿಮಾ ಥಿಯೇಟರ್ ಸಮಸ್ಯೆಯಿರಲಿ, ಅಸ್ಸಾಮಿನ ಭಾಷಾ ಸಮಸ್ಯೆಯಿರಲಿ ಮತ್ತು ಇದೀಗ ಆಂಧ್ರಪ್ರದೇಶದ ಸಮಸ್ಯೆಯಿರಲಿ, ಎಲ್ಲಕ್ಕೂ ರೇಲ್ವೇ ಈಡಾಗುವಂಥದ್ದು. ಕೆಲವು ನಿಲ್ದಾಣಗಳಿಗೆ ಬೆಂಕಿ ಹಚ್ಚಿರುವಾಗ ಆ ದಾರಿಯ ಎಲ್ಲಾ ಟ್ರೈನ್‌ಗಳನ್ನು ಸ್ಥಗಿತಗೊಳಿಸಬೇಕಾದ ಪ್ರಮೇಯ ಒದಗುತ್ತದೆ.

ಮಹಾರಾಷ್ಟ್ರ ಸರಕಾರ ವ್ಯಾಗನ್‌ಗಳ ಮೂಲಕ ಕುಡಿಯುವ ನೀರಿನ ಸರಬರಾಜಿಗೆ ಬೇಡಿಕೆ ಸಲ್ಲಿಸಿದಾಗ ಅದನ್ನು ನಾವು ಈ ವರ್ಷ ನಿರ್ವಹಿಸಿದ್ದೇವೆ. ಗುಜರಾತಿನಲ್ಲಿ ಹಾಗೂ ಇತರೆಡೆ ಹಸುಗಳ ಮೇವನ್ನು ಸಾಗಿಸಿದ್ದೂ ಇದೆ. ಈ ಹೆಚ್ಚುವರಿ ಬಾಧ್ಯತೆಗಳು ಹಿಂದೆಂದಿಗಿಂತಲೂ ಈಗ ಹೆಚ್ಚಾಗಿವೆ. ಇನ್ನೊಂದು ಸಮಸ್ಯೆ ವ್ಯಾಗನ್‌ಗಳನ್ನು ಕೊನೆಯ ನಿಮಿಷದಲ್ಲಿ ಕ್ಯಾನ್ಸಲ್ ಮಾಡುವಂಥದ್ದು. ಇತ್ತೀಚೆಗೆ ಗುಜರಾತಿನಲ್ಲಿ 80,000 ವ್ಯಾಗನ್‌ಗಳನ್ನು ಕ್ಯಾನ್ಸಲ್ ಮಾಡಿದ ಪ್ರಸಂಗವಿದೆ. ಹಾಗಾಗಿ ನಾವು ಬುಕ್ಕಿಂಗ್ ದರವನ್ನು ಹೆಚ್ಚಿಸುವ ಬಗ್ಗೆ ಯೋಚಿಸುತ್ತಿದ್ದೇವೆ. ಇನ್ನೊಂದು, ವ್ಯಾಗನ್‌ಗಳ ಧಕ್ಕೆ ಶುಂಕವನ್ನು ಹೆಚ್ಚಿಸುವ ಕ್ರಮದತ್ತ ನಮ್ಮ ಚಿಂತನೆ ನಡೆದಿದೆ. ಇದರಿಂದ ಗ್ರಾಹಕರು ವ್ಯಾಗನ್‌ಗಳನ್ನು ತಕ್ಷಣ ತಮ್ಮ ಸುಪರ್ದಿಯಿಂದ ಬಿಡುಗಡೆ ಮಾಡುವತ್ತ ಕಾಳಜಿ ವಹಿಸುತ್ತಾರೆ.

## ರೇಲ್ವೇ ಕಾಯಿದೆಗೆ ತಿದ್ದುಪಡಿ

ರೇಲ್ವೇ ಕಾಯಿದೆಗೆ ತಿದ್ದುಪಡಿ ತರುವ ಇರಾದೆಯನ್ನು ನಾನು ಸಂಸತ್ತಿನ ಮುಂದೆ ಇಡಲು ಬಯಸುತ್ತೇನೆ. ನಾವು ವರ್ಷಂಪ್ರತಿ 13 ಕೋಟಿ ರೂಪಾಯಿಯನ್ನು ಧಕ್ಕೆ ಸುಂಕ ಮತ್ತು ಡ್ಯಾಮರೇಜ್ ಮೂಲಕ ಸಂಗ್ರಹಿಸುತ್ತಿದ್ದರೂ, ಇದಕ್ಕೆ ವಿಧಿಸುವ 30ದಿನಗಳ ಅವಧಿಯನ್ನು ಮೊಟಕುಗೊಳಿಸಿ 7ದಿನಗಳಿಗೆ ಇಳಿಸುವ ಕುರಿತು ಚಿಂತನೆ ನಡೆದಿದೆ. 13ಕೋಟಿಯನ್ನು ಈ ಮೂಲಕ ಸಂಪಾದಿಸುವುದಕ್ಕಿಂತ ಅದೇ ಸಮಯ ಸರಕು ಸಾಗಾಣಿಕೆಯಿಂದ ಹೆಚ್ಚಿನ ಸಂಪಾದನೆ ಸಾಧ್ಯವಾಗುತ್ತದೆ. ಸಾಗಾಟದಲ್ಲಿ ಸುಮಾರು 13ಕೋಟಿ ಕಳ್ಳಕಾಕರ ಪಾಲಾಗುತ್ತಿದೆ. ಕಳ್ಳತನದ ತಡೆಗಟ್ಟುವಿಕೆಯ ಮೇಲೂ ನಿಯಂತ್ರಣ ಸಾಧಿಸಲು ಪ್ರಯತ್ನ ನಡೆದಿದೆ. ವರ್ಷಕ್ಕೆ 7,000 ಕೋಟಿ ಮೊಬಲಿಗಿನ ಸರಕನ್ನು ನಾವು ಸಾಗಿಸುತ್ತಿದ್ದರೂ, ಸರಕು ಸಾಗಾಟದಿಂದ ಬರುವ ನಮ್ಮ ವರಮಾನ ಕೇವಲ 700 ಕೋಟಿ ರೂಪಾಯಿ. ನಮ್ಮದು ಬಡ ರಾಷ್ಟ್ರ. ಕಳ್ಳತನದಿಂದ ಪೋಲಾಗುವ 13 ಕೋಟಿಯೇನೂ ಸಣ್ಣ

ಮೊತ್ತವಲ್ಲ. ಇದರ ನಿಯಂತ್ರಣ ಖಂಡಿತ ಮಾಡಲೇಬೇಕು. ರೇಲ್ವೇ ಸಂರಕ್ಷಣಾ ಪೊಲೀಸರ ಮೇಲೆ ನಾವು 18ಕೋಟಿಯನ್ನು ವ್ಯಯ ಮಾಡುತ್ತಿದ್ದೇವೆ.

**ಶ್ರೀ ಪೀಲೂ ಮೋದಿ:** ಪೊಲೀಸರಿಂದಾಗಿ ಬರೀ 14ಕೋಟಿ ನಷ್ಟ?

**ಶ್ರೀ ಟಿ.ಎ.ಪೈ:** ಇಲ್ಲ. ಈ 13ಕೋಟಿಯಲ್ಲಿ 5 ಅಥವಾ 6ಕೋಟಿ ಕಳ್ಳತನದ ಬಾಬ್ತು ಹೋದರೆ, ಮಿಕ್ಕ ಹಣ ಪರಿಹಾರದ ರೂಪದಲ್ಲಿ ತೆರಬೇಕಾದ ಪ್ರಸಂಗ ಬರುತ್ತದೆ. ಉದಾಹರಣೆಗೆ ಹಣ್ಣು ಹಂಪಲು ತರಕಾರಿಗಳ ಸಾಗಾಟ. ಅದು ತನ್ನ ಗಮ್ಯಸ್ಥಾನವನ್ನು ತಲಪುವಾಗ ಕೊಳೆತು ಹೋಗಿರುತ್ತದೆ. ಹಣ್ಣು ಮತ್ತು ತರಕಾರಿಗಳ ಪ್ಯಾಕೇಜ್ ಕೂಡಾ ಸರಿಯಾಗಿರುವುದಿಲ್ಲ. ಇವುಗಳ ನಿರ್ವಹಣೆ ಸುಧಾರಿಸಿದಲ್ಲಿ ಹೆಚ್ಚಿನ ಆದಾಯ ನಿರೀಕ್ಷಿಸಬಹುದು. ಟಿಕೆಟ್ ರಹಿತ ಪ್ರಯಾಣದಿಂದಲೂ ನಷ್ಟವುಂಟಾಗುತ್ತಿದೆ. ಈ ನಷ್ಟ 20-25 ಕೋಟಿಗಳಷ್ಟು ಆಗಿರುತ್ತದೆ. ಇದರಲ್ಲಿ ಒಂಭತ್ತು ಶೇಕಡಾ ವಿದ್ಯಾರ್ಥಿಗಳೂ, 32ಶೇಕಡಾ ಕೃಷಿ ಕಾರ್ಮಿಕರೂ, 23 ಶೇಕಡಾ ಸಣ್ಣ ವ್ಯಾಪಾರಿಗಳೂ ಸೇರಿದ್ದಾರೆ. ಈ ನಿಟ್ಟಿನಲ್ಲಿ ಜನರ ಮರ್ಜಿಯನ್ನು ಬದಲಾಯಿಸಬೇಕಾಗಿದೆ. ಟಿಕೇಟು ರಹಿತ ಪ್ರಯಾಣದ ನಷ್ಟವನ್ನು ನಾನು ಅವಗಣನೆ ಮಾಡುವುದಿಲ್ಲ.

ಚೈನ್ ಎಳೆದು ರೈಲನ್ನು ನಿಲ್ಲಿಸುವ ಬಗೆಗೆ ಕಳೆದ ಸಾರಿ ರೇಲ್ವೇ ಕಾಯಿದೆಗೆ ತಿದ್ದುಪಡಿ ತಂದಿರುವುದು ಒಳಿತೇ ಅಯಿತು. ಈ ಅಪರಾಧಕ್ಕೆ 250ರೂಪಾಯಿ ದಂಡ ಮತ್ತು ಸೆರೆವಾಸ ವಿಧಿಸಿದ್ದು ಸಮರ್ಪಕವೇ. ಭಾರತದಲ್ಲಿ ದಿನವೊಂದಕ್ಕೆ ಎಷ್ಟು ಸಲ ರೈಲನ್ನು ಚೈನ್ ಎಳೆದು ನಿಲ್ಲಿಸಲಾಗುತ್ತಿದೆ ಎಂಬ ಕಲ್ಪನೆ ನಿಮಗಿದೆಯೇ? ಪ್ರತಿದಿನ ಸರಾಸರಿ ಸುಮಾರು 800ಸಲ.

**ಶ್ರೀ ಪೀಲೂ ಮೋದಿ:** ರೈಲು ಹಲವು ಸಲ ತನ್ನಷ್ಟಕ್ಕೇ ನಿಲ್ಲುವುದೂ ಉಂಟು.

**ಶ್ರೀ ಟಿ.ಎ.ಪೈ:** ಅದು ತನ್ನಷ್ಟಕ್ಕೆ ನಿಂತರೆ ಅದನ್ನು ಹೆಚ್ಚುವರಿ ನಿಲುಗಡೆ ಅಂತ ತಿಳಿದುಕೊಳ್ಳಬೇಕು. ಪ್ರಯಾಣಿಕರ ರೈಲನ್ನು ಸಮಯಕ್ಕೆ ಸರಿಯಾಗಿ ಓಡಿಸಬೇಕೆಂಬ ಆಗ್ರಹ ಇದ್ದಾಗ್ಯೂ, ಸರಕು ಸಾಗಾಣಿಕೆಯ ರೈಲುಗಳನ್ನು ಅಷ್ಟೇ ತ್ವರಿತವಾಗಿ ಸಾಗಿಸುವಂಥದ್ದು ಅಷ್ಟೇ ಅವಶ್ಯ, ಯಾಕಂತಂದ್ರೆ, ನಮ್ಮ ಆದಾಯದ ಬೃಹತ್ ಪಾಲು ಸರಕು ಸಾಗಾಟದಿಂದಲೆ ಬರುವಂಥದ್ದು.

## ಬಂತೈ ಬಂತೈ ಕೊಂಕಣ ರೈಲು!

ರೇಲ್ವೇ ಯಾವುದೇ ಪ್ರದೇಶದ ಹಿಂದುಳಿಯುವಿಕೆಯನ್ನು ಹೋಗಲಾಡಿಸುತ್ತದೆ ಎಂಬ ಕಲ್ಪನೆಯಿದೆ. ದೇಶದ ಕೆಲವೆಡೆ 50–100 ವರ್ಷಗಳಿಂದ ರೈಲು ಇದ್ದಾಗ್ಯೂ ಅಲ್ಲಿನ ಹಿಂದುಳಿಯುವಿಕೆ ಅಳಿದಿಲ್ಲ. ಯೋಜಿತ ಅಭಿವೃದ್ಧಿಯಿದ್ದಲ್ಲಿ ರೇಲ್ವೇ ಪೂರಕವಾಗಿ ಕೆಲಸಮಾಡುತ್ತದೆ. ಉದಾಹರಣೆಗೆ ಕೊಂಕಣ ರೇಲ್ವೇಯನ್ನೇ ತೆಗೆದುಕೊಳ್ಳಿ. ನಾನು ವೈಯಕ್ತಿಕವಾಗಿ ಇದರ ಬಗ್ಗೆ ಆಸಕ್ತನಾಗಿದ್ದೇನೆ. ನಾನು ಭಾರತದ ರೇಲ್ವೇ ನಕ್ಷೆಯನ್ನು ನೋಡುವಂಥ ವೇಳೆ ಈ 'ಗ್ಯಾಪ್'ನ್ನು ಯಾಕೆ ಹಾಗೆಯೇ ಬಿಡಬೇಕು ಅಂತ ಚಿಂತಿಸುತ್ತಿರುತ್ತೇನೆ. ನಾನು ಮಹಾರಾಷ್ಟ್ರ ಸರಕಾರದ ಜತೆಗೆ ನಿವೇದನೆ ಸಲ್ಲಿಸಿದ್ದೇನೆ–ಏನಂದ್ರೆ, ಅವರು ರತ್ನಗಿರಿ ಜಿಲ್ಲೆಯಲ್ಲಿ ಗೊಬ್ಬರ ಅಥವಾ ಅಲ್ಯುಮಿನಿಯಂ ಕಾರ್ಖಾನೆಯೊಂದನ್ನು ಸ್ಥಾಪಿಸಲು ಸಾಧ್ಯವೆ? ಅಂತ. ಈ ರೀತಿಯ ಪೂರಕ ಯೋಜನೆಯಿಂದ ಕೆಲಸ ಸುಗಮವಾಗುತ್ತದೆ. ಕೊಂಕಣ ರೇಲ್ವೇ ಬಂದೆ ಬರುತ್ತದೆ ಎಂಬುದಂತೂ ಖಾತ್ರಿ. ಮಂಗಳೂರಿನಿಂದ ಮತ್ತು ಅಪಾಟದಿಂದ –ಎರಡೂ ಕಡೆಗಳಿಂದ ಕೆಲಸ ಪ್ರಾರಂಭಿಸಬೇಕಾಗಿದೆ. ಇದಕ್ಕೆ 20 ವರ್ಷಗಳ ಕಾಲಾವಕಾಶವಾದರೂ ಬೇಕಾಗುತ್ತದೆ.

ಇದನ್ನು ಎಷ್ಟು ಬೇಗನೆ ಸಾಧ್ಯವೋ ಅಷ್ಟು ಬೇಗನೇ ಮಾಡಿ ಮುಗಿಸುವ ಆಶಯ ನನ್ನದು. ಅಂತೆಯೇ ಯಾರೆಲ್ಲ ಸದಸ್ಯರು ಈ ಯೋಜನೆಯ ಪ್ರಾಮುಖ್ಯತೆಯನ್ನು ಕಂಡುಕೊಂಡಿರುತ್ತಾರೆಯೋ, ಅವರೆಲ್ಲ ನನಗೆ ಸಹಾಯ ಮಾಡಬೇಕು- ಯಾಕೆಂದರೆ ಇದು ಆರ್ಥಿಕವಾಗಿ ಫಲಪ್ರದವಾಗಬೇಕಾಗಿದ್ದು ಯಾವುದೇ ರೀತಿಯಲ್ಲಿ ನಷ್ಟದ ದಾರಿಗೆ ಎಡೆಮಾಡಿಕೊಡುವಂತೆ ಆಗಬಾರದು. ಈ ಯೋಜನೆಯ ವೆಚ್ಚ 200ಕೋಟಿಯಾಗಿದ್ದು, ರೇಲ್ವೇ 5% ಇದರಲ್ಲಿ ಕಳಕೊಂಡದ್ದೇ ಆದಲ್ಲಿ ಒಟ್ಟು ನಷ್ಟ 10 ಕೋಟಿ ರೂ.ಆಗುತ್ತದೆ. ಅದನ್ನು ರೇಲ್ವೇ ಭರಿಸುವುದು ದುಸ್ಸಾಧ್ಯವಾಗುತ್ತದೆ. ಯಾವುದೇ ಮಾರ್ಗ ಪ್ರತಿ ವರ್ಷ 10ಕೋಟಿ ಶಾಶ್ವತವಾಗಿ ನಷ್ಟಹೊಂದುತ್ತದೆಯಾದರೆ ಅದು ನಮಗೆ ಬೇಡ. ರೇಲ್ವೇ ಬೋರ್ಡಿಗೂ ನಾನು ಈ ಬಗ್ಗೆ ಸೂಚನೆ ನೀಡಿದ್ದೇನೆ. ಅದಕ್ಕಿರುವ ಪರಿಹಾರ ಮಾರ್ಗವೆಂದರೆ, ಅಂತಹ ಮಾರ್ಗಗಳನ್ನು ತೆಗೆದು ಹಾಕುವುದಷ್ಟೇ. ಈ ಪ್ರಸ್ತಾಪಿತ ಮಾರ್ಗದಲ್ಲಿ ಸರಕು ಸಾಗಾಣಿಕೆಗಾಗಿ ವಿಶೇಷ ದರಗಳನ್ನು ನಮೂದಿಸಿ ಟ್ರಕ್‌ಗಳ ದಾರಿಗೆಯೊಂದಿಗೆ ಪೈಪೋಟಿ ನಡೆಸಿದರೆ ಹೇಗೆ ಅಂತ? ಯಾವುದೇ ಮಾರ್ಗ ಆರ್ಥಿಕವಾಗಿ ಫಲಪ್ರದವಾಗಿಲ್ಲವಾದರೆ, ಅದರ ಕೊಡಗುವಿಕೆಯ ಅಂತಿಮ ನಿರ್ಧಾರಕ್ಕೆ ಮೊದಲು, ನಾವು ಎಲ್ಲಾ ಬಗೆಯ ಮುಂದಾಲೋಚನೆ ಮಾಡಿದ್ದೇವೆ ಎಂಬ ತೃಪ್ತಿ ನಮಗಿರಬೇಕು.

**ಪ್ರೊ। ಮಧು ದಂಡವತೆ:** ಮಹಾರಾಷ್ಟ್ರದ ಮುಖ್ಯಮಂತ್ರಿಯವರು ಬರಪರಿಹಾರದ ಒಂದು ನಿಮಿತ್ತವಾಗಿ ವಸ್ತು ನಿಷ್ಠವಾದ ನೆಲೆಯಲ್ಲಿ ಈ ಕೆಲಸವನ್ನು ಪ್ರಾರಂಭಿಸಬೇಕೆಂದು ಪ್ರಸ್ತಾವನೆ ಸಲ್ಲಿಸಿದ್ದಾರೆ.

**ಶ್ರೀ ಟಿ.ಎ.ಪೈ:** ದುರದೃಷ್ಟದಿಂದ ಆ ಮಾರ್ಗದ ಕೆಲಸ ನಾಳೆಯೇ ಪ್ರಾರಂಭಿಸಬೇಕಂದರೆ ಆಗುವುದಿಲ್ಲ - ಮೊದಲು ಪರಿಹಾರದ ಕೆಲಸ ಪ್ರಾರಂಭಿಸಬೇಕಾಗುತ್ತದೆ. ಅದನ್ನು ಮಾಡಲು ನಾನೂ ಸಿದ್ಧನಿದ್ದೇನೆ. ಯಾವುದೇ ಯೋಜನೆಯಲ್ಲಿ ಮೂರನೇ ಒಂದಂಶ ವೆಚ್ಚ ಕಾಮಗಾರಿಗೆ ಹೋಗುತ್ತದೆ. ಇದರ ಒಟ್ಟು ವೆಚ್ಚ 5ಕೋಟಿ ಅಂತಾದರೆ ಅದರಲ್ಲಿ 2 ಕೋಟಿ ಕಾಮಗಾರಿಗೆ ಹೋಗುತ್ತದೆ. ಒಂದೊಮ್ಮೆ ಯೋಜನಾ ಆಯೋಗ ಆ ಎರಡು ಕೋಟಿಯನ್ನು ಔದ್ಯೋಗೀಕರಣಕ್ಕೆಂದು ತುಂಬಿಕೊಟ್ಟರೆ ಈ ರೇಲ್ವೇ ಲೈನ್ ಹೆಚ್ಚು ಸುಲಭವಾಗಿ ಕಾರ್ಯರೂಪಕ್ಕೆ ಬರಬಹುದು. ನಾನು ನನ್ನ ನೆಲೆಯಲ್ಲಿ ಸಾಕಷ್ಟು ಪ್ರಯತ್ನ ಮಾಡುತ್ತೇನೆ- ಹಾಗೆ ಮಾಡಿದರೆ ಮಾತ್ರ ದೇಶದ ಎಲ್ಲಾ ಭಾಗಗಳು ಅಭಿವೃದ್ಧಿ

ಪಥದತ್ತ ಸಾಗಲು ಅನುವು ಮಾಡಿಕೊಟ್ಟಂತಾಗುತ್ತದೆ. ನಿರುದ್ಯೋಗದ ಸಮಸ್ಯೆಯನ್ನು ನೀಗಿಸುವ ನಿಟ್ಟಿನಲ್ಲಿ ಇದೊಂದೇ ಯೋಜನೆಯಲ್ಲಿ ಇನ್ನೂ ಅನೇಕ ಯೋಜನೆಗಳನ್ನು ಕೈಗೆತ್ತಿಕೊಳ್ಳುವ ಇರಾದೆ ನನಗಿದೆ. ಒಂದೇ ಒಂದು ಸಮಸ್ಯೆ ಅಂದರೆ ಈ ಕಾಮಗಾರಿಯನ್ನು ನಾವು ಹೇಗೆ ಕಾರ್ಯರೂಪಕ್ಕೆ ತರುವುದು ಅಂತ? ಕಂಟ್ರಾಕ್ಟುದಾರರಿಗೆ ಇದನ್ನು ವಹಿಸಿಕೊಡುವುರಿಂದ ಬಹಳ ದುಬಾರಿಯಾಗುವ ಸಾಧ್ಯತೆಯಿದೆ. ನಾವೇ ಕಾಮಗಾರಿಯನ್ನು ಸಂಘಟಿಸುವುದರಿಂದ ವೆಚ್ಚವನ್ನು ತಗ್ಗಿಸಲು ಸಾಧ್ಯವಾಗಬಹುದು. ಅದಲ್ಲವಾದರೆ ಯಾವುದೇ ಯೋಜನೆ ಔದ್ಯೋಗೀಕರಣಕ್ಕೆ ಇಂಬುನೀಡಲಾರದು. ನಾವು ಹಳೆಯ ಮಾದರಿಗಳನ್ನು ಇಂತಹ ಸಮಸ್ಯೆಗಳ ಪರಿಹಾರಕ್ಕೆ ಬಳಸಲು ಬರುವುದಿಲ್ಲ.

## ರೇಲ್ವೇ ಬೋರ್ಡ್–ಕಾರ್ಯಕ್ಷಮತೆ

ರೇಲ್ವೇ ಬೋರ್ಡ್‌ನ ಬಗೆಗಿನ ಅಸಂತೋಷ ನನ್ನ ಗಮನಕ್ಕೆ ಬಂದಿದೆ. ನಮ್ಮ ದೇಶದಲ್ಲಿ ತಾಂತ್ರಿಕ ವರ್ಗ ಈ ಬೋರ್ಡ್‌ನ್ನು ನಡೆಸುವಂತಾಗಬೇಕೆಂಬ ಸೂಚನೆ ಬಂದಿದೆ. ನನಗೆ ತಿಳಿದಿರುವಂತೆ ಬೋರ್ಡ್‌ನಲ್ಲಿರುವವರೆಲ್ಲ ತಾಂತ್ರಿಕ ವರ್ಗದವರೇ. ಒಬ್ಬನೇ ಒಬ್ಬ ಐ.ಎ.ಎಸ್ ಅಥವಾ ಐ.ಸಿ.ಎಸ್. ಅಧಿಕಾರಿ ಅಲ್ಲಿಲ್ಲ. ಎರಡನೆಯದಾಗಿ ಕಂಪೆನಿಯೊಂದನ್ನು ನೇಮಿಸಿ ಅದರ ಮೂಲಕ ನಡೆಸುವಂಥ ಕಲ್ಪನೆ. ಕಂಪೆನಿಯ ಅಧ್ಯಕ್ಷರು ಎಕ್ಸ್–ಅಫೀಶಿಯೋ ಕಾರ್ಯದರ್ಶಿಯಾಗುವುದರಿಂದ ಅವರಿಗೆ ಸಂಪೂರ್ಣ ಸ್ವಾತಂತ್ರ್ಯವಿರುತ್ತದೆ. ಈ ವಿಚಾರ ನಮ್ಮಲ್ಲಿ ಈಗಾಗಲೇ ಅಸ್ತಿತ್ವದಲ್ಲಿದೆ. ಈ ಹೊಸ ವಿಚಾರವನ್ನು ಇತರ ಮಂತ್ರಾಲಯಗಳಲ್ಲಿ ಬೆಳೆಸಿ ಅಂತ ನೀವು ಹೇಳುತ್ತಿರುವ ಕಾಲದಲ್ಲಿ, ನಮ್ಮಲ್ಲಿ ಅದನ್ನು ಅನೂರ್ಜಿತಗೊಳಿಸಿ ಅಂತ ಹೇಳುವುದು ಸರಿಯಲ್ಲ.

ಇಂದು ದೇಶದಲ್ಲೇ ಭಾರತೀಯ ರೇಲ್ವೇ ಅತ್ಯಂತ ದೊಡ್ಡ ವ್ಯವಸ್ಥೆಯಾಗಿದೆ. ನಾವಿಂದು 200 ಮಿಲಿಯ ಟನ್‌ಗಳಷ್ಟು ಸರಕು ಸಾಗಿಸುತ್ತಿದ್ದೇವೆ. 5ನೇ ಯೋಜನೆಯ ಕೊನೆಯಲ್ಲಿ ಇದು 300 ಮಿಲಿಯ ಆಗಬಹುದು ಎಂದು ಅಂದಾಜಿಸಲಾಗಿದೆ, ಅಥವಾ 50% ಹೆಚ್ಚುವರಿ ಭಾರ. ಹಾಗಾಗಿ ನಾವು ಹೊಸ ಸವಾಲುಗಳನ್ನು ಎದುರಿಸಬೇಕಾಗಿದೆ. ಇದರಲ್ಲಿ ಅತೀ ದೊಡ್ಡ ಸಮಸ್ಯೆ ಅಂದರೆ, ರೇಲ್ವೇ ಕಾರ್ಮಿಕರೇ ಹದಿನೇಳುವರೆ ಲಕ್ಷ ಮಂದಿ ಇದ್ದಾರೆ. ಇದರಲ್ಲಿ ತಾತ್ಕಾಲಿಕ ನೌಕರರೂ ಶಾಶ್ವತ ಉದ್ಯೋಗಿಗಳೂ ಇದ್ದಾರೆ– ಇದೇ ನಮ್ಮ ದೊಡ್ಡ ಪಡೆ. ಈ

ಮಾನವ ಶಕ್ತಿಯನ್ನು ಹೇಗೆ ಬಲಪಡಿಸುವುದು? ರೇಲ್ವೇಯ ಅಭಿವೃದ್ಧಿ ಅಂದರೆ ಅದರ ಮಾನವ ಶಕ್ತಿಯ ಅಭಿವೃದ್ಧಿಯೇ. ಈ ಶಕ್ತಿಯ ಸೂಕ್ತ ಬಳಕೆಯನ್ನು ಹೇಗೆ ಮಾಡಬಹುದು? ವ್ಯಾಗನ್‌ಗಳನ್ನು ಅದರ ಪೂರ್ತಿ ಪ್ರಮಾಣಕ್ಕೆ ತಕ್ಕಹಾಗೆ ಬಳಸುವುದು ಹೇಗೆ ಸಾಧ್ಯ? ಇವೆಲ್ಲ ನಾನು ಎದುರಿಸುವ ಸಮಸ್ಯೆಗಳು.

ಹಾಗಾಗಿಯೇ ಕೆಲವು ವಿಭಾಗೀಯ ಅಧಿಕಾರಿಗಳನ್ನು ಒಂದು ರಾಜ್ಯದಿಂದ ಇನ್ನೊಂದಕ್ಕೆ ವರ್ಗಾಯಿಸುವಂತೆ ನನಗೆ ಸಲಹೆ ನೀಡಿದಾಗ, ನಾನು ಹೇಳಿದೆ, ದಯವಿಟ್ಟು ಈಗ ಅದನ್ನು ನನಗೆ ಮಾಡುವಂತೆ ಒತ್ತಾಯಿಸಬೇಡಿ– ಯಾಕೆಂದರೆ ಸದ್ಯದ ಪರಿಸ್ಥಿತಿಯಲ್ಲಿ ಅದು ಪ್ರಾಮುಖ್ಯವಲ್ಲ– ಯಾಕೆಂದರೆ ಈಗ ನಿಮ್ಮ ಆಗ್ರಹ ವ್ಯಕ್ತಿಗಳನ್ನು ಸ್ಥಾನಾಂತರಿಸುವುದು.

ಶೋಲಾಪುರದ ನನ್ನ ಮಾನ್ಯ ಮಿತ್ರರು ಹೇಳಿದರು, ಶೋಲಾಪುರ ವಿಭಾಗವನ್ನು ಪ್ರತ್ಯೇಕಿಸಿ ಅದನ್ನು ದಕ್ಷಿಣ ಮಧ್ಯ ರೇಲ್ವೇಗೆ ಸೇರಿಸಲಾಗಿದೆ ಅಂತ. ಹೀಗೆ ಸೂಚನೆ ನೀಡುವ ಪ್ರತಿಯೊಬ್ಬರೂ, ಅದನ್ನು ಬಾಯಿಬಿಟ್ಟು ಹೇಳಿಲ್ಲವಾದರೂ, ಒಂದು ವೇಳೆ ಇಂತಹ ಸಲಹೆಗಳನ್ನು ಕಾರ್ಯರೂಪಕ್ಕೆ ತಾರದೆ ಹೋದರೆ ಅಲ್ಲಿ ಪ್ರತಿಭಟನೆಗೆ ಸಾಧ್ಯತೆಯಿದೆ ಅಂತ. ಎಲ್ಲಾ ಸಲಹೆಗಳಿಗೂ ನಾವು ಅಸ್ತು ಎನ್ನುವುದಕ್ಕೆ ಆಗುವುದಿಲ್ಲ. ಅದು ನ್ಯಾಯಸಮ್ಮತವಾಗಿರಬೇಕು. ನಾವು ಅಂಥದ್ದಕ್ಕೆ ವಿರೋಧಿಗಳಲ್ಲ. ನನ್ನ ದೃಷ್ಟಿಯಲ್ಲಿ ಇಷ್ಟೇ– ರೇಲ್ವೇ ವರಮಾನ ತರುವ ಇಲಾಖೆಯಾಗಬೇಕು. ಇದೊಂದು ವ್ಯಾಪಾರೀ ಸಂಸ್ಥೆಯಾಗಿರುವುದರಿಂದ ಸಂಪಾದನೆಯೇ ನಮ್ಮ ಪ್ರಮುಖ ಗುರಿಯಾಗುತ್ತದೆ. ಏನಿದ್ದರೂ ಎಲ್ಲಾ ಸಲಹೆಗಳನ್ನು ನಾನು ಪರಿಶೀಲಿಸುವವನಿದ್ದೇನೆ.

**ಶ್ರೀ ಪೀಲೂ ಮೋದಿ:** ಇವೆಲ್ಲ ಈ ಸದನದ ದೂಷಣೆಯಲ್ಲವೇ?

## ಸದಸ್ಯರ ಪತ್ರಕ್ಕೆ ದಿಢೀರ್ ಉತ್ತರ

ಶ್ರೀ ಟಿ.ಎ.ಪೈ: ನಾನು ಹೇಳಿದೆನಲ್ಲ, ನೀವು ಸೂಚಿಸುವ ಸಮಸ್ಯೆಗಳನ್ನು ನಾನು ಪರಿಶೀಲಿಸುತ್ತೇನೆ ಅಂತ. ಅಷ್ಟೇ ಅಲ್ಲ, ಪ್ರತಿಯೋರ್ವ ಸಂಸತ್ಸದಸ್ಯ ಬರೆದ ಪತ್ರಕ್ಕೂ ಉತ್ತರ ಬರೆಯುವ ವ್ಯವಧಾನ ತೆಗೆದುಕೊಂಡಿದ್ದೇನೆ. ಯಾವುದೇ

ಪತ್ರಕ್ಕೆ ಉತ್ತರ ಸಿಕ್ಕಿಲ್ಲ ಅಂತಾದರೆ, ಆ ಪತ್ರ ನನ್ನ ಕೈಸೇರಿಲ್ಲವೆಂದೇ ಅರ್ಥ. ನನ್ನ ಸಹೋದ್ಯೋಗಿ ಶ್ರೀ ಖುರೇಷಿಯವರು ಉತ್ತರ ಕೊಟ್ಟಿದ್ದರೆ, ಈ ಸದನ ಅವರನ್ನು....

**ಶ್ರೀ ಭಗವತ್ ಝಾ ಆಜಾದ್:** ರೇಲ್ವೇಯವರು ಈಗೊಂದು ಹೊಸ ನೀತಿಯನ್ನು ಅನುಸರಿಸಲು ಪ್ರಾರಂಭಿಸಿದ್ದಾರೆ. ಹಿಂದೆಲ್ಲ ಪತ್ರಗಳಿಗೆ ಸ್ವತಃ ಸಚಿವರೇ ಸಹಿಹಾಕುತ್ತಿದ್ದರು. ಈಗ ಅದಕ್ಕೆ ಒಂದು ಷರಾ ಬರೆಯುತ್ತಿದ್ದಾರೆ, ರೇಲ್ವೇ ಬೋರ್ಡ್‌ನವರು. ಸ್ವತಃ ಸಚಿವರು ಪತ್ರ ಬರೆಯುವುದರಿಂದ ಉಳಿಸುವುದಕ್ಕಾಗಿ ಹೀಗೆ ಮಾಡಿರುತ್ತಾರೆ. ಇದು ರೇಲ್ವೇ ಬೋರ್ಡಿನ ಕರಾಮತ್ತು.

**ಶ್ರೀ ಟಿ.ಎ. ಪೈ:** ಅದು ಹಿಂದಿನ ಪರಿಸ್ಥಿತಿ. ನಾನು ಬಂದ ಮೇಲೆ ಅದನ್ನು ಬದಲಾಯಿಸಿದ್ದೇನೆ. ನನ್ನ ಉತ್ತರದಲ್ಲಿ ನಮ್ಮ ಕಷ್ಟಗಳನ್ನೆಲ್ಲ ಹೇಳಿಕೊಂಡಿದ್ದೇನೆ.– ಅದನ್ನು ನೀವು ಸ್ವೀಕರಿಸುತ್ತೀರೋ ಇಲ್ಲವೋ ಅದು ಬೇರೆ ಮಾತು. ಆದರೂ ನಿಮಗೆ ಮಾರೋಲೆ ಬರುವುದು ಖಚಿತ ಮತ್ತು ಅದು ನಿಮ್ಮ ಹಕ್ಕು ಎಂದು ತಿಳಿಯಿರಿ. ಸಂಸತ್ ಸದಸ್ಯರು ನಮ್ಮ ದೇಶದ ಜನಪ್ರತಿನಿಧಿಗಳು ಎಂದು ಸದಾ ನನ್ನ ಅಧಿಕಾರಿಗಳಿಗೆ ಹೇಳುತ್ತ ಬಂದಿದ್ದೇನೆ. ಆದ್ದರಿಂದ ಅವರು ನೀಡುವ ಸಲಹೆಗಳನ್ನು ನಾನು ಸ್ವತಃ ವಿಶ್ಲೇಷಿಸುತ್ತೇನೆ. ಒಂದು ತಿಂಗಳಲ್ಲಿ ಸ್ವೀಕರಿಸಲಾದ ಪತ್ರಗಳ ಸಂಖ್ಯೆಯೂ ನನಗೆ ತಿಳಿದಿದ್ದು ಅದಕ್ಕೆ ಎಷ್ಟು ನಕಾರ ಸೂಚಿಸಿದ್ದೇನೆ ಎಂಬುದನ್ನೂ ಬಲ್ಲೆ. ನಮ್ಮ ದೇಶದಲ್ಲಿ ನಕಾರಾತ್ಮಕ ಉತ್ತರವನ್ನು ನೀಡುವುದು ಸುಲಭ. ನೀವು ಸಕಾರಾತ್ಮಕವಾದಿರೋ ಅದರ ಜವಾಬ್ದಾರಿಯನ್ನು ನಿಮ್ಮ ತಲೆಯ ಮೇಲೆ ಹೊತ್ತುಕೊಳ್ಳಬೇಕಾಗುತ್ತದೆ. ಆಡಳಿತದಲ್ಲಿ ಈ ಬಗೆಯ ಅಭ್ಯಾಸ ಬೆಳೆದುಬಿಟ್ಟಿದೆ ಮತ್ತು ಅವರ ತಲೆಯಿಂದ ಇದನ್ನು ನಾನು ತೆಗೆದು ಹಾಕಲು ಪ್ರಯತ್ನಿಸಿದ್ದೇನೆ. ಅವರಿಗೆ ನನ್ನ ಸೂಚನೆ ಇಷ್ಟೇ: 'ಯಾವತ್ತೂ ಆಗುವುದಿಲ್ಲ ಅನ್ನಬೇಡಿ. ಆ ವಿಷಯದ ಬಗೆಗೆ ಆಲೋಚಿಸಿ ಎಷ್ಟರ ಮಟ್ಟಿಗೆ ಅದು ಸಾಧುವೋ ಮಾಡಲು ಪ್ರಯತ್ನಿಸಿ. ಸಾಧ್ಯವಾದರೆ ಆ ಸಂಸತ್ ಸದಸ್ಯರನ್ನು ಕರೆದು ಒಂದು ವೈಯಕ್ತಿಕ ಮಾತುಕತೆ ನಡೆಸಿ. ಯಾಕೆಂದರೆ ನಮ್ಮಲ್ಲಿ ಸದಸ್ಯರು ತುಂಬಾ ಸಂಭಾವಿತರು– ನೀವು ಅವರ ಸಲಹೆಯಿಂದಾಗುವ ಪರಿಣಾಮಗಳನ್ನು ವಿವರಿಸಿ ಹೇಳಿ...' ಅಂತ.

ನನಗೆ ಸ್ವಲ್ಪ ಸಮಯಾವಕಾಶ ಬೇಕು....

ಶ್ರೀ ಪೀಲೂ ಮೋದಿ: ರೇಲ್ವೇಯಿಂದ ನನ್ನೆಲ್ಲ ಪತ್ರಗಳಿಗೂ ಉತ್ತರ ಬಂದಿದೆ.

ಶ್ರೀ ಹುಕುಂ ಚಂದ್ ಕಛವಾಯ್: ನಿಮ್ಮ ಪವಾರೋಲೆಗಳು ಹಸ್ತಗತವಾಗುತ್ತಿವೆ. ಆದರೆ ನಿಮ್ಮಂತೆ ಅಧಿಕಾರಿಗಳು ಉತ್ತರಿಸುತ್ತಿಲ್ಲವಲ್ಲ? ನೀವು ನೀವು ಹೇಗೆ ನಮಗೆ ಉತ್ತರ ಬರೆಯುತ್ತೀರೋ, ಹಾಗೆಯೇ ಅವರೂ ಬರೆಯುವಂತೆ ತಾಕೀತು ಮಾಡಿ.

ಶ್ರೀ ಟಿ.ಎ.ಪೈ: ನಿಮಗೆ ನೆನಪಿರಲಿ - ನನಗೆ ಪ್ರತಿ ತಿಂಗಳು 4,000 ಪತ್ರಗಳು ಬರುತ್ತಿವೆ. ಈ 4,000 ಪತ್ರಗಳಿಗೂ ನಾನು ರೇಲ್ವೇ ಬೋರ್ಡ್‌ನ ಮೂಲಕ ಸ್ವತಃ ಉತ್ತರಿಸಲು ಸಾಧ್ಯವಾಗದ ಮಾತು. ನಾನು ಅವುಗಳನ್ನು ಜನರಲ್ ಮ್ಯಾನೇಜರ್‌ಗೋ, ಅದಕ್ಕೂ ಕೆಳಗಿನ ಅಧಿಕಾರಿಗಳಿಗೋ ಕಳುಹಿಸಬೇಕಾಗುತ್ತದೆ. ಆದರೆ ಪ್ರತಿಯೊಂದು ಪತ್ರಕ್ಕೂ ಉತ್ತರ ಸಿಗುವಂತೆ ನಾನು ಆಶ್ವಾಸನೆ ನೀಡುತ್ತೇನೆ, ಮಾತ್ರವಲ್ಲ ಅದನ್ನು ನಾನೇ ಬರೆದಿದ್ದೇನೆ ಎಂದು ತಿಳಿದುಕೊಳ್ಳಿರಿ.



ಶ್ರೀ ಟಿ.ಎ.ಪೈ ಅವರೊಂದಿಗೆ ಅವರ ಸಹೋದ್ಯೋಗಿ ಶ್ರೀ ಶಫಿ ಖುರೇಶಿ ಮತ್ತು ರೇಲ್ವೇ ಬೋರ್ಡ್‌ನ ಅಧ್ಯಕ್ಷರು (ಎಡದಿಂದ ಎರಡನೆಯವರು)

ಎಂದಾದರೂ ನೀವು ಶ್ರೀ ಖುರೇಶಿಯವರಿಂದ ಉತ್ತರ ಪಡೆದಿದ್ದರೆ, ಅದಕ್ಕೆ ನಾನು ಕೇಂದ್ರದಿಂದ ಹೊರಗೆ ಹೋಗಿರಬೇಕೆಂದು ತಿಳಿದಿರಿ. ನೀವು ಅವರಿಂದ ಸ್ವೀಕರಿಸುವ ಉತ್ತರವೂ ರೇಲ್ವೇ ಸಚಿವರಿಂದ ಪಡೆದಷ್ಟೇ ಪ್ರಾಮುಖ್ಯತೆಯನ್ನು ಹೊಂದಿರುತ್ತದೆ. ನಿಮ್ಮ ತೃಪ್ತಿಗೆ ಅನುಗುಣವಾಗಿ ಎಲ್ಲ ವ್ಯವಸ್ಥೆಗಳನ್ನು ಸರಿಪಡಿಸುವ ತನಕ ನನ್ನೊಂದಿಗೆ ಸಹಕರಿಸಿ. ನಿಮ್ಮ ಸಹಕಾರದಿಂದ ಇದೊಂದು ದೊಡ್ಡ ಕಾರ್ಯಕವನ್ನು ನಿರ್ವಹಿಸಬೇಕಾಗಿದೆ. ನಿಮ್ಮ ಸಹಕಾರದ ಹೊರತಾಗಿ ಇದು ಸಾಧ್ಯವಿಲ್ಲ.

## ಯೂನಿಯನ್ ಸಮಸ್ಯೆ

ವ್ಯವಸ್ಥಾಪನೆಯನ್ನು ಅನಧಿಕೃತವಾಗಿ ಪ್ರತಿನಿಧೀಕರಿಸುವ ನೌಕರ ಯೂನಿಯನ್‌ಗಳ ಸಮಸ್ಯೆಗೆ ಬರುತ್ತ, ನಾನು ಹೇಳುವುದು ಇಷ್ಟೇ- ನಮ್ಮ ದೇಶದಲ್ಲಿ ಒಂದು ಕಾರ್ಮಿಕ ನೀತಿಯನ್ನು ಅನುಸರಿಸಿಕೊಂಡು ಬರುತ್ತಿದ್ದೇವೆ. ಅದರಲ್ಲಿ ಅಂಗೀಕೃತ ದೊಡ್ಡ ಯೂನಿಯನ್‌ಗಳಿರುತ್ತವೆ. ಸದನ ಈ ನೀತಿಯನ್ನು ಬದಲಾಯಿಸಬೇಕೆಂದು ಬಗೆದರೆ, ಅಂದರೆ ಈ ನೀತಿಯನ್ನು ಬಯಸದೆ ಇದ್ದಲ್ಲಿ (ತಡೆಗಳು)

**ಶ್ರೀ ರಾಮಾವತಾರ ಶಾಸ್ತ್ರಿ:** ನೀವು ಯಾವುದು ಮೇಜರ್ ಯೂನಿಯನ್ ಮತ್ತು ಯಾವುದು ಅಲ್ಲ ಅಂತ ಹೇಗೆ ನಿರ್ಣಯಿಸುತ್ತೀರಿ?

**ಶ್ರೀ ಟಿ.ಎ.ಪೈ:** ನಾನು ನೀತಿ ಪ್ರಕಾರ ಮತ್ತು ವ್ಯವಸ್ಥಾಪನೆಯ ಸಿದ್ಧಾಂತಗಳಿಗೆ ಅನುಸಾರವಾಗಿ ಅಂಗೀಕರಿಸುವುದಷ್ಟೇ ಎಂದು ಹೇಳಬಯಸುತ್ತೇನೆ. ಯಾವನೇ ವ್ಯಕ್ತಿ ಅಥವಾ ಒಂದು ಗುಂಪು ತಮ್ಮ ಕುಂದುಕೊರತೆ ಇದ್ದಲ್ಲಿ ನನಗೆ ಪತ್ರವನ್ನು ಬರೆಯಲಿ, ನಾನು ಅದನ್ನು ಪರಿಶೀಲಿಸುವುದಿಲ್ಲವೆಂದು ಹೇಳುವುದಿಲ್ಲ. ಒಬ್ಬ ಫೋಟೋಗ್ರಾಫರನ್ನು ತಮ್ಮ ಜತೆ ತಂದು, ರೇಲ್ವೇ ಸಚಿವರು ಆ ಪತ್ರವನ್ನು ಅಂಗೀಕರಿಸಿದಂತೆ ದಾಖಲಿಸುವುದು ಅಸಾಧುವಾದುದು. ದಯವಿಟ್ಟು ಅಂಥದ್ದನ್ನು ಮಾಡಬೇಡಿ. (ತಡೆ)

**ಶ್ರೀ ಪೀಲೂ ಮೋದಿ:** ಈ ಎರಡು ಯೂನಿಯನ್‌ಗಳು ಯಾತಕ್ಕಾಗಿ ಪರಸ್ಪರ ಕಾದಾಡುವುದು? ನನ್ನದೇನಿದ್ದರೂ ಸ್ವತಂತ್ರ ಯೂನಿಯನ್ ಕಡೆಗೇ....

**ಶ್ರೀ ಟಿ.ಎ.ಪೈ:** ಯಾವುದೇ ಕುಂದುಕೊರತೆ ಇದ್ದಲ್ಲಿ ಅದನ್ನು ಪರಿಶೀಲಿಸಲು ನಾನು ತಯಾರಿದ್ದೇನೆ. ನಾನು ರೇಲ್ವೇ ಸಚಿವನಾಗಿದ್ದುಕೊಂಡು ರೇಲ್ವೇಯಲ್ಲಿ ಕೆಲಸಮಾಡುವ ಎಲ್ಲ ನೌಕರರನ್ನು ಪ್ರತಿನಿಧಿಸುತ್ತೇನೆ. ಒಬ್ಬ ನೌಕರನಿಂದ ಇನ್ನೊಬ್ಬನನ್ನು ಪ್ರತ್ಯೇಕಿಸುವ ಕೆಲಸಕ್ಕೆ ನಾನು ಇರುವುದಲ್ಲ. ಯಾವುದೋ ರಾಜಕೀಯ ಪಕ್ಷಕ್ಕೆ ಅನುಗುಣವಾಗಿ ಯಾವುದೇ ಯೂನಿಯನನ್ನು ಕಟ್ಟಿ ಬೆಳೆಸುವುದಕ್ಕೆ ನಾನಿರುವುದಲ್ಲ. ನಾನಿರುವುದು....

**ಶ್ರೀ ಹುಕುಂ ಚಂದ್ ಕಛವಾಯ್:** ಸಭಾಪತಿ ಮಹೋದಯರೇ, ಯಾವ ಸದಸ್ಯ, ಸಭಾಧ್ಯಕ್ಷರ ಅನುಮತಿಯಿಲ್ಲದೆ ಮಾತಾಡುತ್ತಾರೋ, ಅವರ ಮಾತುಗಳನ್ನು ದಾಖಲಿಸಕೂಡದು.

**ಶ್ರೀ ಟಿ.ಎ.ಪೈ:** ಇಲ್ಲಿ ಭಾಷಣ ಮಾಡುವುದನ್ನು ಕಂಡರೆ, ಕೆಲವೇ ಕೆಲವು ಮಂದಿಗೆ ರೇಲ್ವೇ ನೌಕರರ ಬಗೆಗೆ ಹೆಚ್ಚಿನ ಕಾಳಜಿ ಅಥವಾ ಅವರ ಜವಾಬ್ದಾರಿ ಇರುವಂತೆ ತೋರಿಸಿಕೊಂಡಂತಿದೆ. ಎಲ್ಲ ಮಾನ್ಯ ಸದಸ್ಯರಲ್ಲೂ ನನ್ನ ನಿವೇದನೆ ಏನಂತಂದ್ರೆ, ನಾನು ಎಲ್ಲಿಯುವರೆಗೆ ರೇಲ್ವೇಯನ್ನು ಮುಂದುವರಿಸಿಕೊಂಡು ಹೋಗುತ್ತೇನೋ ಅಲ್ಲಿಯವರೆಗೆ ನಿಮ್ಮೆಲ್ಲರ ಸಹಕಾರ ಮತ್ತು ಸಹಾನುಭೂತಿಯನ್ನು ನಿರೀಕ್ಷಿಸುತ್ತೇನೆ. ರೇಲ್ವೇ ನೌಕರರ ಅಭಿವೃದ್ಧಿಯ ಬಗೆಗೆ ಇನ್ನೊಬ್ಬರಿಗೆ ಎಷ್ಟು ಕಾಳಜಿ ಇದೆಯೋ ಅಷ್ಟೇ ಕಾಳಜಿ ನನಗೂ ಇದೆ ಎಂದು ತಿಳಿದುಕೊಂಡಿರಿ. ಆದರೆ ತೊಂದರೆ ಏನಂತಂದ್ರೆ ನಾನು ನೌಕರರ ಎಲ್ಲಾ ವಿಭಾಗಗಳಿಗೂ ಸಮಾನ ನೀತಿಯನ್ನು ಅನುಸರಿಸಬೇಕೆಂಬುದು. ನೌಕರರ ಒಂದು ಪಂಗಡವನ್ನು ಇನ್ನೊಂದು ಪಂಗಡದ ವಿರುದ್ಧ ಎತ್ತಿಕಟ್ಟುವುದು ನನ್ನಿಂದಾಗದು. ಯಾವುದು ಸರಿಯೋ ಅದನ್ನು ನಾನು ಮಾಡಬೇಕಾಗುತ್ತದೆ. ಯಾವುದೇ ಅನ್ಯಾಯವನ್ನು ಯಾವನೇ ಸಂಸತ್ ಸದಸ್ಯನಾಗಲೀ ನೌಕರನಾಗಲೀ ನನ್ನ ಗಮನಕ್ಕೆ ತಂದರೆ ಅದನ್ನು ಸರಿಪಡಿಸಲು ಪ್ರಯತ್ನಿಸುತ್ತೇನೆ. ನಮ್ಮಲ್ಲಿ ಎರಡು ಪ್ರಮುಖ ಯೂನಿಯನ್‌ಗಳಿವೆ. ಆ ಎರಡೂ ಯೂನಿಯನ್‌ಗಳು ಒಂದು ಸೇರಿ. ಒಂದೇ ಯೂನಿಯನ್ ಆಗಲಿ ಎಂದು ನಾನು ಹೇಳುತ್ತಲೇ ಬಂದಿದ್ದೇನೆ. ಒಂದೇ ಯೂನಿಯನ್ ಆದಾಗ, ವ್ಯವಸ್ಥಾಪನೆಯೊಂದಿಗೆ ಸುಲಭವಾಗಿ ವ್ಯವಹರಿಸಲು ಸಾಧ್ಯವಾಗುತ್ತದೆ. ಈ ನನ್ನ ಕನಸು ನೆನಸಾಗಲಿ.(ತಡೆ)

**ಶ್ರೀ ಪೀಲೂ ಮೋದಿ:** ಅದನ್ನೊಂದು ಸ್ವತಂತ್ರ ಯೂನಿಯನ್ ಆಗಿ ಮಾಡಿ.

**ಶ್ರೀ ಟಿ.ಎ.ಪೈ:** ಮಾನ್ಯ ಸದಸ್ಯರಾದ ಶ್ರೀ ಎಸ್.ಆರ್.ದಮನಿಯವರು ಒಂದು ಪ್ರಶ್ನೆಯನ್ನು ಎತ್ತಿದ್ರು....

**ಶ್ರೀ ಹುಕುಂ ಚಂದ್ ಕಛವಾಯ್:** ಸಭಾಧ್ಯಕ್ಷರೇ, ನಾವು ಯೂನಿಯನ್‌ಗಳಿಗಾಗಿ ಕೆಲಸ ಮಾಡ್ತಾ ಇದ್ದೇವೆ. ನಮ್ಮೆದುರು ಯಾವ ಯಾವ ಸಮಸ್ಯೆಗಳು ಬರುತ್ತಾವೋ ಅವನ್ನೆಲ್ಲ ಸಚಿವರ ಸಮಕ್ಷಮಕ್ಕೆ ಕೊಂಡುಹೋಗಲು ಸಾಧ್ಯವೇ? ಹಾಗಾಗಿ ನಾವು ಅಧಿಕಾರಿಗಳಿಗೆ ಬರೆಯುತ್ತೇವೆ. ಸಚಿವರ ಭಾರ ಹಗುರ ಮಾಡಬೇಕೆಂಬುದೇ ನಮ್ಮ ಉದ್ಧೇಶ.

**ಸಭಾಧ್ಯಕ್ಷರು:** ತಾವು ಏನನ್ನು ಹೇಳಬೇಕಿತ್ತೋ ಹೇಳಿ ಮುಗಿಸಿದ್ದೀರಿ. ಈಗ ಸಚಿವರಿಗೆ ಮಾತನಾಡಲು ಅನುವು ಮಾಡಿಕೊಡಿ.

**ಶ್ರೀ ಟಿ.ಎ.ಪೈ:** ಮಾನ್ಯ ಸದಸ್ಯ ಶ್ರೀದಮನಿಯವರ ಪ್ರಕಾರ ಶೋಲಾಪುರ ವಿಭಾಗವನ್ನು ದಕ್ಷಿಣ ಮಧ್ಯ ರೇಲ್ವೇಗೆ ಸೇರಿಸುವುದರಿಂದ ತುಂಬಾ ತೊಂದರೆಗಳು ಎದುರಾಗಿವೆ ಅಂತ. ಈ ಕ್ರಮವನ್ನು ಬಹಳ ಹಿಂದೆಯೇ ಕೈಗೊಳ್ಳಲಾಗಿತ್ತು. ಅವರ ಅಭಿಪ್ರಾಯದಂತೆ ಇದೊಂದು ಅವಸರದ ತೀರ್ಮಾನವಾಗಿತ್ತು ಅಂತ. ಹಾಗೆಯೇ ನಾನು ಕೂಡಾ ಅವಸರದ ತೀರ್ಮಾನ ಕೈಗೊಂಡು ಆ ಹಿಂದಿನ ತೀರ್ಮಾನವನ್ನು ಅನೂರ್ಜಿತಗೊಳಿಸುವುದಕ್ಕೆ ಬಾಧ್ಯನಾಗುವುದಿಲ್ಲ. ಇದರಿಂದ ನಿಜವಾಗಿಯೂ ಸಾರ್ವಜನಿಕರಿಗಾಗುವ ತೊಂದರೆಗಳೇನು?, ವಾಣಿಜ್ಯಕ್ಕಾಗುವ ಬಾಧಕಗಳೇನು, ನೌಕರರಿಗಾಗುವ ಸಮಸ್ಯೆಗಳೇನು ಎಂಬುದನ್ನು ಮನಗಾಣುವ. ಒಂದು ವೇಳೆ ನೌಕರರ ಭಡ್ತಿಗೆ ಬಾಧಕವಾಗುವುದಾದಲ್ಲಿ, ಒಂದು ವೇಳೆ ಆ ವಲಯದಲ್ಲಿ ಸಾಕಷ್ಟು ಉದ್ಯೋಗಾರ್ಥಿಗಳ ಆಯ್ಕೆಗೆ ತೊಂದರೆ ಆಗುವುದಿದ್ದಲ್ಲಿ ಪರಿಶೀಲಿಸುವ, ಮತ್ತು ಈ ತೊಂದರೆಗಳನ್ನು ನೀಗಿಸುವುದಕ್ಕೆ ಯಾರದೇ ವಿರೋಧವಿಲ್ಲ ಎಂಬುದನ್ನು ಕಂಡುಕೊಳ್ಳುವ. ಇಂತಹ ಆಡಳಿತಾತ್ಮಕ ತೀರ್ಮಾನಗಳನ್ನು ಕೈಗೊಳ್ಳುವ ವೇಳೆ ಜನರಿಗೆ ಅತ್ಯಂತ ಕನಿಷ್ಠ ರೀತಿಯ ತೊಡಕು ಆಗುವಂತಿರಬೇಕು. ಈ ಭಾಗದಿಂದ ಬಂದಂಥ ಸಂಸತ್ ಸದಸ್ಯರೂ, ರೇಲ್ವೇ ಬೋರ್ಡಿನ ಅಧ್ಯಕ್ಷರೂ ಜತೆಯಲ್ಲಿ ಕುಳಿತು ಈ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬೇಕೆಂದು ನಾನು ಬಯಸುತ್ತೇನೆ. ಜನರ ಸಮಸ್ಯೆಗಳು ಬಗೆ ಹರಿಯುತ್ತಿದ್ದಲ್ಲಿ, ನನ್ನನ್ನು ವೈಯಕ್ತಿವಾಗಿ ಇಂಥದ್ದರಲ್ಲಿ ಸೇರಿಸಿಕೊಳ್ಳಬೇಡಿ.

## ಪರಿಶಿಷ್ಟ ಜಾತಿಗೆ ಪ್ರಾತಿನಿಧ್ಯ

**ಶ್ರೀ ಟಿ.ಎ.ಪೈ:** ಇನ್ನೊಬ್ಬ ಸದಸ್ಯರು, ಪರಿಶಿಷ್ಟ ಜಾತಿಗೆ ಸೂಕ್ತ ಪ್ರಾತಿನಿಧಿತ್ವ ಬೇಕು ಎಂದಿದ್ದಾರೆ. ಅದೊಂದು ನಿಜವಾದ ಸಮಸ್ಯೆಯೇ. ನಾವು ಒಂದಿಷ್ಟು ಶೇಕಡಾವಾರು ನಿಗಧಿಪಡಿಸುವತ್ತ ಹೆಣಗಿದ್ದೇವೆ. ಇದು ಅವರಿಗೆ ತೃಪ್ತಿ ತಂದಿಲ್ಲ. ವೈಯಕ್ತಿಕವಾಗಿ ಹೇಳುವುದಾದರೆ, ಕೆಲವೊಮ್ಮೆ ಅಂಕಿ ಅಂಶಗಳನ್ನು ತೋರಿಸಿದಾಗ ಕೆಲಸದಲ್ಲಿರುವ ಅತೀ ಕೆಳಗಿನ ಸ್ಥರದ ಜಾಡಮಾಲಿಗಳಂತಿರುವ ಉದ್ಯೋಗಸ್ಥರನ್ನು ಲೆಕ್ಕಕ್ಕೆ ತೆಗೆದುಕೊಳ್ಳಲಾಗಿದೆ– ಆ ಮೂಲಕ ಮೀಸಲಾತಿಯ ಕೋಟಾವನ್ನು ಭರ್ತಿಮಾಡಲಾಗಿದೆ ಅಂದಿದ್ದಾರೆ. ಮೊದಲ ಹಂತದಲ್ಲಿ ಜಾಡಮಾಲಿಗಳನ್ನು ಕೋಟಾದಿಂದ ಹೊರಗಿಡುವಂತೆ ನಾನು ಬಯಸುತ್ತೇನೆ ಮತ್ತು ಮಿಕ್ಕುಳಿದಂತೆ ಕೋಟಾ ಭರ್ತಿ ಮಾಡುವುದು. ಆ ಮೂಲಕ ಪರಿಶಿಷ್ಟ ಜಾತಿಯವರು ತಮ್ಮ ಹಕ್ಕುಗಳನ್ನು ಸ್ಥಾಪಿಸಲು ಅನುವಾಗುತ್ತದೆ. ಇದು ನೂರು ಶತಮಾನ ಕಳಂಕ ರಹಿತವೆಂದು ಹೇಳಲಾರೆ; ಆದರೂ ಇದೊಂದು ಮೊದಲ ಹೆಜ್ಜೆ ಎಂದು ಪರಿಗಣಿಸಬಹುದು.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ರೇಲ್ವೇ ಮಂತ್ರಾಲಯ ಈ ರೀತಿ ಹೆಚ್ಚುವರಿ ಗ್ರ್ಯಾಂಟ್ ಕೇಳಿ ಸಂಸತ್ತಿನ ಮುಂದೆ ಬರುವುದು, ಇದೊಂದು ಮಾಮೂಲು ವಿಷಯ ಆಗಿಬಿಟ್ಟಿದೆ. ಹಾಗಾಗಬಾರದು. ಇದರಲ್ಲಿ ಸ್ಟ್ರಿಕ್ಟ್ ಕಂಟ್ರೋಲ್ ಇರಬೇಕು. ಸಂಸತ್ತಿನಲ್ಲಿ ಆಯವ್ಯಯ ಪತ್ರವನ್ನು ಮಂಡಿಸುವಾಗಲೇ ಸಂಸತ್ತನ್ನು ವಿಶ್ವಾಸಕ್ಕೆ ತೆಗೆದುಕೊಂಡು ನಿರ್ದಿಷ್ಟ ಇಷ್ಟೇ ಹಣ ಖರ್ಚಾಗುತ್ತದೆ ಅಂತ ಹೇಳಲಿ, ಅದಕ್ಕೆ ಸಂಸತ್ತು ಸಮ್ಮತಿ ನೀಡುತ್ತದೆ. ಯಾವುದೇ ಎಕ್ಸೆಪ್ಶನ್ ಕೇಸ್‌ನಲ್ಲಿ ಹೆಚ್ಚು ಖರ್ಚು ಬಂದಿದೆ ಅಂತ ಅಂದ್ರೆ ಅದು ಸರಿ. ಆದರೆ ಈ ಮೆಮೊರಂಡಮ್‌ನಲ್ಲಿ ನೀಡಿದ ಎಲ್ಲ ವಿಷಯಗಳನ್ನು ನೋಡಿದರೆ, ಇವು ಗಂಟಲಲ್ಲಿ ಇಳಿಯುವಂತೆ ತೋರುವುದಿಲ್ಲ. ನಾನು ಮಂತ್ರಿ ಮಹೋದಯರ ಸಂಗಡ ಹೇಳುವುದಿಷ್ಟೇ, ಅವರು ರೇಲ್ವೇ ಮಂತ್ರಾಲಯದ ಅಧಿಕಾರಿಗಳನ್ನು ಸ್ವಲ್ಪ ಹದ್ದುಬಸ್ತಿನಲ್ಲಿ ಇಟ್ಟಿರಲಿ, ಯಾವುದೇ ಸಂದರ್ಭದಲ್ಲಿ ಹೆಚ್ಚು ಖರ್ಚು ಮಾಡಲು ಹೋಗದಂತೆ ನಿಯಂತ್ರಿಸಲಿ. ಅಂಥ ಅಧಿಕಾರಿಗಳ ಮೇಲೆ ಆ ತೂಗುಗತ್ತಿ ತೂಗುತ್ತಿರಲಿ– ಏನೆಂದರೆ, ಅವರು ಹೆಚ್ಚು ಖರ್ಚು ಮಾಡಿದರೆ, ಅದಕ್ಕೆ ಸ್ವತಃ ಅವರೇ ಜವಾಬ್ದಾರರಾಗಬೇಕೆಂತ. ಅವಶ್ಯಕತೆ ಬಂದರೆ, ಆ ಹೆಚ್ಚಿನ ಖರ್ಚನ್ನು ಅವರಿಂದಲೇ ವಸೂಲು ಮಾಡುವಂತೆ ಆಗಬೇಕು.

## ಇಲಾಖೆಯ ಕ್ಷೋಭೆಗಳು

**ಶ್ರೀ ಟಿ.ಎ.ಪೈ:** ಮಾನ್ಯ ಸದಸ್ಯರಾದ ಶ್ರೀ ವಾಜಪೇಯಿಯವರ ಹೇಳಿಕೆಯನ್ನು ಖಂಡಿತವಾಗಿಯೂ ನಾನು ಒಪ್ಪುತ್ತೇನೆ. ಪ್ರತಿಸಲ ಹೆಚ್ಚುವರಿ ಅನುದಾನಕ್ಕಾಗಿ ಸಂಸತ್ತಿನ ಎದುರು ಬರುವಾಗ ಹೆಚ್ಚಿನ ಸದಸ್ಯರಿಗೆ ಕಿರಿಕಿರಿ ಉಂಟಾಗುತ್ತದೆ- ಆದ್ದರಿಂದ ಬಜೆಟ್ಟನ್ನು ಮೊದಲಬಾರಿಗೆ ಮಂಡನಮಾಡುವಾಗಲೇ ಅದು ನಿರ್ದಿಷ್ಟವಾಗಿರಲಿ, ವಸ್ತುನಿಷ್ಠವಾಗಿರಲಿ ಅನ್ನುವಂಥದ್ದು. ನಮ್ಮ ಲೆಕ್ಕಾಚಾರದಲ್ಲಿ ನಾವು ನಿರ್ದಿಷ್ಟವಾಗಿ ಇಷ್ಟೇ ಖರ್ಚು ಅಂತ ಹೇಳಲು ಬರುವುದಿಲ್ಲ - ಯಾಕೆಂದರೆ ನಮ್ಮ ನಿರೀಕ್ಷೆಗೂ ಮೀರಿ ಕೆಲವೊಂದು ಅನಿರೀಕ್ಷಿತ ಘಟನೆಗಳು ಸಂಭವಿಸಿ ನಮ್ಮ ಖರ್ಚು ಡೋಲಾಯಮಾನವಾಗುವಂಥ ಪರಿಸ್ಥಿತಿ ಉಂಟಾಗುತ್ತದೆ. ಇದಕ್ಕೆ ನಾನಾ ಕಾರಣಗಳಿರಬಹುದು. ಯಾವುದೋ ಸಿನಿಮಾ ಥಿಯೇಟರ್‌ನಲ್ಲಿ ಟಿಕೆಟ್ ನಿರಾಕರಿಸಿದಾಗ, ಇನ್ನೊಂದೆಡೆ ಭಾಷಾ ಸಮಸ್ಯೆಯಿಂದ, ಮತ್ತೊಂದು ಕಡೆ ಯಾವುದೋ ರಾಜಕೀಯ ತೀರ್ಮಾನದ ಸಲುವಾಗಿ- ರೇಲ್ವೇ ಬೋಗಿಗಳನ್ನು ಸುಟ್ಟುಹಾಕುವ ಪ್ರಸಂಗ ಬಂದಿರುತ್ತದೆ.

ಅನಿರೀಕ್ಷಿತವಾದ ಇಂತಹ ಸಂದರ್ಭಗಳಲ್ಲಿ, ನಾನು ಮತ್ತೆ ಮತ್ತೆ ಸಂಸತ್ತಿನ ಎದುರು ಬರಬೇಕಾಗುತ್ತದೆ. ನಾವು ನಮ್ಮ ಆಯವ್ಯಯವನ್ನು ತುಂಬಾ ನಿರ್ದಿಷ್ಟವಾಗಿ ಲೆಕ್ಕಾಚಾರ ಮಾಡಿ, ಮತ್ತೆ ಸಂಸತ್ತಿನ ಮುಂದೆ ಬರುವುದಿಲ್ಲ ಎಂದು ಆಶ್ವಾಸನೆ ನೀಡುವುದಕ್ಕಾಗುವುದಿಲ್ಲ. ಆದರೆ ಈ ಸಲಹೆಗಳನ್ನು ಸದಾ ನಿಗಾದಲ್ಲಿ ಇರಿಸಿಕೊಂಡು ಎಷ್ಟು ಚೆನ್ನಾಗಿ ನಿರ್ವಹಿಸಲು ಸಾಧ್ಯವೋ ಹಾಗೆ ಮಾಡುತ್ತೇವೆ.

ನಮ್ಮ ಆಂಧ್ರಪ್ರದೇಶದ ನೌಕರರು ಪಟ್ಟ ಪಾಡಿಗೆ ಸಂಬಂಧಪಟ್ಟಂತೆ ಶ್ರೀ ಸಮರ್ ಗುಹಾ ಅವರು ವ್ಯಕ್ತಪಡಿಸಿದ ಆತಂಕದ ವಿಷಯಕ್ಕೆ ಬರೋಣ. ನಾವು ರೈಲು ಓಡಾಟವನ್ನೇ ನಿಲ್ಲಿಸಬೇಕಾಯಿತು. ಅವರು ಹೇಳಿದ್ರು, ಕಳೆದ ಎರಡು ತಿಂಗಳಿನಿಂದ ರೈಲು ಸಂಚಾರ ಇಲ್ಲಾಂತ. ಅದನ್ನು ನಮ್ಮ ಖುಷಿಯಿಂದ ಮಾಡಿದ್ದಲ್ಲ. ರೇಲ್ವೇ ಸಂಪತ್ತನ್ನು ಕಾಪಾಡುವುದು ನಮ್ಮ ಕರ್ತವ್ಯ. ಪ್ರಯಾಣಿಕರಿಗೆ ತೊಂದರೆ ಆಗಬಾರದು-ಈ ಎಲ್ಲ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ರೈಲು ಸಂಚಾರವನ್ನು ಸ್ಥಗಿತಗೊಳಿಸಲಾಯಿತು. ಇದರಿಂದ ಇಂತಹ ಚಟುವಟಿಕೆಗಳ ವಿರುದ್ಧ ಸಾರ್ವಜನಿಕ ಜನಾಭಿಪ್ರಾಯ ರೂಪುಗೊಳ್ಳುವುದಕ್ಕೂ ಅವಕಾಶ

ಮಾಡಿದಂತಾಯಿತು. ಮತ್ತು ಸ್ವಲ್ಪ ಮಟ್ಟಿಗಾದರೂ ಕಾನೂನು ಸುವ್ಯವಸ್ಥೆಯನ್ನು ತಹಬಂದಿಗೆ ತರುವುದಕ್ಕೆ ಸಾಧ್ಯವಾಯಿತು. ನಾವು ಈ ವಿಷಯದಲ್ಲಿ ಕಠಿಣರಾಗಿಲ್ಲ ಎಂಬುದಕ್ಕಾಗಿ ಹೀಗೆ ಆಗುವುದಲ್ಲ. ಅದಕ್ಕಿರುವ ಕಾರಣ ಬೇರೆಯೇ ಇರುತ್ತ, ಈ ಸದನದಲ್ಲಿ ಅದನ್ನು ಪ್ರಸ್ತಾಪಿಸಿದರೆ, ಈಗಾಗಲೇ ನಿರ್ಮಾಣವಾದ ವಾತಾವರಣಕ್ಕೆ ಉರಿ ಹಚ್ಚಿದಂತಾಗಬಹುದು.

ನಾವು ನಮ್ಮ ನೌಕರ ವರ್ಗದವರ ಮತ್ತು ರೇಲ್ವೇ ಸಂಪತ್ತನ್ನು ಸಾಧ್ಯವಾದಷ್ಟು ಮಟ್ಟಿಗೆ ರಕ್ಷಿಸುವುದಕ್ಕೆ ಪ್ರಯತ್ನ ಪಟ್ಟಿದ್ದೇವೆ. ಮೊನ್ನೆಯಷ್ಟೇ ನಮ್ಮ ಓರ್ವ ನೌಕರರನ್ನು ಪೆಟ್ರೋಲ್ ಸುರುವಿ ಜೀವಂತ ಸುಟ್ಟುಹಾಕಿದ್ದಾರೆ. ಈವೊತ್ತು ನಾನೀಗ ಈ ಸದನದಲ್ಲಿ ಕುಳಿತಿರುವಾಗಲೇ, ಆತ ತೀರಿಕೊಂಡ ಸುದ್ದಿಬಂತು. ಹೀಗಾದಾಗ ನಾನು ಏನು ಮಾಡಲಿ? ಇಂತಹ ಸಮಸ್ಯೆಗಳು ನಮ್ಮನ್ನು ತೀರಾ ವಿಚಲಿತರನ್ನಾಗಿ ಮಾಡುತ್ತದೆ. ಇಡೀ ದೇಶದಲ್ಲಿ ನಮ್ಮ ನಮ್ಮೊಳಗೆ ಏನೇ ಅಭಿಪ್ರಾಯ ವ್ಯತ್ಯಾಸವಿರಲಿ, ಅಂತಹ ಅಭಿಪ್ರಾಯಕ್ಕೆ ಯಾವ ರೀತಿಯಲ್ಲೂ ಸಂಬಂಧಪಡದ, ಇಂತಹ ಮುಗ್ಧ ಜನರ ಬಲಿತೆಗೆದುಕೊಳ್ಳುವುದು ನಿಜಕ್ಕೂ ಅನ್ಯಾಯವಲ್ಲವೇ?

ಮಾನ್ಯ ಸದಸ್ಯರು ಅನೇಕ ಪ್ರಶ್ನೆಗಳನ್ನು ಎತ್ತಿದ್ದಾರೆ. ಸ್ವಾಮೀ, ಇವೆಲ್ಲ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿಲ್ಲದಿರಬಹುದು. ಅವರೆಲ್ಲರ ಆತಂಕವನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ಇಲ್ಲಿ ಎತ್ತಿರುವ ವಿಷಯಗಳ ಬಗೆಗೆ ಅವರೆಲ್ಲ ನನಗೆ ಪತ್ರ ಬರೆದರೆ, ಸ್ವಲ್ಪ ತಡವಾಗಿಯಾದರೂ ಉತ್ತರ ಬರೆಯಬಲ್ಲೆ. ಆದರೆ, ಸದ್ಯ ಇಲ್ಲೇ ಅಂಥ ಪ್ರಶ್ನೆಗಳು ಬಂದರೆ, ತಕ್ಷಣ ಉತ್ತರಿಸಲು ಸಾಧ್ಯವಾಗುತ್ತದೆ.

**ಶ್ರೀ ಸಮರ್ ಗುಹಾ:** ನೀವು ಅಸ್ಸಾಂ ಮತ್ತು ಆಂಧ್ರಪ್ರದೇಶಗಳಲ್ಲಿ ನಿರ್ಮಾಣವಾದ ಪರಿಸ್ಥಿತಿಗಳನ್ನು ಸದನದ ಮುಂದೆ ಪ್ರಸ್ತುತಪಡಿಸಿದ್ದರೆ, ಉಚಿತವಾಗುತ್ತಿತ್ತು. ಆಂಧ್ರದಲ್ಲಿ ಕಳೆದ ಎರಡು ತಿಂಗಳಿನಿಂದ ರೈಲು ಓಡಾಟವಿಲ್ಲ.

**ಶ್ರೀ ಟಿ.ಎ.ಪೈ:** ನೀವು ಅಸ್ಸಾಂ ಬಗ್ಗೆ ಮಾತ್ರ ಕೇಳಿದ್ದೀರಿ?

**ಶ್ರೀ ಸಮರ್ ಗುಹಾ:** ಅಸ್ಸಾಂ ಮತ್ತು ಆಂಧ್ರಪ್ರದೇಶ

**ಶ್ರೀ ಟಿಎ.ಪೈ:** ನಾನು ಪರಿಗಣಿಸುತ್ತೇನೆ.

## ತಾತ್ಕಾಲಿಕ ಕಾರ್ಮಿಕರ ಸಮಸ್ಯೆಗಳು

ದಕ್ಷಿಣ ಪೂರ್ವ ರೇಲ್ವೇಯ ತಾತ್ಕಾಲಿಕ ಕಾರ್ಮಿಕರ ಕುರಿತಾದ ಪ್ರಸ್ತಾಪ ಮಾಡಲಾಯಿತು. ಈ ಕುರಿತಾದ ಸಮಸ್ಯೆಯನ್ನು ನನ್ನ ಗಮನಕ್ಕೆ ತಂದಾಗ ಮಾನ್ಯ ಸದಸ್ಯರ ಆತಂಕ ಎಷ್ಟಿತ್ತು ಅಂತ ನಾನು ಬಲ್ಲೆ. 2000 ಮಂದಿಯಲ್ಲಿ 1500 ಮಂದಿಯನ್ನು ತೆಗೆದುಕೊಳ್ಳುವುದಕ್ಕೆ ಯಾವ ಅಡ್ಡಿಯೂ ಇಲ್ಲ. ಇದರರ್ಥ ಉಳಿದವರ ಬಗ್ಗೆ ನಮಗೆ ಕಾಳಜಿ ಇಲ್ಲ ಅಂತ ಅಲ್ಲ. ಸಮಸ್ಯೆ ಏನೆಂದರೆ, ನಾವು ಅವರನ್ನು ಬೇರೆ ರಾಜ್ಯಕ್ಕೆ ಕೊಂಡೊಯ್ಯುವ ಸಂದರ್ಭ ಬಂದಾಗ ಅವರು ಅದಕ್ಕೆ ಒಪ್ಪುವುದಿಲ್ಲ. ಒಂದು ಪ್ರಾಜೆಕ್ಟ್ ಕೆಲಸವಾದ ಬಳಿಕ ಇನ್ನೊಂದೆಡೆ ಇನ್ನೊಂದು ಪ್ರಾಜೆಕ್ಟ್ ಪ್ರಾರಂಭಿಸಬೇಕಾಗುತ್ತದೆ. ಅದರ ಜತೆಗೆ ಇತ್ತೀಚೆಗೆ ಇನ್ನೊಂದು ಬೆಳವಣಿಗೆ ಕಂಡುಬಂದಿದೆ. ನಾವು ಈ ಕಾರ್ಮಿಕರನ್ನು ಹೊಸ ಜಾಗಕ್ಕೆ ನಿಯುಕ್ತಿಗೊಳಿಸಿದಾಗ, ಸ್ಥಳೀಯರು ತಮ್ಮ ಅಸಮಾಧಾನ ವ್ಯಕ್ತಪಡಿಸುತ್ತಾರೆ. ಇವೆರಡನ್ನು ಸಂಭಾಳಿಸುವುದು ಹೇಗೆಂದು ತಿಳಿಯುವುದಿಲ್ಲ.

ಕಲ್ಕತ್ತಾದಲ್ಲಿ ಭೂಗರ್ಭದ ಕೆಲಸವನ್ನು ಕಂಟ್ರಾಕ್ಟುದಾರರಿಗೆ ಕೊಡುವಿರಾ ಅಥವಾ ಇಲಾಖೆಯ ಮುಖಾಂತರವೇ ಅದನ್ನು ನಿಭಾಯಿಸುವಿರಾ ಎಂಬಂಥ ಪ್ರಶ್ನೆ ಕೇಳಿದ್ದಾರೆ. ಎಲ್ಲವನ್ನೂ ಕಂಟ್ರಾಕ್ಟುದಾರರಿಗೇ ಕೊಡುವಂಥ ಯೋಚನೆ ಇಲ್ಲ. ಎಲ್ಲಿ ಅದು ಸಾಧ್ಯವೋ ಅಲ್ಲಿ ಅವರಿಗೆ ಕೊಡಲಾಗುತ್ತದೆ.

**ಶ್ರೀ ಎಸ್.ಎಂ.ಬ್ಯಾನರ್ಜಿ:** ಬೋನಸ್‌ನ ವಿಷಯ ಏನಾಯ್ತು?

**ಶ್ರೀ ಜ್ಯೋತಿರ್ಮಯಿ ಬಸು:** ಶ್ರೀ ಪೈಯವರು ತುಂಬಾ ಉದಾರಿ. ಅವರು ತಮ್ಮ ಜೀವಮಾನವಿಡೀ ಹಣಕಾಸಿನ ವ್ಯವಹಾರದಲ್ಲೇ ಕಾಲಕಳೆದವರು.

## ರೇಲ್ವೇ ನೌಕರರಿಗೆ ಬೋನಸ್

ಆಮೇಲೆ, ಬೋನಸ್‌ನ ವಿಷಯ ಎತ್ತಲಾಗಿದೆ. ನೌಕರರಿಗೆ ಹೆಚ್ಚು ಹೆಚ್ಚು ಕೊಡಬೇಕೆಂಬ ಆಶೆ ನಮಗೂ ಇದೆ. ಈ ಸಂಸತ್ತಿನಲ್ಲಿ ನಾವು ಬೋನಸ್‌ಗೆ ಶಿಫಾರಸ್ಸು ಮಾಡಿದ್ರೆ ಮಿಕ್ಕುಳಿದ ಸಂಸ್ಥೆಗಳೂ ಬೇಡಿಕೆಗಳನ್ನು ಸಲ್ಲಿಸುತ್ತವೆ. ಇದು ವಸ್ತುಸ್ಥಿತಿ. ಇಂದು ರೇಲ್ವೇ ನೌಕರರಿಗೆ ಬೋನಸ್‌ನ್ನು ಕೊಡಮಾಡಿದ್ರೆ, ನಾಳೆ ಇದೇ ಸದನದಲ್ಲಿ ಎಲ್ಲರಿಗೂ ಬೋನಸ್ ಕೊಡಬಾರದೇ ಎಂಬ ಪ್ರಶ್ನೆ ಎತ್ತಲಾಗುತ್ತದೆ. ತಕ್ಷಣ ಈ ವಿಷಯವನ್ನು ಅಂಗೀಕರಿಸಿದ್ದೇ ಆದಲ್ಲಿ ಸರಕಾರದ

ಬೋನಸಕ್ಕೆ ಕಟ್ಟುವುದಾದರೆ 205ಕೋಟಿ ರೂಪಾಯಿಗಳು ಬೇಕಾಗುತ್ತದೆ- ಎಲ್ಲ ರಾಜ್ಯಗಳ ನೌಕರರೂ ಸೇರಿ. ಕೊಡುವುದಾದಲ್ಲಿ ಕೊಡೋಣ, ಆದರೆ ದೇಶದ ಆರ್ಥಿಕ ಸ್ಥಿತಿಗತಿಗಳನ್ನು ನಾವು ನೋಡಬೇಡವೇ? ಇದನ್ನು ತಮ್ಮ ಗೌರವದ ಪ್ರಶ್ನೆಯೆಂದು ತೆಗೆದುಕೊಳ್ಳದೆ, ಬೇರೆ ಯಾವುದಾದರೂ ವಿಧಾನದಿಂದ ಈ ಸಮಸ್ಯೆಗೆ ಪರಿಹಾರವಿದ್ದಲ್ಲಿ ದಯವಿಟ್ಟು ಗೌರವಾನ್ವಿತ ಸದಸ್ಯರು ತಮ್ಮ ಸಲಹೆಯೊಂದಿಗೆ ಮುಂದೆ ಬರಲಿ.

ಶ್ರೀ ಎಸ್.ಎಂ ಬ್ಯಾನರ್ಜಿ: ನಮ್ಮ ಪ್ರತಿಪಾದನೆ ಏನಂತಂದ್ರೆ, ಇದೇ ಸರಕಾರದ ಸುಪರ್ದಿಗೆ ಬರುವ ಸಾರ್ವಜನಿಕ ವಲಯದವರಿಗೆ ಇದು ಸಾಧ್ಯವಾದರೆ. ಅಂಥದ್ದೇ ಲಾಭ ರಹಿತ ಪಾಲುದಾರಿಕೆಯ ಬೋನಸ್‌ನ್ನು ಪೋಸ್ಟ್ ಮತ್ತು ಟೆಲಿಗ್ರಾಫ್, ರೇಲ್ವೇ ಮತ್ತು ರಕ್ಷಣಾ ಇಲಾಖೆಯ ಸಿಬ್ಬಂದಿಗಳಿಗೆ ಯಾಕೆ ಕೊಡಬಾರದು? ಈ ನೌಕರರೂ ದೇಶದ ಸಂಪನ್ಮೂಲಕ್ಕೆ ತಮ್ಮ ದೇಣಿಗೆಯನ್ನು ನೀಡುತ್ತಿಲ್ಲವೇ?

ಶ್ರೀ ಟಿ.ಎ.ಪೈ: ನಾನು ಇದನ್ನ ಸಮ್ಮತಿಸುತ್ತೇನೆ. ಆದರೆ ಅದರ ಅನುಷ್ಠಾನದ ಪರಿಣಾಮವನ್ನು ಯೋಚಿಸುತ್ತಿದ್ದೇನೆ. ಅವರೇನು ಈವರೆಗೆ ಗಳಿಸಿದ್ದಾರೋ ಅವೆಲ್ಲ ಈ ನಮ್ಮ ನಿರ್ಣಯದಿಂದ ಕಬಳಿಸಿದಂತಾಗುತ್ತದೆ--ಯಾಕೆಂದರೆ, ಹಣದುಬ್ಬರ ಈ ನಿರ್ದಿಷ್ಟ ವರಮಾನದ ಜನರನ್ನೇ ಬಲಿ ತೆಗೆದುಕೊಳ್ಳುವಂಥದ್ದು. ಏನಿದ್ದರೂ ನಾವು ಪರಸ್ಪರ ಕೂತುಕೊಂಡು ಈ ವಿಷಯವನ್ನು ಚರ್ಚಿಸಬಹುದು. ಧನ್ಯವಾದಗಳು.



**ಕಾಸರಗೋಡು ರೇಲ್ವೇ ನಿಲ್ದಾಣದಿಂದ 'ಜಯಂತಿ ಜನತಾ' ಎಕ್ಸ್‌ಪ್ರೆಸ್ ರೈಲಿಗೆ ಹಸಿರು ನಿಶಾನೆ ತೋರಿಸಿದ ಬಳಿಕ, ಸ್ನೇಹಿತರೊಂದಿಗೆ ರಸಕ್ಷಣ ಸವಿಯುತ್ತಿರುವ ಶ್ರೀ ಟಿ.ಎ.ಪೈಯವರು. ಇದು ಸ್ಥಳೀಯ ಜನತೆಯ ಮತ್ತು ದ.ಕ.ಜಿಲ್ಲೆಯ ನಾಗರಿಕರ ಬಹುಕಾಲದ ಬೇಡಿಕೆಯಾಗಿತ್ತು.**

ಶ್ರೀ ಜ್ಯೋತಿರ್ಮಯಿ ಬಸು: ಒಂದು ನಿರ್ದಿಷ್ಟ ಅವಧಿಯನ್ನು ಮಾರ್ಟಿನ್ ಬರ್ನ್ ರೇಲ್ವೇಯನ್ನು ಪುನಃ ಪ್ರಾರಂಭಿಸುವುದಕ್ಕೆ ನಿಗದಿ ಪಡಿಸಿರುವಿರೇನು?

ಶ್ರೀ ಟಿ.ಎ.ಪೈ: ಯಾವುದೇ ಯೋಜನೆಯನ್ನು ಪೂರ್ತಿಗೊಳಿಸುವತ್ತ ನಾನು ಬಹಳ ವ್ಯಸ್ತನಾಗಿರುತ್ತೇನೆ. ಆದರೆ ಯಾವುದೇ ಕಾಲಾವಧಿಯನ್ನು ನಿಗದಿಪಡಿಸುವಂತೆ ದಯವಿಟ್ಟು ನನಗೆ ಬಲವಂತ ಮಾಡಬೇಡಿ. ಯಾಕೆಂದರೆ, ಈ ಸದನದಲ್ಲಿ ಹೇಳುವ ವಿಷಯಕ್ಕೆ ಬದ್ಧನಾಗಿರಬೇಕಾಗಿರುವ ಕಾರಣ ಸದನದ ದಿವ್ಯತೆಗೆ ಚ್ಯುತಿ ಬಾರದಂತೆ ನೋಡಿಕೊಳ್ಳಬೇಕಾಗುತ್ತದೆ. ಆ ಬಗ್ಗೆ ಖಂಡಿತವಾಗಿಯೂ ಆಸಕ್ತಿವಹಿಸುತ್ತೇನೆ ಎಂದು ತಮಗೆ ಭರವಸೆ ನೀಡಬಲ್ಲೆ.

ಶ್ರೀ ಜ್ಯೋತಿರ್ಮಯಿ ಬಸು: ಸುಮಾರು 2 ತಿಂಗಳು ಅಥವಾ 6 ತಿಂಗಳು?

ಸಭಾಧ್ಯಕ್ಷರು: ನೀವು ಸ್ವತಃ ಅವರ ಛೇಂಬರಿಗೆ ಹೋಗಿ ಚರ್ಚಿಸುವುದು ಒಳಿತು.

***

## ರೇಲ್ವೇ ಲೆವೆಲ್ ಕ್ರಾಸಿಂಗ್ ಸೋಡಿ ದಾಟಿ

### 23 ನವೆಂಬರ್ 1972

ಶ್ರೀ ಟಿ.ಎ.ಪೈ: 1956 ಮತ್ತು 1972ರ ನಡುವೆ ನಮ್ಮ ರೇಲ್ವೇ ಸಿಬ್ಬಂದಿಗಳ ಸಂಖ್ಯೆ 35% ಏರಿದೆ. ಅಂದ್ರೆ 13 ಲಕ್ಷದಿಂದ ಹದಿನೇಳೂವರೆ ಲಕ್ಷ ಸಿಬ್ಬಂದಿಗಳು ನಮ್ಮ ಇಲಾಖೆಯಲ್ಲಿ ಇದ್ದಾರೆ. ಇದು ಪ್ರಾಯಶಃ ಅತ್ಯಂತ ದೊಡ್ಡ ಸಂಖ್ಯೆ. ಇಲಾಖೆಯೊಂದರಲ್ಲೇ ದೊಡ್ಡ ಸಂಖ್ಯೆ. ಈ ಸಂಖ್ಯೆಯನ್ನು ಕಡಿಮೆ ಮಾಡಲು ಸಾಧ್ಯವೇ ಅಂತ ನನಗೆ ಕೇಳಿದರೆ ಸಾಧ್ಯವಾಗದು ಎಂಬುದೇ ನನ್ನ ಉತ್ತರ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಹಾಗೊಂದು ಕುಟುಂಬಸ್ಥ ಉದ್ಯೋಗಸ್ಥನನ್ನು ಕೆಲಸದಿಂದ ತೆಗೆದು ಹಾಕುವುದು ಸಾಧ್ಯವೇ?

ಒಂದು ವೇಳೆ ನಾವು ಉಗಿ ಬಂಡಿಯನ್ನು ಡೀಸೆಲ್ ಅಥವಾ ಇಲೆಕ್ಟ್ರಿಕ್ ಟ್ರೈನಾಗಿ ಪರಿವರ್ತಿಸಿದಾಗ, 30 ಶೇಕಡಾದಷ್ಟು ಉದ್ಯೋಗಿಗಳನ್ನು ಕೈಬಿಡಬಹುದಾಗಿದೆ. ಆದರೆ ಅದನ್ನು ನಾವು ಮಾಡುವಂತಿಲ್ಲ; ಮಾಡ ಕೂಡದು. ಅವರಿಗೆ ಸೂಕ್ತ ತರಬೇತಿಯನ್ನು ನೀಡಬೇಕಾಗಿದೆ. ನಮ್ಮ ಸೇವೆಯಲ್ಲಿ ತರಬೇತಿಗೊಂಡ ಅವರನ್ನು ತೆಗೆದುಕೊಳ್ಳುವುದು ಅನಿವಾರ್ಯ. ನಾವು ನಮ್ಮ

ಉಗಿಬಂಡಿಗಳ ಬದಲು ಡೀಸೆಲ್ ಅಥವಾ ಇಲೆಕ್ಟ್ರಿಕ್ ಟ್ರೈನ್‌ಗಳನ್ನು ಓಡಿಸಲು ಶಕ್ಯರಿದ್ದೇವೆ ಎಂದು ಹೇಳಲಾಗುತ್ತಿದೆ. ನಮ್ಮ ಕಾರ್ಖ್ಯಾಗಾರಗಳಲ್ಲೇ ತಯಾರಾದ ಆಧುನಿಕ ರೀತಿಯ ಇಂತಹ ಟ್ರೈನುಗಳು ಅತೀ ಹೆಚ್ಚಿನ ಸಂಖ್ಯೆಯಲ್ಲಿ ಇದೀಗ ಓಡಾಟಕ್ಕೆ ಸಿದ್ಧವಾಗುವಂತೆ ಪ್ರಯತ್ನಿಸುತ್ತಿದ್ದೇವೆ. ಮಿಕ್ಕವನ್ನು ನಾವು ಆಮದು ಮಾಡಿಕೊಳ್ಳಬೇಕಾಗಿದೆ. ಇದೀಗ ನಾವು ಉಗಿಬಂಡಿಗಳ ತಯಾರಿಯನ್ನು ನಿಲ್ಲಿಸಿದ್ದರೂ ಸಾರಾಸಗಟಾಗಿ ಅಂತಹ ರೈಲುಗಳನ್ನು ಪೂರ್ತಿಯಾಗಿ ನಿಲ್ಲಿಸುವ ಸ್ಥಿತಿಯಲ್ಲಿ ಇಲ್ಲವೆಂದೇ ಹೇಳಬೇಕು. ನಾವು ಶ್ರೀಮಂತ ರಾಷ್ಟ್ರವೇನೂ ಅಲ್ಲ. ನಮ್ಮ ಸಂಪನ್ಮೂಲಗಳಿಂದಲೇ ನಾವು ಅತೀ ಹೆಚ್ಚು ಬಳಕೆಮಾಡಿಕೊಳ್ಳಬೇಕಾಗಿದೆ. ಅದು ನಮಗೆ ಹಿತವಾಗಿರಲಿ ಅಥವಾ ಅಹಿತವಾಗಿರಲಿ. ನಮ್ಮಲ್ಲಿರುವ ಅತೀ ದೊಡ್ಡ ನ್ಯೂನತೆ ಏನಂದರೆ ನಾವು ಶ್ರೀಮಂತ ರಾಷ್ಟ್ರವೆಂಬಂತೆ ತೋರಿಸಿಕೊಳ್ಳುವ ಪ್ರಯತ್ನ ಮಾಡುತ್ತಿರುವುದು ಮತ್ತು ನಮ್ಮಲ್ಲಿರುವ ಅತ್ಯಮೂಲ್ಯ ಮಾನವ ಸಂಪನ್ಮೂಲವನ್ನು ಸದುಪಯೋಗಪಡಿಸಲು ಸೋತಿರುವುದು. ಹಾಗೆಯೇ ನಾವು ನಮ್ಮಲ್ಲಿರುವ ಇತರ ಸಂಪನ್ಮೂಲಗಳನ್ನು ಸದುಪಯೋಗ ಪಡಿಸುತ್ತಿಲ್ಲ.

ಈ ವರ್ಷಗಳಲ್ಲಿ ರೈಲ್ವೆಯ ಖರ್ಚುವೆಚ್ಚಗಳು ಬಹಳವಾಗಿ ಅಧಿಕವಾಗಿದೆ. ರೈಲ್ವೇ ಸಿಬ್ಬಂದಿಗಳ ಮೇಲಿನ ವೆಚ್ಚವನ್ನು ಮೊದಲು ಕಡಿತಗೊಳಿಸಬೇಕೆಂದೂ, ಇಂಧನ, ವ್ಯಾವಹಾರಿಕ ಖರ್ಚುವೆಚ್ಚಗಳನ್ನು ಹಾಗೂ ಬಂಡವಾಳದ ಅಸಲನ್ನು ಕಡಿಮೆ ಮಾಡಬೇಕೆಂದೂ ಹೇಳುವವರಿದ್ದಾರೆ. ಇದೀಗ ಬಂಡವಾಳದ ಅಸಲು ದಿನೇ ದಿನೇ ವೃದ್ಧಿಯಾಗುತ್ತಾ ಹೋಗುತ್ತಲಿದೆ. 1961ರಲ್ಲಿ ಒಂದು ಬೋಗಿಗೆ ರೂ. 16,000/– ವೆಚ್ಚ ತಗಲುತ್ತಿದ್ದರೆ, ಇಂದು ಅದೇ ಬೋಗಿಗೆ ರೂ. 35,000/– ದಿಂದ ರೂ. 36,000/–ದ ವರೆಗೆ ವೆಚ್ಚ ತಗಲುತ್ತದೆ. ಆದರೆ ಹಳೆಯದಾದ ಒಂದು ಬೋಗಿಯ ಬದಲು ಹೊಸ ಬೋಗಿಯನ್ನು ಸ್ಥಾನಾಂತರಿಸಿದಾಗ, ಸಾಗಾಟದ ಸರಕು ಅದೇ ಪ್ರಮಾಣದ್ದು ಇದ್ದಾಗ್ಯೂ, ಅದಕ್ಕೆ ವಿಧಿಸಿಲಾದ ಬಾಡಿಗೆಯಲ್ಲಿ ಮಾತ್ರ ಯಾವುದೇ ಹೆಚ್ಚಳವಾಗಿಲ್ಲ. ಹೀಗಾಗಿ ಹಾಕುವ ಅಸಲು ಬಂಡವಾಳ ಅಧಿಕವಾಗುತ್ತಿದ್ದರೂ, ವರಮಾನದಲ್ಲಿ ವೃದ್ಧಿವುಂಟಾಗುತ್ತಿಲ್ಲ.

ಸರಕು ಸಾಗಾಣಿಕೆಯ ಕಡಿಮೆ ಬಾಡಿಗೆಯಿಂದಾಗಿ ನಾವು ಪ್ರತಿವರ್ಷ 54ಕೋಟಿ ರೂಪಾಯಿಗಳನ್ನು ಕಳೆದುಕೊಳ್ಳುತ್ತಿದ್ದೇವೆ. ಸೂಕ್ತ ರೀತಿಯಲ್ಲಿ ಬಳಕೆಯಾಗದಿರುವ ರೈಲ್ವೇ ಹಳಿಗಳ ಕಾರಣದಿಂದಾಗಿ ಸುಮಾರು 8 ಕೋಟಿ ರೂಪಾಯಿಗಳ ನಷ್ಟ ಅನುಭವಿಸುತ್ತಿದ್ದೇವೆ. ಇಂತಹ ಹಳಿಗಳನ್ನು ಮಾರ್ಪಡಿಸಿ,

ಸಮರ್ಪಕ ರೀತಿಯಲ್ಲಿ ಬಳಸುವಂತೆ ನಮಗೆ ಮಾಡಲಾದೀತೇ ಎನ್ನುವುದರ ಕಡೆಗೂ ನಮ್ಮ ಗಮನವಿದೆ. ನಾವು ಸಾಮಾಜಿಕ ಸ್ವಾಸ್ಥ್ಯಕ್ಕಾಗಿ ವೆಚ್ಚಮಾಡಿ ಅನುಭವಿಸುತ್ತಿರುವ ನಷ್ಟವನ್ನು ಯಾರಾದರೂ ತುಂಬಿಕೊಡಬೇಕಾಗಿದೆ. ಇಲ್ಲವಾದರೆ ನಾವು ಸದಾ ಕಾಲ ಅವನತಿಯ ಸ್ಥಿತಿಯಲ್ಲೇ ದಿನದೂಡಬೇಕಾಗುತ್ತದೆ.

ನಮ್ಮ ಸಂಪನ್ಮೂಲಗಳು ಯಾವುವು? ನಮ್ಮ ಸಿಬ್ಬಂದಿ ವರ್ಗ, ಪ್ರಸ್ತುತ ಚಲಾವಣೆಯಲ್ಲಿರುವ ಬಂಡವಾಳ, ಸರಕು ಬೋಗಿಗಳು, ನಾವು ಹಾಕಿರುವ ರೈಲ್ವೇ ಹಳಿಗಳು ಮತ್ತು ನಮ್ಮ ಹಣಕಾಸಿನ ವ್ಯವಸ್ಥೆ. ನಮ್ಮದು ಬಡ ದೇಶವೆಂದು ಪರಿಗಣಿಸಿ, ನಮ್ಮಲ್ಲಿರುವ ಈ ಮೇಲೆ ಹೇಳಿದ ವಿಷಯಗಳ ಕುರಿತು ಇನ್ನಷ್ಟು ಎಚ್ಚರಿಕೆಯಿಂದ ನಿಭಾಯಿಸಿದ್ದೇ ಆದಲ್ಲಿ ನಮ್ಮ ಕಷ್ಟಗಳೆಲ್ಲ ನಿವಾರಣೆಯಾಗುವುದರಲ್ಲಿ ಸಂದೇಹವೇ ಇಲ್ಲ. ನಮ್ಮ ಬಂಡವಾಳದಲ್ಲಿನ ಕೊರತೆಯನ್ನು ಸೂಕ್ತ ರೀತಿಯಲ್ಲಿ ನಿಭಾಯಿಸಿದ್ದೇ ಆದಲ್ಲಿ, ನಮ್ಮ ಸಮಸ್ಯೆಗಳೆಲ್ಲ ಪರಿಹಾರವಾಗುತ್ತಿತ್ತೇನೋ.

ಅಂಥ ಸಮಯದಲ್ಲಿ ನೀವು ದೊಡ್ಡ ಮೊಬಲಗನ್ನು ಸಾಮಾನ್ಯ ಕಾದಿರಿಸುವಿಕೆಗೆ ವರ್ಗಾಯಿಸಲು ಹೇಳದೇ ಇರುತ್ತಿದ್ದಲ್ಲಿ, ರೈಲ್ವೇ ಪ್ರಾಯಶಃ ಇನ್ನೂ ಬೆಳೆಯುತ್ತಿತ್ತೇನೋ! ಹಿಂದಿನ ದಿನಗಳಲ್ಲಿ ಮಾಡಲು ಸಾಧ್ಯವಾಗದಂಥ ವಿಷಯಗಳನ್ನು ಈಗಲಾದರೂ ಮಾಡಿ, ಈ ಬಹುಮೂಲ್ಯ ಸಂಪತ್ತನ್ನು ನಿರಂತರವಾಗಿ ಬಳಕೆಯಲ್ಲಿರುವಂತೆ ಮಾಡಬಹುದು.

ನಮ್ಮೆಲ್ಲ ಲೆವೆಲ್ ಕ್ರಾಸಿಂಗ್‌ಗಳನ್ನು ಓವರ್ ಬ್ರಿಡ್ಜ್ ಅಥವಾ ಭೂಗತ ಸಂಕವನ್ನಾಗಿ ಮಾರ್ಪಡಿಸಲು ಸಾಧ್ಯವಾಗಿಲ್ಲ. ಇದು ಕೂಡಾ ಒಂದು ಶ್ರೀಮಂತ ಸಮಾಜದ ಟೀಕೆಗೆ ಗುರಿಯಾಗಿದೆ. ನಮ್ಮಲ್ಲಿ 42,000 ಲೆವೆಲ್ ಕ್ರಾಸಿಂಗ್‌ಗಳಿದ್ದು ಇವುಗಳಲ್ಲಿ 22,000 ಲೆವೆಲ್ ಕ್ರಾಸಿಂಗ್‌ಗಳಲ್ಲಿ ಸಿಬ್ಬಂದಿಗಳೇ ಇಲ್ಲ. ಯಾವುದೇ ಲೆವೆಲ್ ಕ್ರಾಸಿಂಗ್‌ನ್ನು ಓವರ್ ಬ್ರಿಡ್ಜ್ ಅಥವಾ ಅಂಡರ್ ಬ್ರಿಡ್ಜ್‌ನ್ನಾಗಿ ಪರಿವರ್ತಿಸುವ ಕೆಲಸವಾದರೂ ಯಾಕೆ ಮಾಡಬೇಕೆಂದು ನನಗೆ ಅರ್ಥವಾಗುತ್ತಿಲ್ಲ. ಇದು ಮೋಟಾರ್ ವಾಹನಗಳಿಗಾಗಿ ತಾನೇ ಮಾಡಬೇಕಾಗಿರುವುದು? ಹಾಗೊಮ್ಮೆ ಈ ಬಗೆಯ ಪರಿವರ್ತನೆ ಮಾಡುವುದೇ ಆದಲ್ಲಿ, ಅದು ಮೋಟಾರ್ ವಾಹನ ಸಂಸ್ಕೃತಿಗೆ ಇಂಬುಕೊಟ್ಟಂತಾಗುವುದಿಲ್ಲವೇ? ಪಶ್ಚಿಮ ಜರ್ಮನಿಯಲ್ಲೂ ಇದೇ ಬಗೆಯ ಸಮಸ್ಯೆ ಉದ್ಭವಿಸಿತ್ತು. ಅಲ್ಲಿನ ಎಲ್ಲ ಮೋಟಾರ್ ವಾಹನ ಚಾಲಕರಿಗೆ, ಲೆವೆಲ್ ಕ್ರಾಸಿಂಗ್ ಗಳಲ್ಲಿ ವಾಹನಗಳನ್ನು ನಿಲ್ಲಿಸಿ ಆಕಡೆ ಈಕಡೆ

ನೋಡಿ ಮುಂದುವರಿಯಬೇಕೆಂಬ ಶಾಸನವನ್ನು ಜಾರಿಗೆ ತಂದಿದ್ದಾರೆ. ರೈಲ್ವೇ ಇಲಾಖೆಯೇ ಎಲ್ಲ ಸುರಕ್ಷಿತ ವಿಧಾನಗಳನ್ನು ಅಳವಡಿಸುವುದು ಇದರಿಂದ ತಪ್ಪುತ್ತದೆ.

***

## ದಕ್ಷಿಣ ಎಕ್ಸ್‌ಪ್ರೆಸ್ ಮತ್ತು ಡೆಲ್ಲಿ ಜನತಾ ಎಕ್ಸ್‌ಪ್ರೆಸ್

### ಅಪಘಾತ– ಚರ್ಚೆ

### 4 ಡಿಸೆಂಬರ್ 1972

ಶ್ರೀ ಟಿ.ಎ.ಪೈ: ಸ್ವಾಮೀ, ಈ ತಿಂಗಳ 2 ಮತ್ತು 3ರಂದು ಸಂಭವಿಸಿದ ಎರಡು ಅಪಘಾತಗಳ ಬಗ್ಗೆ ನಾನು ಸಂಸತ್ತಿನಲ್ಲಿ ವಿಚಾರ ಮಂಡಿಸಬಯಸುತ್ತೇನೆ. ಪ್ರಯಾಣಿಕರು ಮರಣವನ್ನಪ್ಪಿದರೆ ಮಾತ್ರ ಸಂಸತ್ತಿನಲ್ಲಿ ಸಾಮಾನ್ಯವಾಗಿ ಅಪಘಾತಗಳ ವಿಷಯ ಪ್ರಸ್ತಾವನೆಗೆ ಅಸ್ಪದವಿರುತ್ತದೆ. ಈ ಅಪಘಾತದಲ್ಲಿ ನಮ್ಮ ಇಲಾಖೆಯಿಂದ 4ಮಂದಿ ತಮ್ಮ ಪ್ರಾಣ ಕಳಕೊಂಡಿರುತ್ತಾರೆ.

ಎರಡು ಡಿಸಂಬರ್ 1972ರಂದು ಮುಂಜಾನೆ ಸುಮಾರು ಎಂಟು ಗಂಟೆಯ ಹೊತ್ತಿಗೆ, ನವದೆಹಲಿ–ಹೈದರಾಬಾದ್ ದಕ್ಷಿಣ ಎಕ್ಸ್‌ಪ್ರೆಸ್ ಗಂಜ್ ಬಸೋಡಾ ರೈಲು ನಿಲ್ದಾಣ ಸಮೀಪಿಸುತ್ತಿದ್ದಂತೆ, ಎಂಟು ಕೊನೆಯ ಬೋಗಿಗಳು ಹಳಿತಪ್ಪಿದವು. ಈ ಅಪಘಾತದ ಕಾರಣದಿಂದಾಗಿ ಸಂಪರ್ಕ ಕಡಿದು ಹೋಯಿತು. ಊಟ ತಯಾರಿಕೆಯ ಬೋಗಿಗಳಲ್ಲಿ ಕಾರ್ಯನಿರತರಾದ ಏಳು ಮಂದಿ ರೇಲ್ವೇ ಉದ್ಯೋಗಿಗಳು ತೀವ್ರವಾಗಿ ಗಾಯಗೊಂಡರು. ಅವರನ್ನು ಗಂಜ್ ಬಸೋಡಾ ಆಸ್ಪತ್ರೆಯಲ್ಲಿ ದಾಖಲಿಸಲಾಯಿತು. ಗಾಯಗೊಂಡ ಹತ್ತು ಮಂದಿ ಪ್ರಯಾಣಿಕರನ್ನು ಕೂಡಾ ಚಿಕಿತ್ಸೆಗಾಗಿ ಆಸ್ಪತ್ರೆಯಲ್ಲಿ ದಾಖಲಿಸಲಾಯಿತು.

ಅಪಘಾತದ ಮಾಹಿತಿ ದೊರೆತೊಡನೆ ರೇಲ್ವೇಯ ಹಿರಿಯ ಅಧಿಕಾರಿಗಳು ಸ್ಥಳಕ್ಕೆ ಭೇಟಿಕೊಟ್ಟು ಅಪಘಾತದ ಮೇಲುಸ್ತುವಾರಿ ವಹಿಸಿಕೊಂಡು ರಕ್ಷಣಾ ಕಾರ್ಯದಲ್ಲಿ ನಿರತರಾದರು. ಸದ್ಯ ನಾಲ್ಕು ಮಂದಿ ರೇಲ್ವೇ ಉದ್ಯೋಗಿಗಳು ಬೀನಾ ರೇಲ್ವೇ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಅವರು ಗುಣಮುಖರಾಗುತ್ತಿದ್ದಾರೆ. ಉಳಿದವರನ್ನು ಆಸ್ಪತ್ರೆಯಿಂದ ಬಿಡುಗಡೆ

ಮಾಡಲಾಗಿದೆ. ಅಪಘಾತದ ಕಾರಣವನ್ನು ಶೋಧಿಸಲಾಗುತ್ತಿದೆ. ಈ ತಿಂಗಳ 8ನೇ ತಾರೀಖಿನಿಂದ ರೇಲ್ವೇ ಸುರಕ್ಷಿತಾ ಕಮಿಷನರ್ ಜೀನಾದಲ್ಲಿ ಈ ಅಪಘಾತದ ಕಾರಣಗಳನ್ನು ಪತ್ತೆಹಚ್ಚುವುದಕ್ಕೆ ಕ್ರಮ ಕೈಗೊಳ್ಳುವವರಿದ್ದಾರೆ.

1972 ಡಿಸೆಂಬರ್ 3ರಂದು, ಉತ್ತರ ಪ್ರದೇಶದ ಹೌರಾ –ದಿಲ್ಲಿ ಜನತಾ ಎಕ್ಸ್ ಪ್ರೆಸ್ ರೈಲು, ತುಂಡ್ಲಾ–ಗಾಜಿಯಾಬಾದ್ ರೈಲಿಗೆ ಹಿಂದಿನಿಂದ ಹೊಡೆದ ಪರಿಣಾಮದಿಂದ ನಾಲ್ಕು ಮಂದಿ ರೇಲ್ವೇ ಉದ್ಯೋಗಿಗಳು ಮರಣವನ್ನು ಅಪ್ಪುವಂತಾಯಿತು. ಇಂಜಿನ್ ಚಾಲಕ, ಮೊದಲ ಮತ್ತು ಎರಡನೇ ಫೈಯರ್‌ಮೆನ್ ಮತ್ತು ಗಾರ್ಡ್ ತೀವ್ರತರವಾದ ಗಾಯಗಳನ್ನು ಹೊಂದಿರುತ್ತಾರೆ. ಓರ್ವ ಪ್ರಯಾಣಿಕನಿಗೆ ತೀವ್ರಗಾಯಗಳಾಗಿದ್ದರೆ, ಇತರ 11 ಮಂದಿ ಪ್ರಯಾಣಿಕರು ಸಾಧಾರಣ ಗಾಯಗಳಿಂದ ಪಾರಾಗಿದ್ದಾರೆ. ಉತ್ತರ ರೇಲ್ವೇಯ ಜನರಲ್ ಮ್ಯಾನೇಜರ್ ಮತ್ತು ಇತರ ಹಿರಿಯ ಅಧಿಕಾರಿಗಳು ತಕ್ಷಣ ಸ್ಥಳಕ್ಕೆ ಧಾವಿಸಿ ರಕ್ಷಣಾ ಕಾರ್ಯಗಳನ್ನು ಕೈಗೊಂಡರು.

ಅಪಘಾತದ ಕಾರಣದಿಂದಾಗಿ ಇಂಜಿನ್ ಮತ್ತು ಒಂದು ಬೋಗಿ ಹಳಿತಪ್ಪಿರುತ್ತದೆ. ಶಂಟಿಂಗ್ ರೈಲಿನ ಬ್ರೇಕ್‌ವ್ಯಾನ್ ಮತ್ತು ಎರಡು ವ್ಯಾಗನ್‌ಗಳು ಹಳಿತಪ್ಪಿರುತ್ತದೆ. ಸಂಪರ್ಕವನ್ನು ಅಪಘಾತ ನಡೆದ ದಿನ ರಾತ್ರಿಯೇ ಸುಸ್ಥಿತಿಗೆ ತರಲಾಗಿದೆ.

ತೀವ್ರ ಗಾಯಗಳಿಂದ ಬಳಲುತ್ತಿರುವ ಇಬ್ಬರು ರೇಲ್ವೇ ಉದ್ಯೋಗಿಗಳನ್ನು, ನವದೆಹಲಿಯ ಕೇಂದ್ರ ರೇಲ್ವೇ ಆಸ್ಪತ್ರೆಯಲ್ಲಿ ಚಿಕಿತ್ಸೆಗೆ ಒಳಪಡಿಸಲಾಗಿದೆ. ಅವರಿಬ್ಬರೂ ಅಪಾಯದಿಂದ ಪಾರಾಗಿದ್ದಾರೆ ಎಂದು ತಿಳಿಯಲಾಗಿದೆ. ಅವರು ಆರೋಗ್ಯದಲ್ಲಿ ಚೇತರಿಸಿಕೊಳ್ಳುತ್ತಿರುವುದು ಸಂತೋಷದಾಯಕ ವಿಷಯವೆಂದು ನಾನು ಸಂಸತ್ತಿಗೆ ತಿಳಿಸುತ್ತಿದ್ದೇನೆ– ನಾನು ಸ್ವತಃ ಅವರನ್ನು ಭೇಟಿಮಾಡಿ ಈ ಮಾಹಿತಿಯನ್ನು ನೀಡುತ್ತಿದ್ದೇನೆ.

ಅಪಘಾತದ ಕಾರಣವನ್ನು ಶೋಧಿಸಲಾಗುತ್ತಿದೆ. ಉತ್ತರ ರೇಲ್ವೇಯ ಹೆಚ್ಚುವರಿ ಕಮಿಷನರ್ ಅಪಘಾತದ ಸಾಂವಿಧಾನಿಕ ತಪಾಸಣೆಯನ್ನು ಇಂದೇ ಪ್ರಾರಂಭಿಸುತ್ತಾರೆ ಎಂದು ಹೇಳಬಯಸುತ್ತೇನೆ.

***

# ಭಾರತೀಯ ರೇಲ್ವೇ ಆಕ್ಟ್ ತಿದ್ದುಪಡಿ ಮಸೂದೆ

## –ಚರ್ಚೆ

## 6 ಮತ್ತು 11 ಡಿಸೆಂಬರ್ 1972

**ಶ್ರೀ ಟಿ.ಎ.ಪೈ:** 1961ರವರೆಗೆ ಸರಕುಸಾಗಾಣಿಕೆಗೆ ಸಂಬಂಧಿಸಿದಂತೆ ಭಾರತೀಯ ರೇಲ್ವೇಯ ಕಾಂಟ್ರಾಕ್ಟ್ ಆಕ್ಟ್ ನ ಪ್ರಕಾರ ಅದು 'ಬೈಲೀ' ಎಂಬುದಾಗಿತ್ತು. ಅಂದರೆ, ರೇಲ್ವೇ ಸಾಗಾಣಿಕೆಗೆ ಬಂದ ಸರಕನ್ನು ಓರ್ವ ವ್ಯಕ್ತಿ ಸ್ವಂತ ಸಾಮಗ್ರಿಯನ್ನು ಸಾಗಿಸುವಾಗ ಎಷ್ಟು ಕಾಳಜಿಯಿಂದ ಸಾಗಿಸುತ್ತಾನೆ, ಅಷ್ಟು ಕಾಳಜಿಯಿಂದ ರೇಲ್ವೇ ಸಾಗಿಸಬೇಕೆಂಬ ಶರತ್ತು ಇತ್ತು. ಈ ಆಕ್ಟ್ ನ ಪ್ರಕಾರ ಸರಕನ್ನು ಸಾಗಾಟ ಮಾಡಿದ ನಂತರ ಅದನ್ನು ಸಂರಕ್ಷಿಸಿ ಇಡುವಂಥದ್ದು ರೇಲ್ವೇಯ ಜವಾಬ್ದಾರಿಯಾಗಿತ್ತು. ಮತ್ತು ಹಾಗೆ ಸಂರಕ್ಷಿಸಿ ಇಡುವಂಥದ್ದು ಎಷ್ಟು ಕಾಲದವರೆಗೆ ಎಂಬುದನ್ನು ನಿಗದಿಪಡಿಸಿರಲಿಲ್ಲ. ಆದರೆ ನಮ್ಮ ರೇಲ್ವೇ ಸರಹದ್ದಿನಿಂದ ಗಿರಾಕಿ ಸಾಗಿಸದೇ ಇದ್ದಲ್ಲಿ, ಆ ಸರಕಿಗೆ ಉಂಟಾಗುವ ನಷ್ಟಕ್ಕೆ ರೇಲ್ವೇ ಜವಾಬ್ದಾರಿ ಆಗಲಾರದು.

1962 ಜನವರಿ 1ರಿಂದ, ರೇಲ್ವೇ ಸಾಮಾನ್ಯ ಸರಕು ಸಾಗಾಟದ ಜವಾಬ್ದಾರಿಯನ್ನು ಹೊತ್ತುಕೊಂಡು ಆ ಅವಧಿಯನ್ನು ಅತೀ ಹೆಚ್ಚೆಂದರೆ 30ದಿನಗಳು ಎಂದು ನಿಗದಿಪಡಿಸಿತು. ಇದು ವ್ಯಾಪಾರಿಗಳಿಗೆ ಒಳಿತೇ ಆಯಿತು– ತನ್ನ ಸರಕುಗಳನ್ನು ಸುರಕ್ಷಿತವಾಗಿಡುವಂತೆ ರೇಲ್ವೇ ಹೊಣೆಹೊತ್ತಿರುವ ಕಾರಣ ಅಷ್ಟು ದಿನಗಳ ಪರ್ಯಂತ ಅವರು ನಿಶ್ಚಿಂತೆಯಿಂದ ಇರುವಂತಾಯಿತು.

ಈ ವಿಧಾನ ಸಮರ್ಪಕವಾಗಿ ಕೆಲಸಮಾಡಲಿಲ್ಲ. ಯಾಕೆಂದರೆ, ವ್ಯಾಪಾರಿಗಳು ತಮ್ಮ ಸ್ವತ್ತುಗಳನ್ನು ರೇಲ್ವೇ ಸರಹದ್ದಿನಲ್ಲೇ ಬಹಳ ಸಮಯ ಇಟ್ಟುಕೊಂಡು ಕಾಲಹರಣಮಾಡುವುದರಿಂದ, ಗೂಡ್ಸ್‌ಶೆಡ್‌ನಲ್ಲಿ ಅತಿಯಾದ ಒತ್ತಡ, ವ್ಯಾಗನ್‌ಗಳ ತಡೆ, ಮತ್ತು ವಿಳಂಬಿತ ಸಂಚಾರ, ಇತರೆಡೆಗಳಲ್ಲಿ ವ್ಯಾಗನ್‌ಗಳ ಕೊರತೆ ಮತ್ತು ಎಲ್ಲಕ್ಕೂ ಮಿಗಿಲಾಗಿ ಕೃತಕವಾದ ಆಹಾರ ಧ್ಯಾನಗಳ ಕೊರತೆ ಮತ್ತು ಬೆಲೆಯೇರಿಕೆಗಳು ತೋರಿಬಂದವು.

ದೇಶದಲ್ಲಿ ಲಭ್ಯವಿರುವ ಸರಕು ವ್ಯಾಗನ್‌ಗಳ ಸದ್ಬಳಕೆಯ ದೃಷ್ಟಿಯಿಂದ ನಾವು ಎರಡು ಪ್ರಮುಖ ತೀರ್ಮಾನಗಳನ್ನು ಕೈಗೊಳ್ಳುವುದು ಅನಿವಾರ್ಯವೆಂದು

ನನಗನಿಸುತ್ತದೆ. ಕೃತ್ರಿಮ ಕೊರತೆಯನ್ನು ನೀಗಿಸುವ ಸಲುವಾಗಿ, ರಿಜಿಸ್ಟ್ರೇಶನ್ ಶುಲ್ಕವನ್ನು ದ್ವಿಗುಣಗೊಳಿಸುವುದು ಮತ್ತು ಡ್ಯಾಮರೇಜ್ ಶುಲ್ಕವನ್ನು ಹೆಚ್ಚಿಸುವಂಥದ್ದು. ಈ ಶುಲ್ಕಗಳ ಹೆಚ್ಚಳ ಅಂತಿಮವಾಗಿ ಬಳಕೆದಾರರ ಮೇಲೆ ಹೇರಲಾಗುತ್ತದೆ ಎಂಬುದು ನನಗೆ ಗೊತ್ತಿದೆಯಾದರೂ, ಇದುವೆ ಈ ವಿಧಾನದ ದುರ್ಬಳಕೆಯನ್ನು ಹೋಗಲಾಡಿಸುತ್ತಿರುವುದಕ್ಕೆ ಸುಲಭ ಮಾರ್ಗವಲ್ಲ.

ಇನ್ನೊಂದು ವಿಚಾರವೆಂದರೆ, ನಾವು ಸಾಗಾಟಮಾಡಿದ ಸರಕನ್ನು 30 ದಿನಗಳ ಪರ್ಯಂತ ಸುರಕ್ಷಿತವಾಗಿ ಕಾಪಾಡುವಂಥದ್ದು- ನಮ್ಮ ಸ್ಪರ್ಧಿಗಳಾದ ಟ್ರಕ್ ಯಜಮಾನರು, ತಾವು ಸಾಗಿಸುವ ಸರಕುಗಳನ್ನು ಕಾಯ್ದಿಡುವ ಜವಾಬ್ದಾರಿಗೆ ಒಳಗಾಗದಿರುವಂಥದ್ದು. ಈ ವಿಧಾನದಿಂದಾಗಿ ನಮ್ಮಲ್ಲಿ ಅತ್ಯಂತ ಹೆಚ್ಚು ದುರ್ಬಳಕೆಯಾಗುವಂಥದ್ದು. ಈ ಮಸೂದೆಗೆ ತಿದ್ದುಪಡಿ ತರುವುದರೊಂದಿಗೆ, ರೇಲ್ವೇಯ 30 ದಿನಗಳ ಜವಾಬ್ದಾರಿಯುತ 'ಬೈಲೀ'ಯನ್ನು 7 ದಿನಗಳಿಗೆ ಇಳಿಸಿ, ಸರಕನ್ನು ನಿಗದಿತ ಸ್ಥಳಕ್ಕೆ ತಲುಪಿದೊಡನೆ ಅದನ್ನು ನಿಶ್ಚಿತ ಸಮಯದೊಳಗೆ ಖಾಲಿಮಾಡುವ ಪ್ರಮೇಯ ಒದಗುತ್ತದೆ. ಆದ್ದರಿಂದ ಈ ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸುತ್ತಿದ್ದೇನೆ. ಇದಕ್ಕೆ ಸಂಸತ್ತು ಸೂಕ್ತವಾದ ಬೆಂಬಲ ನೀಡುತ್ತದೆ ಎಂದು ಭಾವಿಸುತ್ತೇನೆ.

**ಮಾನ್ಯ ಉಪಾಧ್ಯಕ್ಷರು:** ಮಂಡನೆಯ ಅಂಗೀಕಾರಕ್ಕೆ-

'ಮಸೂದೆಯನ್ನು ತಿದ್ದುಪಡಿಗೆ ಅಳವಡಿಸುವ ಸಲುವಾಗಿ ಪರಿಗಣಿಸುವಂತೆ ಕೋರಲಾಗಿದೆ.'

**ಶ್ರೀ ಮನೋರಂಜನ್ ಹಾಜ್ರ:** ಮಾನ್ಯ ಉಪಾಧ್ಯಕ್ಷರೇ, ಸ್ವಾಮೀ, ಮಾನ್ಯ ಮಂತ್ರಿಗಳು ಮಂಡಿಸಿರುವ ಈ ಮಸೂದೆಯನ್ನು ನಾನು ಸ್ವಾಗತಿಸುತ್ತೇನೆ. ಈ ಶಾಸನದ ಹಿಂದಿರುವ ಇಂಗಿತವನ್ನೂ ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ.,

ನಮ್ಮ ಹಿಂದಿನ ಅನುಭವಗಳ ಪ್ರಕಾರ, ದೊಡ್ಡ ದೊಡ್ಡ ನಿಲ್ದಾಣಗಳಲ್ಲಿ ಸರಕನ್ನು ವಿನಾಕಾರಣದಿಂದಾಗಿ ಉಳಿಸಿ ಬಳಕೆಯ ವಸ್ತುಗಳ ಬೆಲೆ ಏರಿಕೆ ಸಂಭವಿಸುವಂಥದ್ದು ಮತ್ತು ಅದರಿಂದಾಗಿ ಸಾಮಾನ್ಯ ಜನರು ಬವಣೆಪಡುವುದನ್ನು ನಾವು ನೋಡಿದ್ದೇವೆ. ನಾನು ಪಶ್ಚಿಮ ಬಂಗಾಳದ ವಿಧಾನ ಸಭೆಯ ಸದಸ್ಯನಾಗಿದ್ದಾಗ, ಅಕ್ಕಿ, ಧಾನ್ಯ, ತೈಲ. ಬಟ್ಟೆ ಮತ್ತು ಸಿದ್ಧ ಉಡುಪುಗಳು

ಹಾಗೂ ಇತರ ನಿತ್ಯ ಉಪಯೋಗಿ ವಸ್ತುಗಳನ್ನು ಪೌರಾ ಗೂಡ್ಸ್‌ಶೆಡ್‌ನಲ್ಲಿ ಶೇಖರಿಸಲಾಗುತ್ತಿತ್ತು. ಯಾವತ್ತಾದರೂ ರಾಜ್ಯ ಸರಕಾರದ ಗಮನವನ್ನು ಈ ಸಮಸ್ಯೆಯತ್ತ ಸೆಳೆದಾಗ ಅದು ಕೇಂದ್ರ ಸರಕಾರದ ಸುಪರ್ದಿಯಲ್ಲಿರುವುದರಿಂದ ಏನೂ ಕ್ರಮ ಕೈಗೊಳ್ಳುವಂತಿಲ್ಲವೆಂದು ಅಸಹಾಯಕತೆಯನ್ನು ತೋರ್ಪಡಿಸುತ್ತಿತ್ತು. ಹೀಗಾಗಿ ಬಹಳ ಕಾಲ ನಾವು ಸದನದಲ್ಲಿ ಈ ವಿಷಯವನ್ನು ಪ್ರಸ್ತಾಪಿಸುವುದಕ್ಕೆ ಹಿಂದೇಟು ಹಾಕುತ್ತಿದ್ದೆವು. ಈ ಮಸೂದೆಯನ್ನು ಚರ್ಚೆಗೆ ಒಳಪಡಿಸಿರುವಂಥದ್ದು ನಮ್ಮೆಲ್ಲರ ಬಹಳ ಕಾಲದ ಆದ್ಯತೆಯಾಗಿತ್ತು ಮಾತ್ರವಲ್ಲ, ಕೇಂದ್ರ ಸರಕಾರ ನಮಗೆ ಸ್ವಾತಂತ್ರ್ಯ ದೊರೆತ 25ವರ್ಷಗಳ ಬಳಿಕವಾದರೂ ಈ ಬಗೆಯ ಜವಾಬ್ದಾರಿಯ ಕಡೆಗೆ ಗಮನ ನೀಡಿರುವುದಕ್ಕೆ ಸಂತಸಪಡುತ್ತಿದ್ದೇನೆ. ಕಳೆದ 25ವರ್ಷಗಳಿಂದ ವ್ಯಾಪಾರಸ್ಥರು ಕೃತಕವಾಗಿ ಸರಕು ಸಾಮಗ್ರಿಗಳ ಬೆಲೆಯನ್ನು ಏರಿಸುವ ಮೂಲಕ ಸಾಮಾನ್ಯ ಜನತೆಯನ್ನು ಶೋಷಿಸುತ್ತಿತ್ತು ಎಂಬುದನ್ನು ಮರೆಯಬಾರದು. ಅಂತೆಯೇ, ಈ ಮಸೂದೆ ಅಂಗೀಕಾರವಾಗಿ, ಸೂಕ್ತ ರೀತಿಯಲ್ಲಿ ಅನುಷ್ಠಾನಕ್ಕೆ ಒಳಪಡಿಸುವಂತೆಯೂ ನಾನು ಮಾನ್ಯ ಮಂತ್ರಿ ಮಹೋದಯರನ್ನು ಪ್ರಾರ್ಥಿಸುತ್ತೇನೆ.

ಶ್ರೀ ಟಿ.ಎ.ಪೈ: ಸ್ವಾಮೀ, ದೇಶದ ರೇಲ್ವೇ ಮತ್ತು ವಾಣಿಜ್ಯದ ಪ್ರಗತಿಗಾಗಿ ತಿದ್ದುಪಡಿ ಮಸೂದೆಯನ್ನು ಮಂಡಿಸಿರುವ ಹಿನ್ನೆಲೆಯಲ್ಲಿ ಮಾನ್ಯ ಸದಸ್ಯರು ಪ್ರಕಟಪಡಿಸಿದ ತಮ್ಮ ಅನಿಸಿಕೆಗಳನ್ನು ನಾನು ಕೇಳುತ್ತ ಬಂದೆ. ನಮ್ಮ ಉದ್ಯೋಗಿಗಳಿಗೂ ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಇಲ್ಲಿ ಅವಕಾಶ ನೀಡಿದ್ದ ಪಕ್ಷದಲ್ಲಿ ಪ್ರಾಯಶಃ ಈ ಮಸೂದೆಗೆ ವಿರೋಧ ವ್ಯಕ್ತಪಡಿಸುತ್ತಿದ್ದರೇನೋ! ಕೆಲವರು ಈ ದೇಶದ ವಾಣಿಜ್ಯ ವ್ಯವಹಾರದ ಸುರಕ್ಷತೆಯ ಕುರಿತಂತೆ ಮಾತಾಡಿ ದೇಶದಲ್ಲಿರುವ ಅಸಾಮಾಮರ್ಥ್ಯವನ್ನು ಬೆಂಬಲಿಸುವಂತೆ ತೋರಿತು.

ಏನಿದು ಈ ಮಂಡನೆ? ನಾನಿಷ್ಟೆ ಹೇಳಿದ್ದು- ನಿಲ್ದಾಣದಲ್ಲಿ ಸರಕು ಬಂದು ತಲುಪಿದ ಏಳು ದಿನಗಳ ಒಳಗೆ ಸರಕನ್ನು ಅಲ್ಲಿಂದ ಸಾಗಿಸಬೇಕು ಮತ್ತು ಆ ನಂತರ ಅದರ ಸುರಕ್ಷತೆ ನಮ್ಮ ಜವಾಬ್ದಾರಿಯಲ್ಲ ಎಂಬುದು. ಇಲ್ಲಿ ಹೇಳಿರುವಂಥದ್ದು, ಸರಕು ವಿಳಂಬವಾಗಿ ತಲುಪುತ್ತದೆ. ಕೆಲವೊಮ್ಮೆ ಬೇರೆಡೆಗೆ ಸಾಗಿಸಲಾಗುತ್ತದೆ. ಇದು ರೇಲ್ವೆಯ ಅಸಾಮರ್ಥ್ಯದ ಕಾರಣದಿಂದಾಗುತ್ತದೆ ಹಾಗೂ ಈ ಕಾರಣಗಳಿಂದಾಗಿ ವರ್ತಕರನ್ನು ದಂಡಿಸುವುದು ತರವಲ್ಲವೆಂಬ ನಾನಾ ವಿಷಯಗಳನ್ನು ಪ್ರಸ್ತಾಪಿಸಲಾಯಿತು. ಮಸೂದೆ ಇಷ್ಟೇ:

"ಸರಕು ನಿಲ್ದಾಣಕ್ಕೆ ತಲುಪಿದ ಏಳು ದಿನಗಳ ಒಳಗೆ ಅದನ್ನು ಅಲ್ಲಿಂದ ಸಾಗಿಸಬೇಕು."

ನಮ್ಮ ಮಾನ್ಯ ಸದಸ್ಯರುಗಳಲ್ಲಿ ನನ್ನ ವಿಜ್ಞಾಪನೆ– ಈ ದೇಶದ ರೇಲ್ವೇಯ ಜವಾಬ್ದಾರಿ ಏನು?– ಸರಕನ್ನು ಸಾಗಿಸುವಂಥದ್ದು. ನಮಗೆ ಸರಕನ್ನು ನೀಡಿದಾಗ, ಅದನ್ನು ಸಾಗಿಸುವ ಜವಾಬ್ದಾರಿ ನಮ್ಮದು. ನಿಗದಿತ ಸ್ಥಳಕ್ಕೆ ಮುಟ್ಟಿದ ಐದು ಗಂಟೆಗಳ ವರೆಗೆ ಮಾತ್ರ ಸಾಗಾಟದ ನಮ್ಮ ಜವಾಬ್ದಾರಿ ಮುಗಿಯುತ್ತದೆ. ಸದ್ಯದ ಪರಿಸ್ಥಿತಿಯಲ್ಲಿ ಸರಕನ್ನು ಸಾಗಿಸಿದ 30ದಿನಗಳವರೆಗೆ ನಾವು ಅದನ್ನು ಕಾಪಾಡಿಕೊಳ್ಳುವ ಉಸ್ತುವಾರಿಯನ್ನು ವಹಿಸಬೇಕಾಗುತ್ತದೆ. ಇದಕ್ಕೆ ನಮಗೆ ಅವರು ಏನನ್ನು ಪಾವತಿಸುತ್ತಾರೆ? ಕೋಟ್ಯಾಂತರ ರೂಪಾಯಿ ಬೆಲೆಬಾಳುವ ಸರಕನ್ನು ಸಾಗಿಸುವ ಸಂದರ್ಭ, ಅದಕ್ಕೆ ಸಂಬಂಧಿಸಿದ ಎಲ್ಲರೂ ಪ್ರಾಮಾಣಿಕರು ಎಂದು ಭಾವಿಸುತ್ತ, ಉಚಿತವಾಗಿ ಆ ಸರಕನ್ನು ನಾವು ಕಾಪಾಡಬೇಕೆಂದು ನಿರೀಕ್ಷಿಸುವಂಥದ್ದು ಎಷ್ಟು ಸಮಂಜಸ? ಈ ಬಗೆಯ ಉಸ್ತುವಾರಿಯ ಭಾರ ಇತರ ಸಾಗಾಟದ ವ್ಯವಸ್ಥೆಗಳಲ್ಲಿ, ಅಂದರೆ, ಲಾರಿ ಅಥವಾ ಹಡಗುಗಳಲ್ಲಿ ಕಂಡುಬರುವುದಿಲ್ಲ.

ನಾನು ಈ ದೇಶದ ಎಲ್ಲ ಬ್ಯಾಂಕರ್‌ಗಳನ್ನು ಭೇಟಿ ಮಾಡಿ ವಸ್ತುಸ್ಥಿತಿಯನ್ನು ಅಧ್ಯಯನ ಮಾಡಿರುತ್ತೇನೆ, ಮಾತ್ರವಲ್ಲ, ಅವಧಿಯನ್ನು 3ದಿನಗಳಿಗೆ ಇಳಿಸಬಹುದೆ ಎಂದು ಚರ್ಚಿಸಿರುತ್ತೇನೆ. 75% ರಷ್ಟು ಬಿಲ್‌ಗಳನ್ನು ಬ್ಯಾಂಕಿನವರು ವಟಾಯಿಸುತ್ತಾರೆ ಮತ್ತು ಆ ಕ್ರಮದಲ್ಲಿ ಸರಕಿನ ಅವಧಿ 3ದಿನಗಳ ಬದಲಿಗೆ ಅವಧಿಯನ್ನು 7ದಿನಗಳಿಗೆ ಹೆಚ್ಚಿಸಿದರೆ, ಬ್ಯಾಂಕುಗಳು ಸರಕನ್ನು ಸ್ವೀಕರಿಸುವಂತೆ ಒತ್ತಾಯದ ಮೂಲಕ ಒಟ್ಟು ವ್ಯವಸ್ಥೆ, ಪರಸ್ಪರ ಸಹಕಾರದೊಂದಿಗೆ ನಿಭಾಯಿಸಲಾಗಿ, ಬ್ಯಾಂಕುಗಳು ಕೂಡಾ ಸಮಸ್ಯೆ ಎದುರಿಸುವಂತಾಗುವುದಿಲ್ಲ–ವೆಂದಿದ್ದಾರೆ. ನನಗನಿಸುತ್ತದೆ– ಬ್ಯಾಂಕುಗಳು ಮತ್ತು ರೇಲ್ವೇ ಪರಸ್ಪರ ಪೂರಕವಾಗಿ, ತಮ್ಮ ವ್ಯವಹಾರಗಳನ್ನು ಅಳವಡಿಸಿಕೊಂಡು ಅವನ್ನು ಆಧುನಿಕೀಕರಣ–ಗೊಳಿಸುವಂತಾಗಬೇಕು. ಇದರಿಂದ ಸರಕನ್ನು ಸ್ವೀಕರಿಸುವಾಗ ಬ್ಯಾಂಕಿನ ಇಂಡೆಮ್ನಿಟಿ ಸರಳವಾಗುತ್ತದೆ. ವರ್ತಕರಿಗೆ ನನ್ನ ಸಲಹೆ ಎಂದರೆ, 'ನಮ್ಮ ಇರಾದೆಯನ್ನು ಅನುಷ್ಠಾನಗೊಳಿಸುವತ್ತ ನಮ್ಮೊಂದಿಗೆ ಸಹಕರಿಸಿರಿ', ಆ ಮೂಲಕ ವಾಣಿಜ್ಯದ ವಿಧಿವಿಧಾನಗಳನ್ನು ನಾವು ಸರಳೀಕರಿಸುತ್ತೇವೆ. ನಮ್ಮಲ್ಲಿರುವ ವ್ಯಾಗನ್‌ಗಳ ಅತೀ ಹೆಚ್ಚು ಬಳಕೆ, ಇದರಿಂದ ವಾಣಿಜ್ಯ ಕೂಡಾ ಪ್ರಗತಿ ಸಾಧಿಸುತ್ತದೆ.



H-058-12

ಅಗ್ಗದ ಸರಕುಗಳನ್ನು ಸಾಗಿಸುವಾಗ ಮಾತ್ರ ವ್ಯಾಗನ್‌ಗಳ ತೆರವುಗೊಳಿಸುವುದರಲ್ಲಿ ವಿಳಂಬವಮಾಡಲಾಗುತ್ತದೆ ಹೊರತು, ದುಬಾರಿ ಸರಕುಗಳನ್ನು ಹಾಗೆ ಮಾಡಲಾಗುವುದಿಲ್ಲವೆಂದು ಇಲ್ಲಿ ಹೇಳಲಾಯಿತು. ಅದು ಹಾಗಲ್ಲ, ಪಶ್ಚಿಮ ಬಂಗಾಳದಲ್ಲಿ ಪೂಜಾ ಸಮಾರಂಭದ ಸಂದರ್ಭದಲ್ಲಿ ಸಾಮಾನ್ಯ ದೂರು ಅಂದರೆ, ಸರಕನ್ನು ಸಕಾಲಕ್ಕೆ ತೆರವುಗೊಳಿಸದೆ ಇರುವುದು. ಈ ಕಾರಣದಿಂದ ಇತ್ತೀಚೆಗೆ ವ್ಯಾಗನ್‌ಗಳು ಪ್ಲಾಟ್ ಫಾರಂಗಳಲ್ಲಿ ಸ್ಥಗಿತಗೊಂಡಿದ್ದರಿಂದ ಪಶ್ಚಿಮ ಬಂಗಾಳ ಸರಕಾರ, ಭಾರತೀಯ ರಕ್ಷಣಾ ಕಾಯಿದೆಯ ಅಡಿಯಲ್ಲಿ ಎಲ್ಲ ವ್ಯಾಗನ್‌ಗಳನ್ನು ತನ್ನ ಸುಪರ್ದಿಗೆ ತೆಗೆದುಕೊಂಡಿತು. ಅವರಿಗೆ ಬೇರೆ ಮಾರ್ಗವೇ ಇರಲಿಲ್ಲ.

ಈ ಮಸೂದೆಯಿಂದ ರೇಲ್ವೇ ತನ್ನ ಸರಕು ಸಾಗಾಟದ ಅವಕಾಶವನ್ನು ಟ್ರಕ್ಕುಗಳಿಗೆ ನೀಡಿದಂತಾಗುತ್ತದೆ ಎಂಬುದು ಇನ್ನು ಕೆಲವರ ಅಭಿಪ್ರಾಯ. ನಮ್ಮಂತೆ ಟ್ರಕ್ಕುಗಳು ಇಂತಹ ನಷ್ಟವನ್ನು ಎದುರಿಸಲು ತಯಾರಾಗಿರುವುದಿಲ್ಲ.

***

## ರೇಲ್ವೇ ಮಂತ್ರಾಲಯ : ಸಂಸದರ ಸಲಹಾ ಸಮಿತಿ ಸಭೆ

## ರೇಲ್ವೇ ಮತ್ತು ರಸ್ತೆಗಳು ಪರಸ್ಪರ ಪೂರಕವಾಗಿರಬೇಕು

## 22 ಜನವರಿ, 1973

ಶ್ರೀ ಟಿ.ಎ.ಪೈ: ನಿಮಗೆಲ್ಲ ತಿಳಿದಿರುವಂತೆ ನಾವೀಗ 5ನೇ ಪಂಚವಾರ್ಷಿಕ ಯೋಜನೆಯ ಪ್ರಸ್ತಾವನೆಯನ್ನು ಸಿದ್ಧಪಡಿಸುತ್ತಿದ್ದು, ಯೋಜನಾ ಆಯೋಗದ ಅಂಗೀಕಾರಕ್ಕೆ ಅದನ್ನು ಸಲ್ಲಿಸಬೇಕಾಗಿದೆ. ಏಪ್ರಿಲ್ 1974ರಿಂದ ಪ್ರಾರಂಭವಾಗುವ 5ನೇ ಪಂಚವಾರ್ಷಿಕ ಯೋಜನೆಗಾಗಿ ವಿವಿಧ ಕಾರ್ಯಕಾರೀ ಘಟಕಗಳು ಸಭೆ ಸೇರಿ ಅಲ್ಲಿ ಚರ್ಚಿಸಲಾಗುವ ಬೇಡಿಕೆಗಳು ಹಾಗೂ ಉತ್ಪಾದಕ ಗುರಿಗಳನ್ನು ನಮೂದಿಸಬೇಕಾಗಿರುವ ಹಿನ್ನೆಲೆಯಲ್ಲಿ ರೈಲ್ವೆಯ ಸರಕು ಸಾಗಾಣಿಕೆಯ ರೂಪರೇಷೆಗಳನ್ನು ವಿಷದಪಡಿಸಬೇಕಾಗಿರುವುದರಿಂದ ಈ ಸಭೆಯನ್ನು ಕರೆಯಲಾಗಿದೆ. ಅದರಂತೆಯೇ ಪ್ರಯಾಣ ದರಗಳಲ್ಲೂ ಹೆಚ್ಚಳ ಮಾಡುವ ಪ್ರಸ್ತಾವನೆ ಬಗೆಗಿನ ಅಧ್ಯಯನವೂ ಪ್ರಗತಿಯಲ್ಲಿದೆ.

ಪ್ರಾರಂಭಿಕ ಅಧ್ಯಯನಗಳಲ್ಲಿ ಕಂಡುಬಂದಂತೆ, ವಿವಿಧ ಮಂತ್ರಾಲಯಗಳ ಸೂಚನೆ ಪ್ರಕಾರ, ರೇಲ್ವೆಯ ಸರಕು ಸಾಗಾಣಿಕೆ ಪ್ರಸ್ತುತ 200ದಶಲಕ್ಷ ಟನ್ನುಗಳ ಬದಲು 323 ದಶಲಕ್ಷ ಟನ್ನುಗಳಿಗೇರಬಹುದೆಂದು ಅಂದಾಜಿಸಲಾಗಿದೆ. ಅಂತೆಯೇ, 4ನೇ ಪಂಚವಾರ್ಷಿಕ ಯೋಜನೆಯಂತೆ ನಾವು 215 ದಶಲಕ್ಷ ಟನ್ನುಗಳ ಗುರಿಯನ್ನು ತಲುಪಬಹುದಾಗಿದೆ. ಈ ಭವಿಷ್ಯವಾಣಿ ನಿಜವೇ ಆಗುವುದಾದಲ್ಲಿ, ನನಗನಿಸುತ್ತದೆ, ರೈಲ್ವೇಯ ಸರಕುಸಾಗಾಣಿಕೆಯಲ್ಲಿ 100ರಿಂದ 110 ದಶಲಕ್ಷ ಟನ್‌ಗಳ ಏರಿಕೆ ಈ ಮುಂದಿನ 5ವರ್ಷಗಳಲ್ಲಿ ಆಗಲಿದ್ದು, ಅದರಂತೆ ಪ್ರತಿವರ್ಷ 22ದಶಲಕ್ಷ ಟನ್ ಹೆಚ್ಚಳ ಉಂಟಾಗುತ್ತದೆ.

ಸರಕು ಸಾಗಾಣಿಕೆಯಿಂದಾಗುವ ಈ 50% ಹೆಚ್ಚಳದ ಕಾರಣದಿಂದಾಗಿ ಮುಂದಿನ 5ವರ್ಷಗಳಲ್ಲಿ ರೈಲ್ವೆಯ ಕ್ಷಮತೆಯ ಮೇಲೆ ವಿಪರೀತ ಸಮಸ್ಯೆಗಳ ಒತ್ತಡವನ್ನು ಹೇರಿದಂತಾಗುತ್ತದೆ ಎಂದು ಊಹಿಸಬಹುದಾಗಿದೆ. ನಿಮಗೆಲ್ಲ ತಿಳಿದಿರುವ ಹಾಗೆ ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ 5ದಶಲಕ್ಷ ಟನ್, ಎರಡನೇ ಯೋಜನೆಯಲ್ಲಿ 8ದಶಲಕ್ಷ ಟನ್, ಮೂರನೇ ಯೋಜನೆಯಲ್ಲಿ 9ದಶಲಕ್ಷ ಟನ್ ವಾರ್ಷಿಕ ಹೆಚ್ಚಳವಾದುದನ್ನು ನಾವು ಕಂಡಿದ್ದೇವೆ. ಪರಿಸ್ಥಿತಿಯನ್ನು ನಿಭಾಯಿಸುವ ದೃಷ್ಟಿಯಿಂದ ನಮಗೆ ಮುಂದಿನ ದಿನಗಳಲ್ಲಿ ಎರಡು ಲಕ್ಷ ಸರಕು ಬೋಗಿಗಳ ಅವಶ್ಯಕತೆ ಇದೆ ಎಂದು ಹೇಳಬೇಕಾಗುತ್ತದೆ. ಮಾತ್ರವಲ್ಲ, ಡೀಸೆಲ್ ಮತ್ತು ಇಲೆಕ್ಟ್ರಿಕಲ್ ಇಂಜಿನ್‌ಗಳ ಉತ್ಪಾದನೆಯನ್ನು ಅದೇ ಪ್ರಮಾಣದಲ್ಲಿ ಹೆಚ್ಚಿಸಬೇಕಾಗುತ್ತದೆ. ಪ್ರಯಾಣಿಕ ವರ್ಗದ ಸಾಗಾಟದಲ್ಲಿ ಕಂಡುಬರುವ ಹೆಚ್ಚಳವನ್ನು ನಿಭಾಯಿಸುವ ದೃಷ್ಟಿಯಿಂದ 5ನೇ ಪಂಚವಾರ್ಷಿಕ ಯೋಜನೆಯಲ್ಲಿ ಏನೇನು ಕ್ರಮಗಳನ್ನು ಕೈಗೊಳ್ಳಬೇಕೋ ಅವನ್ನೆಲ್ಲ ಮಾಡಲೇ ಬೇಕಾಗುತ್ತದೆ. ದೀರ್ಘ ಮತ್ತು ಮಧ್ಯಮ ದೂರದ ಪ್ರಯಾಣಿಕರ ವ್ಯವಸ್ಥೆಗೆ ಹೆಚ್ಚು ಒತ್ತು ಕೊಡಬೇಕಾಗಿದೆ. ಸಣ್ಣ ದೂರದ ಪ್ರಯಾಣಿಕ ಸಾಗಾಟಕ್ಕೆ ಹೆಚ್ಚು ಗಮನ ಕೊಡುವ ಅವಶ್ಯಕತೆ ಕಂಡುಬರುವುದಿಲ್ಲ, ಯಾಕಂದರೆ, ಅಂಥ ಕಡೆ ರಸ್ತೆ ಸಾಗಾಟದ ಸೌಲಭ್ಯವಿರುತ್ತದೆ.

ಅವಶ್ಯಕ ಸಾಮಗ್ರಿಗಳ ಸಾಗಾಟದ ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ, ಪ್ರಯಾಣಿಕರ ಸಾಗಾಟಕ್ಕಿಂತಲೂ, ಸರಕು ಸಾಗಾಣಿಕೆಗೆ ವಿಶೇಷ ಆದ್ಯತೆ ನೀಡಬೇಕಾಗಿದೆ. ಮೆಟ್ರೋಪಾಲಿಟನ್ ಕೇಂದ್ರಗಳು ಮತ್ತು ಇತರ ಪೇಟೆ ಪಟ್ಟಣಗಳಲ್ಲಿ ಪ್ರಯಾಣಿಕರಿಗಾಗಿ ಹೆಚ್ಚುವರಿ ಟರ್ಮಿನಲ್‌ಗಳನ್ನು ಅಳವಡಿಸುವುದರ

ಜತೆಗೆ, ಅಂಗಣದ ಕ್ಷಮತೆಯನ್ನು ಹೆಚ್ಚಿಸುವತ್ತ ಗಮನ ಹರಿಸಬೇಕಾಗುವುದು. ದೀರ್ಘಾವಧಿ ರೈಲುಗಳನ್ನೂ, ಬೋಗಿಗಳಲ್ಲಿ ಹೆಚ್ಚಿನ ಆಸನಗಳ ಅಳವಡಿಕೆಯ ಬಗ್ಗೆಯೂ ಚಿಂತಿಸಲಾಗುತ್ತಿದೆ. ಪ್ರಸ್ತುತ ಪ್ರಥಮ ದರ್ಜೆಯ ಬೋಗಿಗಳ 22ಹಾಸಿಗೆಗಳ ಸ್ಥಾನದಲ್ಲಿ ಪ್ರಥಮ ದರ್ಜೆಯ ಸುಖಾಸೀನ ಕುರ್ಚಿಗಳನ್ನು ಅಳವಡಿಸಿದಾಗ 60 ಪ್ರಯಾಣಿಕರಿಗೆ ಅವಕಾಶ ಕಲ್ಪಿಸಬಹುದಾಗಿದೆ. ಅಂತೆಯೇ, ಟು-ಟೈರ್ ಎ.ಸಿ. ಸ್ಲೀಪರ್‌ಗಳಲ್ಲಿ ಇಂದಿನ 18 ಪ್ರಯಾಣಿಕರ ಬದಲು 48 ಪ್ರಯಾಣಿಕರನ್ನು ಅಳವಡಿಸುವಂತೆ ಮಾಡಬಹುದು.

ಹೆಚ್ಚು ಹೆಚ್ಚು ಮೈಲ್ ಮತ್ತು ಎಕ್ಸ್‌ಪ್ರೆಸ್ ಟ್ರೈನ್‌ಗಳನ್ನು ಡೀಸೆಲ್ ಮತ್ತು ಇಲೆಕ್ಟ್ರಿಕ್ ಇಂಜಿನ್‌ಗಳ ಮೂಲಕ ಓಡಿಸಬೇಕಾಗಿ ಬರಬಹುದು. ಮೂರನೇ ದರ್ಜೆಯ ಪ್ರಯಾಣಿಕರಿಗಾಗಿ ಹೊಸ ಬಗೆಯ 90 ಆಸನಗಳ ವ್ಯವಸ್ಥೆಯ ಬಗ್ಗೆ ಆಲೋಚಿಸಲಾಗುತ್ತಿದೆ. ಈಗಿನ ಊಟದ ಡೈನಿಂಗ್ ಕಾರ್‌ಗಳ ಬದಲಾಗಿ ಪ್ಯಾಂಟ್ರಿ ಕಾರ್‌ಗಳ ಬಗೆಗೆ ಯೋಚಿಸಲಾಗುತ್ತಿದೆ. ಇದರಿಂದ ಮಧ್ಯದ ನಿಲ್ದಾಣಗಳಿಂದ ಊಟವನ್ನು ಸಂಗ್ರಹಿಸಿ ವಿತರಣೆಮಾಡಲು ಸಾಧ್ಯವಾಗುತ್ತದೆ. ಇದರಿಂದ ಮೂರನೇ ದರ್ಜೆಯ ಪ್ರಯಾಣಿಕರಿಗೆ ಹೆಚ್ಚು ಸ್ಥಳಾವಕಾಶವನ್ನು ಒದಗಿಸಲು ಸಾಧ್ಯವಾಗುತ್ತದೆ. ಈ ವ್ಯವಸ್ಥೆಯನ್ನು ಈಗಾಗಲೇ ಫ್ರೋಂಟಿಯರ್ ಮೈಲ್‌ನಲ್ಲಿ ಅಳವಡಿಸಲಾಗಿದ್ದು ಇದು ಬಹಳ ಜನಪ್ರಿಯವಾಗಿದೆ. ಇತ್ತೀಚೆಗೆ ಜಿ.ಟಿ.ಎಕ್ಸ್‌ಪ್ರೆಸ್‌ನಲ್ಲೂ ಅಳವಡಿಸಲಾಗಿದೆ.

ಇನ್ನೊಂದು ವಿಚಾರವೆಂದರೆ, ರೇಲ್ವೇ ಮೈಲ್ ಸರ್ವಿಸ್‌ಗೆ ಮತ್ತು ಪಾರ್ಸೆಲ್ ಸಾಗಾಟಕ್ಕೆ ಪ್ರತ್ಯೇಕ ವೇಗದ ಟ್ರೈನ್‌ಗಳನ್ನು ಪ್ರಾರಂಭಿಸಬೇಕು ಅನ್ನುವಂಥದ್ದು. ಇದರಿಂದ ಜನತಾ ಟ್ರೈನ್‌ಗಳು ಹೆಚ್ಚು ಪ್ರಯಾಣಿಕರನ್ನು ಒಯ್ಯಲು ಸಾಧ್ಯವಾಗುತ್ತದೆ. ರೇಲ್ವೇ ನಿಲ್ದಾಣಗಳಲ್ಲಿ ಜನದಟ್ಟಣೆಯನ್ನು ಕಡಿಮೆಮಾಡುವ ನಿಟ್ಟಿನಲ್ಲಿ ಪಾನೀಯ, ಆಹಾರ ಸಾಮಗ್ರಿ ಮತ್ತು ವಾರ್ತಾಪತ್ರಿಕೆಗಳ ಟ್ರಾಲಿಗಳನ್ನು ರದ್ದುಪಡಿಸುವಂಥದ್ದು. ಇದನ್ನು ಮುಖ್ಯವಾಗಿ ಪ್ರಾರಂಭಿಕ ನಿಲ್ದಾಣಗಳಲ್ಲಿ ರದ್ದುಪಡಿಸುವಂಥದ್ದು ಅತ್ಯಂತ ಅವಶ್ಯಕ.

ದೇಶದ ಅಭಿವೃದ್ಧಿಯ ದಿಶೆಯಲ್ಲಿ ಬಹು ದೊಡ್ಡ ರೀತಿಯ ರೇಲ್ವೇ ವಿಸ್ತರಣೆಯ ಕಾಲ ಸನ್ನಿಹಿತವಾಗಿದೆ ಎಂದು ಹೇಳಬಹುದು. ವಸ್ತು ಸಾಗಾಟದಿಂದ ಸಾಗಾಟದ ಸಮಸ್ಯೆ ಪರಿಹಾರವಾಗಬಹುದೆಂದು ಊಹಿಸಲು ಸಾಧ್ಯವೇ? ಕೃಷಿ ಮತ್ತು ಕೈಗಾರಿಕೆಯಲ್ಲಿ ಆಗಬಹುದಾದ ಪ್ರಗತಿಗೆ ಅನ್ವಯಿಸುವಂತೆ ನಮ್ಮ ದೇಶ

ಎಷ್ಟು ಟ್ರಕ್ಕುಗಳನ್ನು ನಿರ್ಮಾಣ ಮಾಡಲು ಮತ್ತು ಅದನ್ನು ರಸ್ತೆಯ ಮೇಲೆ ಓಡಿಸಲು ಶಕ್ತವಾಗಿರುತ್ತದೆ? ಪಾಶ್ಚಾತ್ಯ ರಾಷ್ಟ್ರಗಳಲ್ಲಿರುವಂಥ ರಸ್ತೆ ಸಾಮರ್ಥ್ಯವನ್ನು ನಮ್ಮ ದೇಶದಲ್ಲಿ ಊಹಿಸಿಕೊಳ್ಳಲು ಸಾಧ್ಯವಿದೆಯೇ? ನಮ್ಮ ಅರ್ಥ ವ್ಯವಸ್ಥೆಯಲ್ಲಿ ಆಗುತ್ತಿರುವ ಪ್ರಗತಿಗೆ ಅನುಗುಣವಾಗಿ ಸಾಗಾಟದ ಸಮಸ್ಯೆಯನ್ನು ಹತ್ತಿಕ್ಕಲು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕಾದುದು ಅವಶ್ಯವೆಂದು ನನ್ನ ಭಾವನೆ. ಹಾಗಾಗಿ ರೇಲ್ವೇ ಮತ್ತು ರಸ್ತೆಗಳು ಎಷ್ಟು ಪೂರಕವಾಗಿ ಕೆಲಸಮಾಡಬಲ್ಲವು ಎಂದು ಪರಿಗಣಿಸುವುದು ಇಂದಿನ ಅವಶ್ಯಕತೆಗಳಲ್ಲಿ ಬಹು ಮುಖ್ಯವಾದ ಸಂಗತಿ ಎಂದು ತಿಳಿಯಬೇಕಾಗಿದೆ. 16 ಲಾರಿಗಳನ್ನು ಓಡಿಸಲು ಬೇಕಾದಷ್ಟು ಡೀಸೆಲ್ ಒಂದು ಟ್ರೈನ್ ಓಡಿಸಲು ಸಾಕಾಗುತ್ತದೆ. 100ಲಾರಿಗಳಲ್ಲಿ ಸಾಗಿಸುವ ಸರಕನ್ನು ಒಂದು ಟ್ರೈನ್ ಸಾಗಿಸಬಲ್ಲುದು. ದೇಶದ ಒಟ್ಟು ಬಳಕೆಯ ದೃಷ್ಟಿಯಲ್ಲಿ ರೇಲ್ವೇಗೆ ಡೀಸೆಲ್ ಒದಗಿಸುವುದರಲ್ಲಿ ಆದ್ಯತೆಯನ್ನು ಈ ಕಾರಣಗಳಿಂದ ನೀಡಬೇಕಾಗಿದೆ. ಒಂದು ಕಿಲೋಮೀಟರ್ ದೂರಕ್ಕೆ ಟ್ರಕ್ಕುಗಳಿಂದಾಗುವ ವಾಯು ಮಾಲಿನ್ಯದ ಹತ್ತರಲ್ಲಿ ಒಂದಂಶ ಮಾತ್ರ ರೈಲಿನಿಂದ ಉಂಟಾಗಬಲ್ಲುದು.

ಸದ್ಯ ನಮ್ಮಲ್ಲಿ ಅಸ್ತಿತ್ವದಲ್ಲಿರುವ ಸಂಪನ್ಮೂಲಗಳನ್ನು – ಅದು ಇಂಜಿನ್‌ಗಳಾಗಲೀ, ಬೋಗಿಗಳಾಗಲೀ ಅಥವಾ ವ್ಯಾಗನ್‌ಗಳಾಗಲಿ – ಅತೀ ಗರಿಷ್ಠ ರೀತಿಯಲ್ಲಿ ಬಳಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಬೇಕಾಗಿದೆ. ರೇಲ್ವೇ ತನ್ನದೇ ಆದಂಥ ವಿದ್ಯುತ್ ಸ್ಥಾವರಗಳನ್ನು ಕೆಲವೊಂದು ನಿಲ್ದಾಣಗಳಲ್ಲಿ ಹೊಂದಿರಬೇಕಾಗಿರುವುದು ಅಷ್ಟೇ ಅವಶ್ಯಕವೆಂದು ನನಗನಿಸುತ್ತಿದೆ. ಇದರಿಂದಾಗಿ ವಿದ್ಯುತ್ ಕಡಿತಗಳಿಂದಾಗುವ ಅಡಚಣೆಗಳಿಂದ ಪಾರಾಗಬಹುದು.

***

## ಜನರ ಬದಲಾವಣೆಗಿಂತ ವ್ಯವಸ್ಥೆಯ ಬದಲಾವಣೆ ವಿಹಿತ

**20 ಡಿಸೆಂಬರ್ 1972**

**ಶ್ರೀ ಟಿ.ಎ.ಪೈ:** ರೇಲ್ವೇ ಕುರಿತಾದ ಚರ್ಚೆ ನಡೆದಾಗೆಲ್ಲ, ಸೌಲಭ್ಯ ಕೊರತೆ, ಭ್ರಷ್ಟತನ, ಕಳ್ಳತನ ಮತ್ತು ಟಿಕೆಟ್ ರಹಿತ ಪ್ರಯಾಣ ಇವುಗಳ ಬಗ್ಗೆ ದೂರುಗಳು ಪದೇ ಪದೇ ಕೇಳಿಬರುತ್ತಲೇ ಇರುತ್ತವೆ. ರೇಲ್ವೇಗೆ ಸಂಬಂಧಿಸಿದಂತೆ, ಈ ಸದನದಲ್ಲಿ ಚರ್ಚಿಸುವುದಕ್ಕೆ ಇನ್ನೂ ಹೆಚ್ಚಿನ ಮಹತ್ವದ ವಿಷಯಗಳಿವೆ. ಈ

ಸದನದ ಸಹಾಯ ಸಹಕಾರವನ್ನು ಈ ಸಂದರ್ಭದಲ್ಲಿ ಯಾಚಿಸುತ್ತಿದ್ದೇನೆ– ಯಾಕೆಂದರೆ, ರೇಲ್ವೇ ಈ ದೇಶದ ಅತ್ಯಂತ ದೊಡ್ಡ ಸಾರ್ವಜನಿಕ ವಲಯದ ಉದ್ಯಮವಾಗಿದ್ದು, ಇದು ದೇಶದ ಸಂಪರ್ಕ ಮತ್ತು ಸಾಗಾಟದ ಜೀವನಾಡಿ ಎಂದರೂ ತಪ್ಪಾಗದು. ಈ ವ್ಯವಸ್ಥೆಯ ಸುಸಂಬದ್ಧ ಕಾರ್ಯನಿರ್ವಹಣೆಯ ಅತ್ಯಂತ ಅವಶ್ಯವಿದೆ.

1951–52ರಲ್ಲಿ ನಾವು 1,208 ಮಿಲಿಯ ಪ್ರಯಾಣಿಕರನ್ನು ಸಾಗಿಸುತ್ತಿದ್ದೆವು. 1971–72ರಲ್ಲಿ ಈ ಸಂಖ್ಯೆ 2,536ಮಿಲಿಯದಷ್ಟು ಹೆಚ್ಚಿತು. ಅಂದರೆ, ಈ ದೇಶದ ಸುಮಾರು 253ಕೋಟಿ ಜನರು ಒಂದು ವರ್ಷದಲ್ಲಿ ನಮ್ಮ ರೇಲ್ವೇಯಲ್ಲಿ ಪ್ರಯಾಣಿಸಿದ್ದಾರೆ. 1971ರಲ್ಲಿ ಪ್ರಯಾಣಿಕ ರೇಲಿನ ಆದಾಯ ರೂ.215 ಕೋಟಿಯಾಗಿದ್ದರೆ, ಈ ವರ್ಷ 233ಕೋಟಿಯಾಗಿದೆ. ಪ್ರಯಾಣಿಕರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಲೇ ಇದೆ. ಅಷ್ಟೇ ಅಲ್ಲ, 1951–52ರಲ್ಲಿ ಪ್ರಯಾಣದ ದೂರ 63,072ಮಿಲಿಯ ಕಿ.ಮೀಟರ್ ಆಗಿದ್ದರೆ, 1971–72ರಲ್ಲಿ ಇದು 125,033ಮಿಲಿಯ ಕಿಲೋಮೀಟರ್‌ಗೆ ಹೆಚ್ಚಿದೆ.

ಸರಕು ಸಾಗಾಣಿಕೆಯಲ್ಲೂ ಅಭಿವೃದ್ಧಿ ಕಂಡಿದೆ. 1951–52ರಲ್ಲಿ 98.3 ಮಿಲಿಯ ಟನ್, 1965–66ರಲ್ಲಿ 203ಮಿಲಿಯ ಟನ್ ಮತ್ತು 1970–71ರಲ್ಲಿ ಇದು 197 ಮಿಲಿಯ ಟನ್– ಹೀಗೆ ಒಟ್ಟಿನಲ್ಲಿ ಇಂಡಿಯನ್ ರೇಲ್ವೇ ಸಾಮೂಹಿಕ ಸಾಗಾಟದ ವ್ಯವಸ್ಥೆಯಾಗಿ ಇಂದು ಬೆಳೆಯುತ್ತಿದೆ.

ಭಾರತೀಯ ರೇಲ್ವೇಯಲ್ಲಿ ದ್ವಿತೀಯ ದರ್ಜೆಯನ್ನು ತೆಗೆದು ಹಾಕುವ ತೀರ್ಮಾನ ಕೈಗೊಂಡಿದ್ದು ಸೂಕ್ತವಾಗಿಯೇ ಇದೆ. ಯಾಕೆಂದರೆ, ಕೇವಲ 0.4 ಶೇಕಡಾದಷ್ಟು ಜನರು ಮಾತ್ರ ಈ ದರ್ಜೆಯಲ್ಲಿ ಪ್ರಯಾಣ ಮಾಡುತ್ತಿದ್ದರು.

ನಮ್ಮ ಇಂದಿನ ಪ್ರಮುಖ ಸಮಸ್ಯೆ ಮತ್ತು ದೊಡ್ಡ ದಂಧೆ ಎಂದರೆ, ತೃತೀಯ ದರ್ಜೆಯ ಪ್ರಯಾಣಿಕರ ಸೌಲಭ್ಯವನ್ನು ಹೆಚ್ಚಿಸುವುದು. ಟ್ರೈನ್‌ನಲ್ಲಿ ಅತಿಯಾದ ಒತ್ತಡ ಮತ್ತು ಪ್ರಯಾಣಿಕರಿಗೆ ಹೆಚ್ಚಿನ ಸೌಲಭ್ಯಗಳನ್ನು ಒದಗಿಸುವಾಗ ನಾವು ವಿವಿಧ ದರ್ಜೆಗಳನ್ನು ಬೇರ್ಪಡಿಸುವುದನ್ನು ತ್ಯಾಗಮಾಡಬೇಕಾಗಬಹುದೆಂದು ನನಗನಿಸುತ್ತಿದೆ.

ನಮ್ಮ ಸಿಬ್ಬಂದಿಗಳ ಕಾರ್ಯವೈಖರಿಯನ್ನು ಪರಿಗಣಿಸುವಾಗ, ಅವರ ಕಾರ್ಯತತ್ಪರತೆ ಯಾವ ದೃಷ್ಟಿಯಿಂದಲೂ ಕೀಳುಮಟ್ಟದ್ದು ಎಂದು ಪರಿಗಣಿಸಲು ಸಾಧ್ಯವಿಲ್ಲ. ನಿಜ ಹೇಳಬೇಕೆಂದರೆ ಅವರ ಕಾರ್ಯಕ್ಷಮತೆಯ ಬಗ್ಗೆ ನಾವು ಹೆಮ್ಮೆ ಪಡಬೇಕು. 1956–57ರಲ್ಲಿ ರೇಲ್ವೇಯ ಕಾರ್ಮಿಕರ ಸಂಖ್ಯೆ ಎಷ್ಟಿತ್ತು? ಸುಮಾರು 14 ಲಕ್ಷ. ಈಗ ಆ ಸಂಖ್ಯೆ 17.5 ಲಕ್ಷಕ್ಕೆ ಏರಿದೆ (ಇದರಲ್ಲಿ ತಾತ್ಕಾಲಿಕ ಕಾರ್ಮಿಕರ 3.5 ಲಕ್ಷವೂ ಸೇರಿದೆ.). ಇವರನ್ನೂ ಸೇರಿಸಿಕೊಳ್ಳುವ ಎಂಬ ಇಂಗಿತ ನನ್ನಲ್ಲಿ ಇದೆ. ಯಾವಾಗ ಜಾಗ ಖಾಲಿಯಾಗುತ್ತೋ ಆವಾಗ ಈ ತಾತ್ಕಾಲಿಕರನ್ನು ಸೇರಿಸಿಕೊಳ್ಳುವ ಪ್ರಯತ್ನ ಮಾಡಬಹುದು.

ನಾವು ಕೆಲವೊಮ್ಮೆ ಮೂರನೇ ದರ್ಜೆಯ ಪ್ರಯಾಣಿಕರಂತೆ ವರ್ತಿಸುತ್ತಿದ್ದೇವೆಯೇ ಎಂಬ ಅನುಮಾನ ಬರುತ್ತದೆ. ಇದು ಸಹಜವೇ, ಯಾಕೆಂದರೆ ಒಂದೊಮ್ಮೆ ನಾನು ಕೂಡಾ ಅವರಲ್ಲೊಬ್ಬನಾಗಿದ್ದೆ. ಒಮ್ಮೆ ನಾವು ಮೂರನೇ ದರ್ಜೆಯನ್ನು ಹೊಕ್ಕಿದೆವೋ, ಅದೆಲ್ಲ ನಮ್ಮ ಸೊತ್ತೇ ಎಂಬಂತೆ ಕಾಲು ಚಾಚಿ ಕೂರುವಂಥ ಅಭ್ಯಾಸ ನಮ್ಮಲ್ಲಿ ಬೆಳೆದು ಬಿಟ್ಟಿದೆ. ಉದ್ಯೋಗದಲ್ಲಿರುವವರು ಇದು ನಮ್ಮದೇ ಸಂಪತ್ತು ಎಂದು ತಿಳಿದುಕೊಳ್ಳುವಂತೆ, ನಿರುದ್ಯೋಗಿಗಳು ಯಾವುದೇ ಕೆಲಸಕ್ಕೆ ಬಾರದವರು ಎಂಬ ಕಲ್ಪನೆ ಜನರಲ್ಲಿದ್ದರೆ, ಎಲ್ಲರೂ ಒಂದೇ, ಅಂದರೆ, ಸಮಾನ ರೀತಿಯಲ್ಲಿ ಪ್ರಮುಖರು ಎಂದು ನಾವು ಭಾವಿಸುತ್ತೇವೆ.

ನಮ್ಮ ಸಿಬ್ಬಂದಿವರ್ಗದವರ ಅಭಿವೃದ್ಧಿಗಾಗಿ ನಮ್ಮ ಕೊಡುಗೆ ಸಣ್ಣದೇನಲ್ಲ. ಆರೋಗ್ಯ ಮತ್ತು ಇತರ ಸೌಲಭ್ಯಕ್ಕಾಗಿ 20.13 ಕೋಟಿ, ಸಿಬ್ಬಂದಿ ಮಕ್ಕಳ ಶಿಕ್ಷಣ ಸಹಾಯಕ್ಕೆ 3 ಕೋಟಿ ಮತ್ತು ವಸತಿಗಾಗಿ 10.6 ಕೋಟಿ ರೂಪಾಯಿಯನ್ನು ನೀಡುತ್ತಿದ್ದೇವೆ.

ಅನೇಕ ಮಾನ್ಯ ಸದಸ್ಯರು ರೇಲ್ವೇಯಲ್ಲಿ ನಡೆಯುವ ಭ್ರಷ್ಟಾಚಾರದ ಕಡೆಗೆ ನನ್ನ ಗಮನ ಸೆಳೆದಿದ್ದಾರೆ. ಇವನ್ನೆಲ್ಲ ನೋಡಿದ ನನಗನಿಸುತ್ತದೆ, ಈ ದೇಶವೇ ಭ್ರಷ್ಟ ಜನರಿಂದ ತುಂಬಿ ಹೋಗಿದೆ ಅಂತ. ಈ ಮಾತನ್ನು ಖಂಡಿತವಾಗಿಯೂ ನಾನು ಸ್ವೀಕರಿಸಲು ಸಿದ್ಧನಿಲ್ಲ. ಇದೊಂದು ತೀರಾ ಸಣ್ಣ ಸಂಖ್ಯೆ ಇರಬಹುದು. ಕೆಲವರಷ್ಟೇ ದುರ್ನಡತೆ ತೋರಬಹುದು. ವ್ಯವಸ್ಥೆಯೆ ಇದಕ್ಕೆಲ್ಲ ಪ್ರೇರಣೆ ನೀಡುವಾಗ ಏನು ಮಾಡಲೂ ಆಗುವುದಿಲ್ಲ. ಸದವಕಾಶ ಸಿಕ್ಕಿದಾಗ ಜನ ಭ್ರಷ್ಟರಾಗುತ್ತಾರೆ. ಆದ್ದರಿಂದ ವ್ಯವಸ್ಥೆಯೇ ಇದಕ್ಕೆ ಅನುವು ಮಾಡಿಕೊಡದಿದ್ದರೆ ಒಳಿತು.

***

## ಕಾರು ಖರೀದಿ

## ಪರವಾನಗಿ ದುರ್ಬಳಕೆಯ ಬಗ್ಗೆ ಚರ್ಚೆ

## 17 ಎಪ್ರಿಲ್ 1974

ಶ್ರೀ ಟಿ.ಎ.ಪೈ (ಭಾರೀ ಉದ್ದಿಮೆ ಸಚಿವರು): ನನ್ನ ಸ್ನೇಹಿತ ಶ್ರೀ ಬಸು ಅವರು ಈ ಪ್ರಶ್ನೆಯನ್ನೆತ್ತಿರುವುದರಿಂದ ನಾನು ಅವರಿಗೆ ಆಭಾರಿಯಾಗಿದ್ದೇನೆ. ನಮ್ಮ ಇಲಾಖೆಯ ಅನುದಾನಗಳ ಬೇಡಿಕೆಯ ಮೇಲಿನ ಚರ್ಚೆ ಈ ಸದನದ ಸಮಕ್ಷಮಕ್ಕೆ ಬಂದಾಗ ಈ ವಿಷಯಗಳನ್ನು ಪ್ರಸ್ತಾಪಿಸಲು ನಾನು ಇಷ್ಟಪಟ್ಟಿದ್ದೆ. ಆದರೆ ಅಂಥ ಅವಕಾಶ ಸಿಗಲಿಲ್ಲ. ಇರಲಿ. ಈಗಲಾದರೂ ಸಂದರ್ಭ ಬಂತಲ್ಲ.

ಶ್ರೀ ಬಸು ಅವರು ಸತ್ಯವನ್ನೇ ನುಡಿದಿದ್ದಾರೆ. ಆದರೆ, ಪೂರ್ತಿ ಸತ್ಯವನ್ನಲ್ಲ. ಕಾರುಗಳ ಬೇಡಿಕೆ, ಉತ್ಪಾದನೆಗಿಂತ ಹೆಚ್ಚುತ್ತಿದೆ ಎಂದು ಅವರು ಹೇಳಿದರು. ಕಾರುಗಳು ಮತ್ತು ಸ್ಕೂಟರ್‌ಗಳ ಖರೀದಿಗಾಗಿ ಬಹಳ ದೊಡ್ಡ ಕಾದಿರಿಸುವಿಕೆಯ ಯಾದಿಯೇ ಇದೆ ಎಂದು ಕೂಡಾ ಅವರು ಹೇಳಿದರು. ಕಾರುಗಳು ಶ್ರೀಮಂತರ ಬಯಕೆ ಎಂದು ಹೇಳಿದರು. ಕಾರುಗಳ ಮಾರಾಟ ಕಾಳಸಂತೆಯಲ್ಲಿ ನಡೆಯುತ್ತಿದೆ, ಹಾಗಾಗಿಯೇ ಕಾರುಗಳ ಕೊರತೆ ಕಂಡುಬಂದಿದೆ ಎಂದೂ ಅವರು ಬೊಟ್ಟು ಮಾಡಿ ತೋರಿಸಿದರು. ಈ ಎಲ್ಲಾ ಸಮಸ್ಯೆಗಳಿಗೆ ನಿರ್ಬಂಧ ಹೇರುವುದೇ ಸೂಕ್ತ ಕ್ರಮವೆಂದು ಅವರು ತಿಳಿಸಿದರು. ಮತ್ತು ಅದನ್ನು ಕೂಡಾ ದುರುಪಯೋಗ ಪಡಿಸುತ್ತಾರೆ ಎಂದೂ ಹೇಳಿದರು. ಅವರು ಹೇಳಿದ್ದನ್ನೆಲ್ಲ ನಾನು ಒಪ್ಪುತ್ತೇನೆ.

### ವೈದ್ಯರಿಗೂ ದಾದಿಯರಿಗೂ ಕಾರಿನ ಕೋಟಾ

ಕಳೆದ ವರ್ಷದವರೆಗೆ ವ್ಯವಸ್ಥಾಪಕ ಮಂಡಳಿಗೆ 2%ದಷ್ಟು ಕೋಟಾ ನೀಡಲಾಗಿತ್ತು. ಕಳೆದ ಮೇ ತಿಂಗಳಲ್ಲಿ ನಾವು ಅದನ್ನು ಅನೂರ್ಜಿತಗೊಳಿಸಿದೆವು. ವ್ಯವಸ್ಥಾಪಕ ಮಂಡಳಿಯವರು ಅದನ್ನು ಮತ್ತೆ ಊರ್ಜಿತಗೊಳಿಸುವಂತೆ ತಗಾದೆ ಎತ್ತಿದ್ದಾರೆ. ಆ ಕೋಟಾವನ್ನು ವೈದ್ಯರು ಮತ್ತು ದಾದಿಯರಿಗೆ ಮೀಸಲಾಗಿಡಬೇಕೆಂದೂ, ಅಂಥವರನ್ನು ಕಾದಿರಿಸುವಿಕೆಗೆ ಕಾಯುವಂತೆ ಮಾಡಬಾರದೆಂದೂ ಹೇಳಿದೆ. ವ್ಯವಸ್ಥಾಪಕರ ಪಾಲಿಗೆ ಬಂದ ಕಾರುಗಳನ್ನು

ಮಾರಾಟ ಮಾಡಿ ಹಣ ಮಾಡಿದ್ದಾರೆ ಎಂದು ಸದಸ್ಯರು ಹೇಳಿದರು. ಈ ಹಿಂದೆ ಏನಾಗಿದೆಯೋ ನಾನರಿಯೆ. ಅದಕ್ಕೆ ನಾನು ಬಾಧ್ಯಸ್ಥನೂ ಆಗಲಾರೆ. ಎಲ್ಲೆಲ್ಲಿ ಜಾರುಗುಂಡಿಗಳಿದ್ದವೋ ಅವನ್ನೆಲ್ಲ ಈಗ ಮುಚ್ಚಿ ಸರಿಪಡಿಸಲಾಗಿದೆ. ಅದಕ್ಕೋಸ್ಕರವೇ ನಾನು ಈ ನಿರ್ಣಯವನ್ನು ತೆಗೆದುಕೊಂಡಿದ್ದು– ಈಗ ಈ ಸಂಬಂಧ ಅವರ ಪ್ರಶ್ನೆ ಏಳುವುದಿಲ್ಲ. ಇನ್ನೊಂದು ಮಾತು ಹೇಳಿದರು– ಅವರು ಪರವಾನಗಿಗಿಂತ ಹೆಚ್ಚು ಉತ್ಪಾದನೆ ಮಾಡುತ್ತಾರೆ ಅಂತ. ಇಲ್ಲ ಎಂಬುದೇ ಉತ್ತರ. ಆದರೂ ಅವರು ಪರವಾನಗಿಗಿಂತ ಹೆಚ್ಚು ಉತ್ಪಾದನೆ ಮಾಡಬಹುದು ಮತ್ತು ಅಂಥವನ್ನು ದಾಖಲಿಸಲಾಗುತ್ತದೆ ಕೂಡಾ. ಆ ಬಗ್ಗೆ ಸಂಶಯ ಬೇಡ.

**ಶ್ರೀ ಜ್ಯೋತಿರ್ಮಯಿ ಬಸು:** ಸ್ಕೂಟರ್ ಕಂಪೆನಿಗಳು ಅವರ ಪರವಾನಗಿಗಿಂತ ಹೆಚ್ಚು ಸ್ಕೂಟರ್‌ಗಳನ್ನು ಉತ್ಪಾದಿಸುತ್ತಾರೆ ಅಂತ ನಿಮಗೆ ಗೊತ್ತ?

**ಶ್ರೀ ಟಿ.ಎ.ಪೈ:** ಅವರ ಕ್ಷಮತೆಗಿಂತ 25%ದಷ್ಟು ಹೆಚ್ಚಿಗೆ ಉತ್ಪಾದಿಸಲು ಅವರಿಗೆ ಪರವಾನಗಿ ಇದೆ. ಇದಕ್ಕಿಂತಲೂ ನಿರ್ದಿಷ್ಟ ದೂರುಗಳಿದ್ದಲ್ಲಿ ನಾನು ಅವನ್ನು ತನಿಖೆಗೆ ಒಳಪಡಿಸಲು ಉತ್ಸುಕನಾಗಿದ್ದೇನೆ.... (ತಡೆ) ನನಗೆ ತಿಳಿದಿರುವ ಮಟ್ಟಿಗೆ ಅಂಥದ್ದೇನೂ ಇಲ್ಲ. ಸ್ಕೂಟರ್‌ಗಾಗಿ ಕಾದಿರಿಸುವಿಕೆಯ ದೊಡ್ಡ ಯಾದಿಯಿದೆ. ಕಾರುಗಳ ಕಾಳಸಂತೆಯಲ್ಲಿ ನೀವು ಹೇಳುವ ಹೆಚ್ಚಿನ ಬೆಲೆ ಎಲ್ಲಾ ಕಂಪೆನಿಗಳ ಕಾರುಗಳಿಗೆ ಇಲ್ಲ. ಹಿಂದೆ ಕಾಳಸಂತೆಯಲ್ಲಿ ಪ್ರೀಮಿಯರ್ ಪ್ರೆಸಿಡೆಂಟ್ ಕಾರಿಗೆ 12,000ರೂ. ಮತ್ತು ಹಿಂದೂಸ್ಥಾನ್ ಕಾರಿಗೆ 3,000 ರೂ. ದಿಂದ 4,000 ರೂ.ದಷ್ಟು ಇತ್ತು. ಇಂದು ಹಿಂದೂಸ್ಥಾನ್ ರಿಯಾಯಿತಿ ದರದಲ್ಲಿ ಲಭ್ಯವಿದೆ. ಇದು ಪೆಟ್ರೋಲ್ ದುಬಾರಿಯಾಗಿರುವ ಮುಂತಾದ ಕಾರಣದಿಂದಾಗಿ ಅಲ್ಲ, ಬೇಡಿಕೆ ತಗ್ಗಿರುವುದರಿಂದ.

## ಬಹುರಾಷ್ಟ್ರೀಯ ಕಂಪೆನಿಗಳ ಆಕರ್ಷಣೆ

ಆಟೋಮೊಬೈಲ್ ಉದ್ದಿಮೆಯನ್ನು ಉಳಿಸಿಕೊಳ್ಳುವ ಸಮಸ್ಯೆ ನನ್ನನ್ನು ಕಾಡುತ್ತಿದೆ. ಸದ್ಯ ನಾವು ತಯಾರಿಸುತ್ತಿರುವ ಕಾರುಗಳ ಗುಣಮಟ್ಟದ ಬಗೆಗೆ ನನ್ನದೇ ಸಂದೇಹಗಳಿವೆ. ಕೆಲವು ಚೆನ್ನಾಗಿವೆ– ಅವುಗಳ ಡಿಸೈನ್‌ಗಳ ಬಗ್ಗೆ ನನ್ನ ಆಗ್ರಹ ಏನೂ ಇಲ್ಲ. ಅವು ಚೆನ್ನಾಗಿ ಓಡಿದರೆ ಸಾಕು. ಅವುಗಳ ಇಂಜಿನ್‌ಗಳು ಗುಣಮಟ್ಟದ್ದಾಗಿದ್ದು, ಜನರ ಸಂಚಾರಕ್ಕೆ ಯೋಗ್ಯವಾಗಿರಬೇಕು.

ಹಾಗಾಗಿ ಕಾರು ನಿರ್ಮಾಣದ ಗುಣಮಟ್ಟವನ್ನು ಕಾಪಾಡುವಂತೆ ಕಾಳಜಿ ವಹಿಸಿದ್ದೇನೆ. ಹಿಂದೂಸ್ಥಾನ್ ಕಂಪೆನಿಯವರು ತಮ್ಮ ಡಿಸೈನ್‌ನನ್ನು ಪೂರ್ತಿ ಬದಲಾಯಿಸುತ್ತೇವೆ ಎಂದು ಮುಂದೆ ಬಂದರಲ್ಲದೆ, ಅದಕ್ಕೋಸ್ಕರ 10ಕೋಟಿ ರೂ. ವ್ಯಯ ಮಾಡುತ್ತೇವೆ ಎಂದರು. ನಾನು ಸಮ್ಮತಿಸಲಿಲ್ಲ. ಬಸು ಹೇಳಿದ್ದು- ನಾನು ಅಮೆರಿಕಾದಿಂದ ದೊಡ್ಡ ವ್ಯಕ್ತಿಗಳನ್ನು ಸ್ವಾಗತಿಸುವುದಕ್ಕೆ ಸಂತಸಪಡಬಹುದೆಂದು- ಇಂಥ ಹೊಗಳಿಕೆಯಿಂದೆಲ್ಲ ನಾನು ವಿಚಲಿತನಾಗುವವನಲ್ಲ. ನಾನು ಯಾವುದೇ ತೀರ್ಮಾನ ಕೈಗೊಂಡರೂ, ಅದನ್ನು ದೇಶದ ಹಿತದೃಷ್ಟಿಯಿಂದ ತೆಗೆದುಕೊಂಡಿರುತ್ತೇನೆ. ಈ ವಿಷಯದಲ್ಲಿ ನಾನು ಈ ಸದನಕ್ಕೆ ಬಾಧ್ಯನಾಗಿರುತ್ತೇನೆ. ಅವರು ಈ ಸಂಬಂಧದ ಹೇಳಿಕೆಯನ್ನು ನೀಡಿದಾಗ ನಾನು ಹೊಗಳಿಕೆಗೆ ಮೈಮರೆಯುತ್ತೇನೆ ಅಂತ ತಿಳಿದುಕೊಂಡಿರಬೇಕು- ನಾನು ಬಹಳಷ್ಟು ದೊಡ್ಡ ವ್ಯಕ್ತಿಗಳನ್ನು ಕಂಡವನಾಗಿದ್ದೇನೆ.

**ಶ್ರೀ ಜ್ಯೋತಿರ್ಮಯಿ ಬಸು:** ನಾನು ಹೇಳಿದ್ದು ನಿಮ್ಮ ಪಕ್ಷ ತೋರುತ್ತಿರುವ ಧೋರಣೆಯ ಕುರಿತಂತೆ. ನೀವು ಬಹುರಾಷ್ಟ್ರೀಯ ಸಂಸ್ಥೆಗಳ ಜತೆಗೆ ವಿಚಾರ ವಿನಿಮಯ ಮಾಡಿಕೊಳ್ಳಬಹುದೆಂಬ ದೃಷ್ಟಿಯಿಂದ- ನಾನು ಹೇಳಿದ್ದು. ನನ್ನಂಥವರು ಅಂಥವರನ್ನು ಒಂದು ಹರಿಗೋಲಿನಿಂದ ಕೂಡಾ ಮುಟ್ಟಲಾರೆವು.

**ಶ್ರೀ ಟಿ.ಎ.ಪೈ:** ದೇಶದ ಆಸಕ್ತಿಗಳನ್ನು ರಕ್ಷಿಸುವ ಸಂದರ್ಭದಲ್ಲಿ ನೀವು ಅಧಿಕಾರದಲ್ಲಿದ್ದಿದ್ದರೆ ಏನು ತೀರ್ಮಾನ ಕೈಗೊಳ್ಳುತ್ತಿದ್ದಿರೋ ನನಗಂತೂ ತಿಳಿಯುವುದಿಲ್ಲ. ನನ್ನ ಮಟ್ಟಿಗೆ ಹೇಳುವುದಿದ್ದಲ್ಲಿ, ಬಹುರಾಷ್ಟ್ರೀಯ ಕಂಪೆನಿಗಳನ್ನು ನಿಯಂತ್ರಣದಲ್ಲಿಡಬೇಕು ಮತ್ತು ಅವರನ್ನು ಹರಿಗೋಲಿನಿಂದ ಮುಟ್ಟುತ್ತೇನೋ ಇಲ್ಲವೋ ಗೊತ್ತಿಲ್ಲ-ಅದನ್ನು ನಾನು ಹೇಳಲಾರೆ. ಅವರೊಂದಿಗೆ ನಾನು ವ್ಯವಹರಿಸುವುದು ಶಕ್ಯವಿಲ್ಲವೆಂದರೆ ಶಕ್ಯವಿಲ್ಲ, ಅಷ್ಟೆ. ಅವರ ಮಧ್ಯಸ್ಥಿಕೆಯಿಂದ ನಮ್ಮ ದೇಶದ ವ್ಯವಹಾರಗಳಿಗೆ ಧಕ್ಕೆ ಸಂಭವಿಸುವುದಾದಲ್ಲಿ ಖಂಡಿತವಾಗಿಯೂ ನಾವು ಅದನ್ನು ಮಾಡಲಾರೆವು. ಅವರು ಹೇಳಿದ ಹಾಗೆ, ಏನಿದ್ದರೂ ಕಾಳಸಂತೆ ಬದುಕಿಕೊಂಡಿದೆ. ಮಾನ್ಯ ಸದಸ್ಯರು ಇನ್ನೊಂದು ಮಾತನ್ನು ಹೇಳಿದರು- ಸಾಕಷ್ಟು ಉತ್ಪಾದನೆಯಾಗುತ್ತಿಲ್ಲ ಅಂತ. ಅವರು ಕಾರುಗಳ ಉತ್ಪಾದನೆಯನ್ನೇ ನಿಲ್ಲಿಸಿ ಅಂತ ಹೇಳಿದರೆ... ಅದನ್ನೂ ಮುಚ್ಚುವ.

**ಶ್ರೀ ಜ್ಯೋತಿರ್ಮಯಿ ಬಸು:** ಹೌದು.

**ಶ್ರೀ ಟಿ.ಎ.ಪೈ:** ಇಲ್ಲ ಇಲ್ಲ.. ನೀವು ಅದನ್ನು ಹೇಳಲಾರಿರಿ. ಆಗ ನೀವು ನನ್ನಲ್ಲಿಗೆ ಬಂದು, ಅದನ್ನು ಹಿಂತೆಗೆದುಕೊಳ್ಳಿರಿ ಅಂತ ಹೇಳಬಹುದು. ಅದನ್ನು ರಾಷ್ಟ್ರೀಕರಣಗೊಳಿಸಬೇಕೆಂಬುದೇ ಸದ್ಯದ ಬೇಡಿಕೆ. ಯಾಕೆ? ಪ್ರತಿಯೊಂದು ಕಾರ್ಖಾನೆಯಿಂದ ನೀವು 10,000 ದಿಂದ 12,000ದಷ್ಟು ಕಾರ್ಮಿಕರನ್ನು ಉದ್ಯೋಗದಿಂದ ಹೊರದೂಡಬೇಕಾದೀತು. ಆಗ ಕಾರುಗಳ ಉತ್ಪಾದನೆ ಬೇಕೇಬೇಕು ಅಂತ ನೀವು ಹೇಳುತ್ತೀರಿ.

**ಸಭಾಧ್ಯಕ್ಷರು:** ರಾಷ್ಟ್ರೀಕೃತ ವಲಯದಲ್ಲಿ ನೀವು ಕಾರುಗಳ ನಿರ್ಮಾಣ ಮಾಡುವುದಿಲ್ಲವೇ?

**ಶ್ರೀ ಟಿ.ಎ.ಪೈ:** ನನ್ನ ವಾದ ಏನಂದ್ರೆ, ಕಾರುಗಳನ್ನು ತಯಾರು ಮಾಡಲೇ ಬೇಕೇ ಎಂಬುದು. ಜನರು ಕಾರುಗಳಲ್ಲಿ ಓಡಾಡಬಾರದು ಅಂತ ನೀವು ಹೇಳಿದರೆ, ಕಾರುಗಳ ತಯಾರಿ ಯಾಕೆ ಬೇಕು ಎಂಬುದೇ ಅದಕ್ಕಿರುವ ಉತ್ತರ. ಸಾರ್ವಜನಿಕ ವಲಯದಲ್ಲಾಗಲೀ, ಖಾಸಗೀ ವಲಯದಲ್ಲಾಗಲೀ, ಕಾರುಗಳ ನಿರ್ಮಾಣ ಮಾಡಿದ್ರೆ, ಯಾರಾದರೂ ಅದನ್ನು ಉಪಯೋಗಿಸಬೇಕಷ್ಟೇ? ಬೇಡಿಕೆ ಹೆಚ್ಚಾಗಿದ್ದು, ಉತ್ಪಾದನೆ ಕಡಿಮೆಯಾದಾಗ ಕೇವಲ ಕೆಲವೇ ಅದೃಷ್ಟವಂತರು ಅದನ್ನು ಪಡೆಯಲು ಸಾಧ್ಯವಾಗುತ್ತೆ. ಇಂದು ಕಾರು ಹೊಂದಿರುವುದು ಒಂದು ಘನತೆಯ ಸಂಕೇತವಾಗಿಬಿಟ್ಟಿದೆ. ಸ್ವೀಡನ್‌ನಂತಹ ದೇಶಗಳಲ್ಲಿ ಸೈಕಲ್‌ಗಳನ್ನು ಓಡಿಸ್ತಾರೆ. ಇಲ್ಲಿ ಸೈಕಲ್, ಮೋಟರ್ ಸೈಕಲ್, ಕಾರು, ವಿದೇಶದಿಂದ ಆಮದಿತ ಕಾರು– ಹೀಗೆ ಸಮಾಜವನ್ನು ಬೇರೆ ಬೇರೆ ಸ್ತರದವರನ್ನಾಗಿ ವಿಭಾಗಿಸುತ್ತಾರೆ. ಆದ್ರೆ ಸ್ವಾಮೀ, ನಾನು ಇದಕ್ಕೆಲ್ಲ ಹೊಣೆಯಾಗಲಾರೆ.

**ಶ್ರೀ ಜ್ಯೋತಿರ್ಮಯಿ ಬಸು:** ನಾನು ನನ್ನ ಕಾಲುಗಳನ್ನೇ ಉಪಯೋಗಿಸೋದು.

**ಶ್ರೀ ಟಿ.ಎ.ಪೈ:** ಅನುಕೂಲಸ್ಥರು ಕೂಡಾ ತಮ್ಮ ಕಾಲುಗಳನ್ನೇ ಉಪಯೋಗಿಸುವವರಿದ್ದಾರೆ. ಅದಲ್ಲ, ಲಕ್ಷೋಪಲಕ್ಷ ಜನರು ತಮ್ಮ ಕಾಲುಗಳನ್ನೇ ಉಪಯೋಗಿಸುತ್ತಿರುವುದನ್ನೂ ಕಂಡಿದ್ದೇವೆ ಮತ್ತು ತಾವು ಹಾಗೆ ಉಪಯೋಗಿಸುತ್ತೇವೆ ಎಂದು ಅವರೆಂದೂ ಅಂದುಕೊಂಡಿರುವುದೂ ಇಲ್ಲ.

ಆದ್ದರಿಂದ ಯಾರೂ ಈ ವಿಷಯದಲ್ಲಿ ತಮ್ಮ ಹೆಚ್ಚುಗಾರಿಕೆಯನ್ನು ತೋರಿಸುವ ಅವಶ್ಯಕತೆಯಿಲ್ಲ.

**ಶ್ರೀ ಎಸ್.ಎಂ. ಬ್ಯಾನರ್ಜಿ:** ನಾನು ನನ್ನ ಕಾಲುಗಳನ್ನು ಉಪಯೋಗಿಸ್ತಾ ಇದ್ದೆ, ಆದ್ರೆ ನನಗೆ ನಾಲ್ಕು ಕಾಲುಗಳು ಇಲ್ಲವಲ್ಲ.

**ಶ್ರೀ ಟಿ.ಎ.ಪೈ:** ಉದ್ದಿಮೆಗಳನ್ನು ತೆಗೆದುಕೊಳ್ಳುವ ಇರಾದೆ ಇದ್ದಲ್ಲಿ, ಆವಾಗ ಒಂದೇ ವಿಧದ ಮತ್ತು ಒಂದೇ ನಮೂನೆಯ ಸಾಮೂಹಿಕ ಉತ್ಪಾದನೆಯನ್ನು ಮಾಡುವ ಮೂಲಕ ಬೆಲೆಯನ್ನು ತಗ್ಗಿಸಬಹುದಿತ್ತು. ಆದ್ರೆ ಈಗಿರುವ ಮೂರು ಘಟಕಗಳಲ್ಲೂ ನಮೂದಿತ ಬೆಲೆ ಅವುಗಳ ಗುಣಮಟ್ಟಕ್ಕೆ ಸಾಟಿಯಾಗಿಲ್ಲ. ಆದರೂ ಪ್ರೀಮಿಯರ್ ಈ ವರ್ಷ 2000 ಕಾರುಗಳಿಗೆ ಇಂಡೋನೇಶ್ಯಾದ ಆಮದಿನ ಆರ್ಡರ್ ಪಡಕೊಂಡಿದೆ ಎಂದಾಗ ಸಂತಸವೆನಿಸುತ್ತಿದೆ. ಇದಕ್ಕೆ ನಾವು ಹೆಮ್ಮೆ ಪಡಬೇಕು. ಈ ಬಗೆಯ ವಿಷಯಗಳೂ ನಡೆಯುತ್ತಿರುವಾಗ ನಮ್ಮನ್ನೇ ನಾವು ಅತಿಯಾಗಿ ಹಲುಬಿಕೊಳ್ಳುವುದು ಯಾಕೆ? ಏನಿದ್ದರೂ ಕಾರು ಉದ್ದಿಮೆಯನ್ನು ರಾಷ್ಟ್ರೀಕರಣ ಮಾಡುವ ಪ್ರಶ್ನೆ ಈಗ ಉದ್ಭವಿಸುತ್ತಿಲ್ಲ, ಯಾಕೆಂದರೆ ಅದರಿಂದ ಪ್ರಯೋಜನವಾದರೂ ಏನಿದೆ? ಈ ದೃಷ್ಟಿಯಿಂದ, ಅವುಗಳ ಬಂಡವಾಳ ಏನಿದೆ, ಅದನ್ನು ಗಮನದಲ್ಲಿ ಇಟ್ಟುಕೊಂಡು, ಒಟ್ಟು ಉದ್ದಿಮೆಯನ್ನು ಒಂದಾಗಿ ಸುಸಜ್ಜಿತವನ್ನಾಗಿಸಬೇಕಾಗಿದೆ. ಈ ನಡುವೆ ಅವುಗಳ ಉತ್ಪಾದನೆಯ ಗುಣಮಟ್ಟವನ್ನು ಹೆಚ್ಚಿಸುವ ಜೊತೆಗೆ ಅವುಗಳ ವಿತರಣೆಯ ಕಡೆಗೂ ಲಕ್ಷ್ಯ ಕೊಡಬೇಕಾಗಿದೆ.

## ಸಂಸದರಿಂದ ದುರುಪಯೋಗ

ತಮ್ಮ ವಿಶೇಷ ಸೌಲಭ್ಯವನ್ನು ನಮ್ಮ ಸಂಸದರು ದುರುಪಯೋಗ ಪಡಿಸುತ್ತಿರುವ ಬಗ್ಗೆ, ಎಲ್ಲ ಸಂಸತ್ ಸದಸ್ಯರು ಮಾತನಾಡಿದ್ದು ಕೇಳಿ ನನಗೆ ಆಶ್ಚರ್ಯವಾಯಿತು. ಈ ಮಾತನ್ನು ನಾನು ಸ್ವತಃ ಹೇಳಿದ್ದರೆ, ಪ್ರಿವಿಲೆಜ್‌ನ ಸವಾಲು ಅಂತ ಪರಿಗಣಿಸಿ, ಇಡೀ ಸದನವೇ ನನ್ನ ವಿರುದ್ಧ ಮಾನಹಾನಿಯ ಆರೋಪ ಹೊರಿಸುತ್ತಿತ್ತು. ಈ ವಿಶೇಷ ಸೌಲಭ್ಯವನ್ನು ಎಲ್ಲ ಸಂಸದರಿಗೆ ಯಾಕಾಗಿ ನೀಡಲಾಗಿದೆ ಅಂದರೆ, ಅವರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮತ್ತು ದಿಲ್ಲಿಯಲ್ಲಿ ಅದರ ಉಪಯೋಗ ಮಾಡಿಕೊಳ್ಳಲಿ ಎಂಬ ಕಾರಣದಿಂದ. ಯಾರಾದರೂ ಅದರ ದುರುಪಯೋಗ ಮಾಡುತ್ತಿದ್ದರೆ ಅದು ಮಾನವ ಸಹಜ ಅಂತ ತಿಳಿದುಕೊಳ್ಳಲೇ?

ಯಾರೂ ಅತಿ ಮಾನವರು ಈ ಸದನದಲ್ಲಿ ಇಲ್ಲ. ಹಾಗೊಮ್ಮೆ ಇರುತ್ತಿದ್ದರೆ, ಅಂಥವರು ಈ ಸದನಕ್ಕೆ ಬರುತ್ತಿರಲಿಲ್ಲ. ಯಾರೇ ಈ ನೀತಿಯನ್ನು ಅತಿಕ್ರಮಿಸಿದ್ದೇ ಆದಲ್ಲಿ ಅಂಥವರ ವಿರುದ್ಧ ಕ್ರಮ ಕೈಗೊಳ್ಳುವುದಂತೂ ನಿಶ್ಚಿತ.

ನಾನು ಈ ಖಾತೆಯನ್ನು ವಹಿಸಿಕೊಂಡಾಗಿನಿಂದ, ಕಾರುಗಳನ್ನು ಹಂಚುವ ಕೆಲಸದ ಈ ಸೌಲಭ್ಯವನ್ನು ಸಭಾಧ್ಯಕ್ಷರು ಸ್ವತಃ ವಹಿಸಿಕೊಳ್ಳಲಿ ಎಂದೇ ಪ್ರಾರ್ಥಿಸುತ್ತ ಬಂದಿದ್ದೇನೆ. ಸಂಶಯಾಸ್ಪದವಾದ ಈ ಕೆಲಸ ನನಗೆ ಬೇಡ. ಈ ಬಗ್ಗೆ ನನಗೆ ಏನೇನೂ ಸಮಾಧಾನವಿಲ್ಲ. ಇದು ಸಭಾಧ್ಯಕ್ಷರ ಬಳಿಯಲ್ಲಿ ಇದ್ದರೇ ವಾಸಿ. ಯಾಕೆಂದರೆ, ಯಾರಿಗೆ ಕಾರು, ಯಾರಿಗೆ ಸ್ಕೂಟರ್‌ಗಳನ್ನು ವಿತರಿಸಬೇಕೆಂದು ಅವರಿಗೆ ಚೆನ್ನಾಗಿ ಗೊತ್ತಿದೆ. ಈಗಿನ ನಮ್ಮ ಈ ನಿರ್ಬಂಧದ ವ್ಯವಸ್ಥೆಯ ಕುರಿತು ನನಗೆ ಸಂತಸವಿದೆ. ಅವರು ಇದನ್ನು ನಮ್ಮಿಂದ ತೆಗೆದುಕೊಂಡಿದ್ದಾರೆ.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ಅಂದ್ರೆ, ನಾವು ಸಭಾಧ್ಯಕ್ಷರಿಂದ ಕಾರುಗಳನ್ನು ಪಡೆಯಬೇಕೆಂದಾಯ್ತು?

**ಶ್ರೀ ಟಿ.ಎ.ಪೈ:** ಹೌದು. ನಾವು ನಮ್ಮ ಕಛೇರಿಯಿಂದ ಇಂಥ ಸಂಸದರು ಕಳೆದ ವರ್ಷವಷ್ಟೇ ಕಾರನ್ನು ಪಡಕೊಂಡಿದ್ದಾರೆ ಅಂತ ಒಂದು ಷರಾ ಬರೆದರೆ, ಮತ್ತೆ ಅವರಿಗೆ ಸಿಗಲಾರದು. ಇಡೀ ಸಂಸತ್ತಿನ ಹೆಸರನ್ನು ಕೆಡಿಸಲು ನಾನು ಬಯಸುವುದಿಲ್ಲ. ಈ ಸೌಲಭ್ಯವನ್ನು ಸಭಾಧ್ಯಕ್ಷರಿಗೆ ನೀಡಲಾಗಿದ್ದು, ಅವರು ಯಾರಿಗೆ ಬೇಕು, ಯಾರಿಗೆ ಬೇಡ ಎಂಬುದನ್ನು ತೀರ್ಮಾನಿಸುತ್ತಾರೆ.

**ಶ್ರೀ ಎಸ್.ಎಂ.ಬ್ಯಾನರ್ಜಿ:** ಅಂದ್ರೆ, ಸಭಾಧ್ಯಕ್ಷರು ಅಥವಾ ಸಭಾಪತಿಗಳು ಮಾತ್ರ ಕಾರು ಅಥವಾ ಸ್ಕೂಟರ್‌ನ್ನು ಉಪಯೋಗಿಸಲು ಸಾಧ್ಯ ಅಂದಹಾಗಾಯಿತು? ಒಂದೇ ವಿಧದ ಮತ್ತು ಒಂದೇ ನಮೂನೆಯ ಸಾಮೂಹಿಕ ಉತ್ಪಾದನೆಯನ್ನು ಮಾಡುವ ಮೂಲಕ ಬೆಲೆಯನ್ನು ತಗ್ಗಿಸಬಹುದಿತ್ತು. ಆದ್ರೆ ಈಗಿರುವ ಮೂರು ಘಟಕಗಳಲ್ಲೂ ನಮೂದಿತ ಬೆಲೆ ಅವುಗಳ ಗುಣಮಟ್ಟಕ್ಕೆ ಸಾಟಿಯಾಗಿಲ್ಲ. ಆದರೂ...

**ಸಭಾಧ್ಯಕ್ಷರು:** ಈ ಸೌಲಭ್ಯವನ್ನು ಸಭಾಧ್ಯಕ್ಷರಿಗೆ ನೀಡಲಾಗಿಲ್ಲ. ನಮಗೆ ಅದು ಬೇಕಾಗಿಯೂ ಇಲ್ಲ. ಒಂದು ವಿಷಯ ಗಮನಿಸಿ-- ಸಂಸದರ ಅಧಿಕಾರ ದುರುಪಯೋಗ ಕೆಲವೇ ಬೆರಳೆಣಿಕೆಯ ವಿಷಯ. ಇಡೀ ಸಂಸತ್ತನ್ನು ಹೀಗಳೆಯುವುದು ಸರಿಯಲ್ಲ. ಅದನ್ನು ಸ್ಪಷ್ಟ ಮಾಡಿಕೊಳ್ಳಿರಿ.

**ಶ್ರೀ ಟಿ.ಎ.ಪೈ:** ಕಪ್ಪು ಹಣವನ್ನು ಹೇಗೆ ಸಂಪಾದಿಸುವುದು ಅಂತ ಬಸು ಅವರು ನನಗೆ ಕೇಳಿದ್ದಾರೆ.

**ಶ್ರೀ ಎಸ್.ಎಂ.ಬ್ಯಾನರ್ಜಿ:** ಎಷ್ಟು ಸಂಸದರು ಕಾರನ್ನು ಕೊಂಡುಕೊಂಡಿದ್ದಾರೆ ಮತ್ತು ಎಷ್ಟು ಜನ ಅವನ್ನು ಬಳಕೆ ಮಾಡುತ್ತಿದ್ದಾರೆ ಅಂತ ನನಗೆ ತಿಳಿಯಬೇಕಾಗಿದೆ. ಯಾಕಂದರೆ ನಾರ್ತ್ ಅವೆನ್ಯೂ ಅಥವಾ ಸೌತ್ ಅವೆನ್ಯೂಗಳ ಗ್ಯಾರೇಜುಗಳಲ್ಲಿ ಒಂದೇ ಒಂದು ಕಾರು ಕೂಡಾ ಕಾಣಿಸುತ್ತಿಲ್ಲ.

**ಸಭಾಧ್ಯಕ್ಷರು:** ಅಂದ್ರೆ ನಿಮ್ಮಲ್ಲಿ ಕಾರು ಇಲ್ಲ ಎಂದರ್ಥ

**ಶ್ರೀ ಟಿ.ಎ.ಪೈ:** ಅದನ್ನೇ ನಾನು ಹೇಳುತ್ತಿರುವುದು. ಪರೋಕ್ಷವಾಗಿ ಯಾವನೇ ಸಂಸದನ ವಿರುದ್ಧವಾಗಿ ಆರೋಪ ಹೊರಿಸುವುದನ್ನು ನಾನು ಮಾಡಲಾರೆ. ಶ್ರೀ ರಾಮಾವತಾರ ಶಾಸ್ತ್ರಿಗಳು ಹೇಳಿದಂತೆ, ಜನರು ಸಂಸದರನ್ನು ಸಂಪರ್ಕಿಸಿದರೆ, ತಮಗೆ ಕಾರು ಸಿಗಬಹುದೆಂದು ತಿಳಿದುಕೊಂಡಿದ್ದಾರೆ. ಸಂಸದರ ಶಿಫಾರಸ್ಸಿನಿಂದ ಎಷ್ಟು ಜನ ಕಾರುಗಳನ್ನು ಪಡೆದಿದ್ದಾರೆ ಎಂದು ನೋಡೋಣ- ಇಲ್ಲ, ಅದು ಸಾಧ್ಯವಿಲ್ಲ. ಅವರು ಪ್ರಯತ್ನಪಟ್ಟರೂ ಸಾಧ್ಯವಾಗದು ಯಾಕೆಂದರೆ, ಅದು ತಪ್ಪು. ಅವರು ಕೇಳಿದ್ದು ಕಪ್ಪು ಹಣವನ್ನು ಕಾರು ಖರೀದಿಗೆ ಹೇಗೆ ಬಳಸಲಾಗುತ್ತದೆ, ಅದಕ್ಕೆ ಪರವಾನಗಿ ಏನು? ಮತ್ತು ನಾವು ಅದನ್ನು ಹೇಗೆ ಸಹಿಸಿಕೊಂಡಿದ್ದೇವೆ ಅಂತ. ಎರಡು ವರ್ಷಗಳ ಕಾಲ ನೀವು ಖರೀದಿಸಿದ ಕಾರನ್ನು ಇನ್ನೊಬ್ಬರ ಹೆಸರಿಗೆ ವರ್ಗಾಯಿಸಲು ಬರುವುದಿಲ್ಲ. ಆದರೆ ಜನರು ತಾವು ಕಾರನ್ನು ಖರೀದಿಸಿ, ಬೇರೊಬ್ಬರು ಅದನ್ನು ಉಪಯೋಗಿಸುವಂತೆ ನೋಡಿಕೊಳ್ಳುತ್ತಾರೆ. ಇಂತಹ ಸಂದರ್ಭಗಳು ಬಹಳ ವಿರಳ ಎಂಬುದಂತೂ ನಿಜ. ಸ್ಕೂಟರ್‌ಗಳ ಉತ್ಪಾದನೆಯನ್ನು 1980ರ ಕೊನೆಯವರೆಗೆ 4 ಲಕ್ಷ ತಲುಪಬೇಕೆಂದು ನಾವು ಅಂದಾಜು ಮಾಡಿದ್ದೇವೆ. ನಮ್ಮಂಥ ದೇಶದಲ್ಲಿ ವೈಯಕ್ತಿಕ ಸಾರಿಗೆ ಸೌಕರ್ಯಕ್ಕೆ ಎರಡನೇ ಆದ್ಯತೆಯನ್ನು ನೀಡಬೇಕು. ಸಾರ್ವಜನಿಕ ಸಾರಿಗೆಗೆ ಮೊದಲ ಪ್ರಾಶಸ್ತ್ಯ ನೀಡಬೇಕು. ಆದ್ದರಿಂದ ಕಳೆದ ವರ್ಷ ನಮ್ಮ ಮಂತ್ರಾಲಯ, 47,000ದಿಂದ 48,000 ಕಾರುಗಳ ಉತ್ಪಾದನೆಯಲ್ಲಿ 5%ಕೋಟಾದ ಬದಲು 15% ಕೋಟಾವನ್ನು ಟ್ಯಾಕ್ಸಿಗಳಿಗೆ ನೀಡುವ ತೀರ್ಮಾನ ಕೈಗೊಂಡಿತು. ಈಗಿನ ಬೆಲೆಯೇರಿಕೆ ಬಂದಾಗ ಟ್ಯಾಕ್ಸಿ ಚಾಲಕರ ಆಸಕ್ತಿಗಳನ್ನು ಕಾಪಾಡುವ ನಿಟ್ಟಿನಲ್ಲಿ ಈ ಕ್ರಮ ಕೈಗೊಳ್ಳುತ್ತಿದ್ದೇವೆ.

**ಶ್ರೀ ಜ್ಯೋತಿರ್ಮಯಿ ಬಸು:** ಅವರು ನಾಳೆಯಿಂದ ಮುಷ್ಕರ ಹೂಡುವವರಿದ್ದಾರೆ. ಪೆಟ್ರೋಲ್ ಬೆಲೆಯಿಂದಾಗಿ ಅವರೆಲ್ಲ ಅರೆಹೊಟ್ಟೆಯಿಂದ ಸಂಕಟಪಡುತ್ತಿದ್ದಾರೆ. ನೀವು ಪೆಟ್ರೋಲನ್ನು ಕಡಿಮೆ ದರಕ್ಕೆ ನೀಡದೆ ಹೋದಲ್ಲಿ ಅವರು ಟ್ಯಾಕ್ಸಿಗಳನ್ನು ಓಡಿಸಲಾರರು.

**ಶ್ರೀ ಟಿ.ಎ.ಪೈ:** ಜನ ಮುಷ್ಕರ ಹೂಡುತ್ತಲೇ ಇರುತ್ತಾರೆ, ಯಾಕೆಂದರೆ ಒಂದಲ್ಲ ಒಂದು ಕುಂದುಕೊರತೆ ಅವರಿಗೆ ಇದ್ದೇ ಇರುತ್ತದೆ. ಮಾರುತಿ ಕಾರನ್ನು ಒಳಗೊಂಡಂತೆ, ಆಟೋಮೊಬೈಲ್ ಉದ್ದಿಮೆಯ ಕುರಿತು ಅನೇಕ ಆಸಕ್ತಿಯ ವಿಷಯಗಳು ಸಂಸತ್ತಿನ ಮುಂದೆ ಬಂದಿದೆ. ಮಾರುತಿ ಕಾರು ಇದೀಗ ಪರೀಕ್ಷೆಗೆ ಒಳಪಡಿಸಲಾಗುತ್ತಿದೆ–ವಿಆರ್‌ಡಿ ಮೂಲಕ.

**ಶ್ರೀ ಜ್ಯೋತಿರ್ಮಯಿ ಬಸು:** ಆಶಯ ಪತ್ರವನ್ನು ನಾಲ್ಕು ಸಾರಿ ವಿಸ್ತರಿಸಿದ ಬಳಿಕ. ನಾನು ವಸ್ತು ಸ್ಥಿತಿಯನ್ನೇ ಹೇಳುತ್ತಿದ್ದೇನೆ.

**ಶ್ರೀ ಟಿ.ಎ.ಪೈ:** ಅದು ದೊಡ್ಡ ಸಂಗತಿಯಲ್ಲ. ನನ್ನ ಪ್ರಿಯ ಸ್ನೇಹಿತನಿಗೆ ಅದು ಯಾವುದೇ ಕಂಪೆನಿಯದ್ದಾದರೂ ಸರಿ. ಅಮೆರಿಕಾದ ಜನರು ಮಾತ್ರ ಬೇಡ ಎನ್ನುವಂಥದ್ದು ಮತ್ತು ಎಲ್ಲವೂ ಸ್ವದೇಶಿ ಉತ್ಪಾದಕರೇ ಇರಲಿ ಅನ್ನುವಂಥದ್ದೇ ಮುಖ್ಯ.

**ಶ್ರೀ ಜ್ಯೋತಿರ್ಮಯಿ ಬಸು:** ಸರಕಾರ

**ಶ್ರೀ ಟಿ.ಎ.ಪೈ:** ಆಶಯ ಪತ್ರವನ್ನು ಕೊಟ್ಟಾಗ. ಅದು ಆರು ತಿಂಗಳಲ್ಲಿ ಉತ್ಪಾದನೆ ಪ್ರಾರಂಭಿಸುತ್ತಿದೆ ಎಂದು ಹೇಳಲಾಗಿತ್ತು.

**ಶ್ರೀ ಜ್ಯೋತಿರ್ಮಯಿ ಬಸು:** ನೀವು ನನಗೆ ಕೆರಳಿಸುತ್ತಿದ್ದೀರಿ. ನೀವು ಫ್ರಾನ್ಸ್‌ನ ರೆನಾಲ್ಟ್ ಜತೆಗೆ ಸಹಯೋಗದ ಒಪ್ಪಂದ ಮಾಡಿಕೊಳ್ಳುವ ವಿಷಯದವರೆಗೆ ಹೋಗಿದ್ದೀರಿ. ಅದಕ್ಕೋಸ್ಕರ 25ಲಕ್ಷ ಯೋಜನೆಯೊಂದನ್ನು ತಯಾರಿಸಿ ವ್ಯಯ ಮಾಡಿದ್ರಿ?

**ಸಭಾಧ್ಯಕ್ಷರು:** ವಿದೇಶೀ ಸಹಯೋಗ ಇಲ್ಲದ್ದು ಒಳ್ಳೆಯದೇ ಆಯ್ತಲ್ಲ.

**ಶ್ರೀ ಜ್ಯೋತಿರ್ಮಯಿ ಬಸು:** ಅದು ಪ್ರಧಾನಿಯವರ ಮಗ ಆದ್ದರಿಂದ. ನನ್ನನ್ನು ಉದ್ರೇಕಿಸಬೇಡಿ.

**ಸಭಾಧ್ಯಕ್ಷರು:** ವಿದೇಶೀ ಸಹಯೋಗ ಇಲ್ಲದ್ದು ಒಳ್ಳೆಯದೇ ಆಯ್ತಲ್ಲ ಅಂದೆ. ಇದೀಗ ಅಪ್ಪಟ ಸ್ವದೇಶೀ ತಾನೇ?

**ಶ್ರೀ ಟಿ.ಎ.ಪೈ:** ಆಶಯ ಪತ್ರವನ್ನು 11ಮಂದಿಗೆ ನೀಡಲಾಗಿತ್ತು ಮತ್ತು 4 ರಿನ್ಯೂವಲ್‌ಗಳನ್ನು ಸಮಾನವಾಗಿ ನೀಡಲಾಗಿತ್ತು. ಏನಿದ್ದರೂ ಸಮಾಧಾನದ ವಿಷಯ ಅಂತಂದ್ರೆ, ಪ್ರೋಟೋಟೈಪ್ ಪರೀಕ್ಷೆಯನ್ನು ಚೆನ್ನಾಗಿ ಎದುರಿಸಿದೆ ಅನ್ನುವಂಥದ್ದು. ಅದು 10,000 ಕಿಲೋಮೀಟರ್ ಓಡಿದೆ. ಇಂಜಿನ್ ಕೂಡಾ ಚೆನ್ನಾಗಿದೆ. ಇಷ್ಟು ಮಾಹಿತಿಯನ್ನಷ್ಟೇ ನಾನು ಕೊಡಬಲ್ಲೆ.

ಆಶ್ವಾಸನೆ ನೀಡಿದಂತೆ, ಭಾರತದಲ್ಲಿ ಇಲ್ಲಿಯವರೆಗೆ ನಿರ್ಮಾಣವಾದ ಕಾರುಗಳಲೆಲ್ಲ ಇದುವೇ ಅತ್ಯಂತ ಅಗ್ಗದ ಕಾರು. ಅವನ್ನೆಲ್ಲ ಈಗ ಚರ್ಚಿಸುವುದಕ್ಕೆ ಹೋಗುವುದಿಲ್ಲ. ಇಷ್ಟನ್ನು ಹೇಳಿದ್ದು ಯಾಕೆಂದರೆ, ಇದೊಂದು ವಿಷಯ ನನ್ನ ಗಮನಕ್ಕೆ ಬಾರದೇ ಇತ್ತೇ ಎಂಬುದಾಗಿ ನೀವೆಲ್ಲ ತಿಳಿದುಕೊಳ್ಳಬಾರದು ಎಂಬುದಕ್ಕಾಗಿ. ನಾನು ಏನನ್ನು ಇಲ್ಲಿ ಹೇಳಿಲ್ಲವೋ ಅದನ್ನು ನನ್ನ ಸಮ್ಮತಿಯಿಂದ ಆಗಿದೆ ಅಂತ ದಯವಿಟ್ಟು ತಿಳಿದುಕೊಳ್ಳಬೇಡಿ.

**ಸಭಾಧ್ಯಕ್ಷರು:** ಕಾರು ಎಷ್ಟು ಸಮಯದಲ್ಲಿ ಮಾರುಕಟ್ಟೆಗೆ ಬರಬಹುದು ಅಂತ ತಿಳಿದಿದ್ದೀರಿ?

**ಶ್ರೀ ಟಿ.ಎ.ಪೈ:** ಅದಾಗಲೇ ಬಂದಿದೆ.

**ಸಭಾಧ್ಯಕ್ಷರು:** ನಾನು ವಾಣಿಜ್ಯ ಉತ್ಪಾದನೆ ಬಗ್ಗೆ ಕೇಳುತ್ತಿದ್ದೇನೆ.

**ಶ್ರೀ ಟಿ.ಎ.ಪೈ:** ಕೈಗಾರಿಕಾ ಪರವಾನಗಿ ಕೊಡುವುದರ ಮೇಲೆ ಅವಲಂಬಿತವಾಗಿದೆ.

**ಸಭಾಧ್ಯಕ್ಷರು:** ಅದನ್ನು ಎಷ್ಟು ಬೇಗನೆ ನೀಡಬಲ್ಲಿರಿ?

**ಶ್ರೀ ಟಿ.ಎ.ಪೈ:** ಅದು ಸದ್ಯ ಕಾರ್ಯವಿಧಾನದಲ್ಲಿದೆ.

**ಸಭಾಧ್ಯಕ್ಷರು:** ಅವರು ನಮ್ಮ ಪ್ರಧಾನಿಯವರ ಮಗ ಎಂಬ ಕಾರಣ ಮಾತ್ರದಿಂದ ಅವರನ್ನು ನಿರುತ್ಸಾಹ ಗೊಳಿಸಬಾರದು. ಆದಷ್ಟು ಬೇಗನೆ ಅಗ್ಗದ ಕಾರು, ಒಳ್ಳೆಯ ಕಾರು ಮಾರುಕಟ್ಟೆಗೆ ಬರಬೇಕಂತ ನಾವು ಬಯಸುತ್ತೇವೆ.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನೀವು ಸಚಿವರಿಗೆ ಪ್ರಶ್ನೆಗಳನ್ನು ಹಾಕುತ್ತಿದ್ದೀರಿ.

**ಸಭಾಧ್ಯಕ್ಷರು:** ನಾನು ಪ್ರಶ್ನೆಗಳನ್ನು ಹಾಕಬಹುದೆಂದು ಅಂದುಕೊಂಡಿದ್ದೇನೆ.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ಅದು ಅಸಾಧ್ಯ!

**ಸಭಾಧ್ಯಕ್ಷರು:** ನಾನು ಮಧ್ಯ ಪ್ರವೇಶಿಸಬಹುದು.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ಯಾವ ಬಗೆಯಲ್ಲಿ?

**ಸಭಾಧ್ಯಕ್ಷರು:** ಇನ್ನಷ್ಟು ವಿಶದೀಕರಿಸುವ ನೆಲೆಯಲ್ಲಿ. ವಿಷಯವನ್ನು ಪ್ರಸ್ತಾಪಿಸಿ ಆಗಿದೆ. ಆಗ ನೀವು ಇಲ್ಲಿರಲಿಲ್ಲ.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನಾನಿದ್ದೆ.

**ಸಭಾಧ್ಯಕ್ಷರು:** ಮಾರುತಿ ವಿಷಯ ಪ್ರಸ್ತಾಪಿಸಿದಾಗ?

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನೀವು ನಿಮ್ಮ ಆಸನದಲ್ಲಿ ಕುಳಿತಿರುವಾಗ ಸದನದ ಆಗುಹೋಗುಗಳನ್ನು ಸುಸೂತ್ರವಾಗಿ ನಿಯಂತ್ರಿಸುವುದಷ್ಟೇ ನಿಮ್ಮ ಕೆಲಸ. ನೀವು ಪ್ರಧಾನಿಯವರ ಪುತ್ರನನ್ನು ಶಿಫಾರಸು ಮಾಡುವಂತಿಲ್ಲ.

**ಸಭಾಧ್ಯಕ್ಷರು:** ಚರ್ಚೆಯಲ್ಲಿ ಅವರ ಹೆಸರನ್ನು ಹೇಳಲಾಯಿತು. ಚರ್ಚೆಯ ಅವಧಿಯಲ್ಲಿ ವಿಶದೀಕರಣ ಕೇಳಿದೆ. ನಾನು ನಿಯಮಗಳ ಚೌಕಟ್ಟಿನಲ್ಲೇ ಇದ್ದೇನೆ. ಈ ನಿರ್ಣಯ ನನ್ನದು ಅಂತಿಮ. ನಡುವೆ ನನಗೆ ತಡೆಯೊಡ್ಡುವುದು ಬೇಡ.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನೀವು ಆಸನದಲ್ಲಿರುವಾಗ ವಿಶದೀಕರಣ ಕೇಳುವುದು ಹೇಗೆ?

**ಸಭಾಧ್ಯಕ್ಷರು:** ನಾನು ಕೇಳಬಹುದು.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ಇಲ್ಲ. ಕೂಡದು. ಇದು ಅತ್ಯಂತ ಆಕ್ಷೇಪಣೀಯ.

**ಸಭಾಧ್ಯಕ್ಷರು:** ಇಲ್ಲ. ನಾನು ನಿಯಮಗಳ ಪರಿಧಿಯೊಳಗಿದ್ದೇನೆ. ಅದು ಸ್ಪಷ್ಟವಿದೆ.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನೀವು ಚರ್ಚೆಯಲ್ಲಿ ಭಾಗವಹಿಸುವುದಾದರೆ ಸದನದ ಅಂಗಣಕ್ಕೆ ಬನ್ನಿ.

**ಸಭಾಧ್ಯಕ್ಷರು:** ಚರ್ಚೆಯಲ್ಲಿ ಭಾಗವಹಿಸುವ ಪ್ರಶ್ನೆ ಬರುವುದಿಲ್ಲ. ನಾನು ಹೀಗೆ ಮಾಡಬಾರದೆಂದು ಯಾವ ನಿಯಮ ಹೇಳುತ್ತದೆ ಎಂದು ನನಗೆ ತೋರಿಸಿ.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನೀವು ಆಸನದಲ್ಲಿದ್ದಾಗ ಚರ್ಚೆಯಲ್ಲಿ ಭಾಗವಹಿಸುತ್ತಿದ್ದೀರಿ. ಯಾವ ನಿಯಮದ ಪ್ರಕಾರ ನೀವು ಅದನ್ನು ಮಾಡಬಹುದು?

**ಸಭಾಧ್ಯಕ್ಷರು:** ಚರ್ಚೆಯಲ್ಲಿ ಭಾಗವಹಿಸುವುದಲ್ಲ. ಚರ್ಚೆಯಲ್ಲಿ ವಿಶದೀಕರಿಸುವ ಸಲುವಾಗಿ ಪ್ರಶ್ನೆ ಕೇಳಬಹುದು. ಅಷ್ಟೇ ಮಾಡಿದ್ದು.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನೀವು ಆಸನದಲ್ಲಿರುವಾಗ, ಸಚಿವರಿಗೆ ಪ್ರಶ್ನೆಗಳನ್ನು ಹೇಗೆ ಕೇಳಬಹುದು?

**ಸಭಾಧ್ಯಕ್ಷರು:** ಚರ್ಚೆಯಲ್ಲಿ ಎತ್ತಲಾದ ವಿಷಯದ ವಿಶದೀಕರಣ. ಅದರ ಮೇಲೆ ನಾನು ಪ್ರಶ್ನೆಗಳನ್ನು ಕೇಳಬಹುದು. ಸದಸ್ಯರೊಬ್ಬರು ಪ್ರಶ್ನೆ ಎತ್ತಿದಾಗ ಅದನ್ನು ವಿಶದೀಕರಿಸುವಂತೆ ಕೇಳಬಹುದು.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನೀವು ಹೇಳುತ್ತಿದ್ದೀರಿ, ಇದು ಸ್ವದೇಶೀ ಕಾರು. ಅದಕ್ಕೆ ಪ್ರೋತ್ಸಾಹಿಸಿ ಕೊಡಬೇಕಂತ.

**ಸಭಾಧ್ಯಕ್ಷರು:** ಅಂದ ಮಾತ್ರಕ್ಕೆ?

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ಅದು ಸರಿಯಲ್ಲ.

**ಸಭಾಧ್ಯಕ್ಷರು:** ಯಾಕೆ ಅಲ್ಲ?

**ಶ್ರೀ ಮಾಧುರ್ಯ ಹಲ್ದರ್:** ಅವರಿಗೆ ಯಾವಾಗ ಪರವಾನಗಿಯನ್ನು ಕೊಡುತ್ತೀರಿ ಎಂದು ಕೇಳುತ್ತಿದ್ದೀರಿ.

**ಸಭಾಧ್ಯಕ್ಷರು:** ನಾನು ನಿಯಮಗಳ ಚೌಕಟ್ಟಿನಲ್ಲೇ ಇದ್ದೇನೆ.

**ಶ್ರೀ ಅಟಲ್ ಬಿಹಾರಿ ವಾಜಪೇಯಿ:** ನಾನು ಅದನ್ನು ಒಪ್ಪುವುದಿಲ್ಲ.

**ಶ್ರೀ ಜ್ಯೋತಿರ್ಮಯಿ ಬಸು:** ಮಾನ್ಯ ಮಂತ್ರಿ ಮಹೋದಯರಿಂದ ನಾನೇನು ತಿಳಿಯ ಬಯಸಿದೆನೆಂದರೆ, ಮಾರುತಿ ವಿತರಕರು ವಿತರಣೆಯ ಹಕ್ಕುಗಳಿಗಾಗಿ 3 ಲಕ್ಷವನ್ನು ನೀಡ್ತಾ ಇದ್ದಾರೆ ಅಂತ. ಅಂದ್ರೆ, ಆತ 3ಲಕ್ಷ ಕೊಟ್ಟು ಹಕ್ಕನ್ನು ಪಡಕೊಂಡ ಮೇಲೆ ಅದರ ಎಷ್ಟೋ ಪಟ್ಟು ಹಣವನ್ನು ಕಾರು ಮಾರಾಟದಲ್ಲಿ ಗಳಿಸಬೇಕಾಗುತ್ತದೆ. ಹೀಗೆ ಕಾಳಸಂತೆಗೆ ಪ್ರಚೋದನೆ ನೀಡಿದಂತಾಗುತ್ತದೆ.

**ಸಭಾಧ್ಯಕ್ಷರು:** ನೀವು ಕೇಳಿದ್ದೀರಿ. ಅವರು ಉತ್ತರಿಸುತ್ತಾರೆ.

**ಶ್ರೀ ಜ್ಯೋತಿರ್ಮಯಿ ಬಸು:** ಯಾರೇ ಯಾವುದೇ ಸಾಧನೆ ಮಾಡುವುದಕ್ಕೆ ನಾನು ವಿರೋಧಿಯಲ್ಲ. ಅವರು ಅದಕ್ಕೆ ಅರ್ಹರಾಗಿರಬೇಕು ಅಷ್ಟೆ. ನೀವಿಲ್ಲಿ 1972ರಿಂದಲೇ ಇದ್ದೀರಿ ಅಂತ ನನಗನಿಸುತ್ತದೆ. ನೀವು ಉಪಚುನಾವಣೆಯಲ್ಲಿ ಆರಿಸಿ ಬಂದಿರಿ. ನನ್ನ ಆಪಾದನೆ ಅಂದ್ರೆ, ಸ್ಥಾನಮಾನದ ದುರುಪಯೋಗ, ಪಕ್ಷಪಾತ ತೋರಿಸುವುದು ಮತ್ತು ಜಗತ್ತಿನಲ್ಲಿರುವುದನ್ನೆಲ್ಲ ಒದಗಿಸುವುದು. ಅದಿಲ್ಲವಾದರೆ, ಯಾರೇ ಉದ್ದಿಮೆಯಲ್ಲಿ ತೊಡಗಿರಲಿ, ನಮಗೆ ಯಾವುದೇ ಅಭ್ಯಂತರವಿಲ್ಲ. ಕಮ್ಯುನಿಷ್ಟ್ ಪಾರ್ಟಿಯ ವಕ್ತಾರನಾಗಿ ಹೇಳುವುದೆಂದರೆ, 20ಕೋಟಿ ಬಂಡವಾಳದ ಈ ಉದ್ದಿಮೆ ಖಾಸಗೀ ವಲಯಕ್ಕೆ ಹೋಗುವುದನ್ನು ನಾವು ವಿರೋಧಿಸುತ್ತೇವೆ. ಇದೊಂದು ಸಣ್ಣ ಕಾರು ಇರಬಹುದು. ಆದರೆ ಹಣ ಸಣ್ಣದಲ್ಲವಲ್ಲ? ಇಲ್ಲೊಬ್ಬ ಹುಡುಗ ಬರೀ 748ರೂ.ಗಳಿಸುವವನಿದ್ದಾನೆ!

**ಸಭಾಧ್ಯಕ್ಷರು:** ನೀವು ಪ್ರಶ್ನೆಗಳನ್ನು ಕೇಳಿದ್ದೀರಿ. ಅವರು ಅದಕ್ಕೆ ಉತ್ತರಿಸುತ್ತಾರೆ. ಅದಕ್ಕೆ ಉತ್ತರಿಸುದಕ್ಕಿರುವುದಕ್ಕೇ ಅವರು ಪ್ರಶ್ನೆಗೆ ಬರುತ್ತಿದ್ದಾರೆ.

**ಶ್ರೀ ಜ್ಯೋತಿರ್ಮಯಿ ಬಸು:** ನಿಮಗೆ ಮನವರಿಕೆಯಾಗಿದೆ. ಹಾಗಾಗಿ ನಾನು ಆಭಾರಿಯಾಗಿದ್ದೇನೆ.

**ಸಭಾಧ್ಯಕ್ಷರು:** ನೀವು ಇನ್ನೊಂದು ಭಾಷಣ ಮಾಡುವುದಕ್ಕೆ ಇದು ತಯಾರಿಯೋ?

**ಶ್ರೀ ಜ್ಯೋತಿರ್ಮಯಿ ಬಸು:** ಇಲ್ಲ..ಇಲ್ಲ, ಮಾನ್ಯ ಸಚಿವರು ಉತ್ತರಿಸಬೇಕಂತಲೇ ನಾನು ಬಯಸುವುದು. ಅವರು ಸದನಕ್ಕೆ ಬಹಳ ಯೋಗ್ಯರಿದ್ದಾರೆ. ಅವರು ಸದನಕ್ಕೆ ಅನೇಕ ಅಮೂಲ್ಯ ವಿಷಯಗಳನ್ನು ತಿಳಿಸಿದ್ದಾರೆ, ಮತ್ತೆ ಸಹಜವಾಗಿ, ಕೆಲವು ವಿಷಯಗಳನ್ನು ನೀಡುವ....

**ಸಭಾಧ್ಯಕ್ಷರು:** ನೀವು ನಿಮ್ಮ ಪ್ರಶ್ನೆಯನ್ನು ಕೇಳಿ.

**ಶ್ರೀ ಜ್ಯೋತಿರ್ಮಯಿ ಬಸು:** ನನಗಿಷ್ಟೇ ಬೇಕು... ಈ 3 ಲಕ್ಷ ರೂಪಾಯಿಗಳನ್ನು ಸಂಗ್ರಹಿಸಲಾಗುತ್ತಿದೆ ಎಂಬುದರ ಬಗೆಗೆ ಅವರಿಗೆ ಅರಿವಿದೆಯೇ?

**ಸಭಾಧ್ಯಕ್ಷರು:** ಅಷ್ಟೇ ತಾನೇ ನೀವು ಕೇಳಿದ್ದು.

**ಶ್ರೀ ಜ್ಯೋತಿರ್ಮಯಿ ಬಸು:** ಅವರಿಗೆ ಅದರ ಬಗ್ಗೆ ತಿಳುವಳಿಕೆ ಇದ್ದಲ್ಲಿ, ಅದಕ್ಕೋಸ್ಕರ ಅವರು ಕೈಗೊಳ್ಳಲಿರುವ ಕ್ರಮವೇನು?

**ಸಭಾಧ್ಯಕ್ಷರು:** ದಯವಿಟ್ಟು ಮುಂದುವರಿಸಿ.

**ಶ್ರೀ ಟಿ.ಎ.ಪೈ:** ನನಗೆ ವೈಯಕ್ತಿಕವಾಗಿ ಅದರ ಅರಿವಿಲ್ಲ.

**ಶ್ರೀ ಎಸ್.ಎಂ.ಬ್ಯಾನರ್ಜಿ:** ನಾನು ಮಂತ್ರಿವರ್ಯರಿಗೆ ಋಣಿಯಾಗಿದ್ದೇನೆ, ಯಾಕೆಂದರೆ ಅದೇ ನನ್ನ ಪ್ರಶ್ನೆಯಾಗಿತ್ತು.

**ಶ್ರೀ ಟಿ.ಎ.ಪೈ:** ನಾನು ಈ ಬಗೆಯ ಆಪಾದನೆಗಳನ್ನು ವಿರೋಧ ಪಕ್ಷದಲ್ಲಿರುವ ನಮ್ಮ ಮಿತ್ರರಿಂದ ಆಲಿಸುವುದು ವಾಡಿಕೆಯಾಗಿದೆ. ಆದರೆ ಅವೆಲ್ಲ ನನ್ನ ಮಂತ್ರಾಲಯಕ್ಕೆ ಸಂಬಂಧಿಸಿದ್ದಲ್ಲ– ಯಾರು ವಹಿವಾಟಿನವರು, ಯಾರಿಗೆ ಈ ವಹಿವಾಟನ್ನು ನೀಡಲಾಗಿದೆ, ಮತ್ತು ಎಷ್ಟು ಹಣವನ್ನು ಪಡೆಯಲಾಗಿದೆ ಮುಂತಾದ್ದು...(ತಡೆ) ನನಗೆ ಸಂಬಂಧಿಸಿದ್ದನ್ನು ಹೇಳುವುದಾದರೆ ಆಶಯ ಪತ್ರವನ್ನು ನೀಡಲಾಗಿದೆ.

**ಶ್ರೀ ಜ್ಯೋತಿರ್ಮಯಿ ಬಸು:** ನಾನು ತಿಳಕೊಂಡೆ ನೀವು ಸಾಮೂಹಿಕವಾಗಿ ಕಾರ್ಯನಿರ್ವಹಿಸುತ್ತೀರಿ ಅಂತ. ನೀವು ಆಸ್ಟ್ರಿಚ್‌ನಂತೆ ನಿಮ್ಮ ತಲೆಯನ್ನು ಉಸುಕಿನಲ್ಲಿ ಮರೆಸಿಕೊಂಡರೆ ಅವರು ನಿಮ್ಮನ್ನು ನೋಡಲಾರರು ಅಂದುಕೊಂಡಿರೋ ಹೇಗೆ?

**ಶ್ರೀ ಟಿ.ಎ.ಪೈ:** ನನ್ನ ಪ್ರಿಯ ಮಿತ್ರರು ನನ್ನನ್ನು ಸಾಮೂಹಿಕವಾಗಿ ಬೈಯುವ ಮೂಲಕ ತಾನು ಗೆದ್ದೆನೆಂದು ತಿಳಿದುಕೊಂಡಂತೆನಿಸುತ್ತದೆ. ಯಾವುದೇ ಸಾಮೂಹಿಕ ಜವಾಬ್ದಾರಿಯನ್ನು ನಾನೆಂದೂ ಅಲ್ಲಗಳೆಯುವುದಿಲ್ಲ. ಅದರ ಸಂಗಡವೇ ನಾನು ಹೇಳಬಯಸುವುದೇನೆಂದರೆ, ಅಂಥದ್ದು ನನ್ನ ಕಾರ್ಯಭಾರದ ಇತಿಮಿತಿಯಲ್ಲಿ ಒಳಗೊಳ್ಳದೇ ಹೋದಲ್ಲಿ– ಅಂದರೆ, ಮಾರುತಿಗೆ ಹಣ ಪಾವತಿಸಿದ್ದು ಕಪ್ಪುಬಿಳಿಯಲ್ಲೇ– ಯಾವುದೇ ಪ್ರಜ್ಞಾವಂತ ವಹಿವಾಟುದಾರ ಕಪ್ಪು ಹಣವನ್ನು ತನ್ನ ವಹಿವಾಟಿಗೆ ತೊಡಗಿಸಲಾರ, ಯಾಕೆಂದರೆ, ಅದು ಬಹಿರಂಗ ಲೆಕ್ಕಾಚಾರಕ್ಕೆ ಸಿಗುವಂತಿರುತ್ತದೆಯಲ್ಲವೇ? ಏನಿದ್ದರೂ, ನಾನು ಹೇಳಲು ಇಚ್ಛಿಸುವುದಿಷ್ಟೇ, ಅವೆಲ್ಲ ವಿತ್ತ ಸಚಿವಾಲಯಕ್ಕೆ ಸಂಬಂಧಿಸಿದ ವಿಷಯಗಳು ಮತ್ತು ತೆರಿಗೆ ಇಲಾಖೆಗೆ ಸಂಬಂಧಿಸಿದ್ದು. ಯಾವುದೇ ಅಕ್ರಮಗಳು ಕಂಡುಬಂದರೂ, ಅದಕ್ಕೆ ನಾನು ಬಾಧ್ಯನಾಗಲಾರೆ. ಅಂತೆಯೇ ನನ್ನ ಮಾನ್ಯ ಮಿತ್ರ ಹೊರಿಸುವ ಆರೋಪಗಳನ್ನು ನಾನು ಸ್ವೀಕರಿಸಲು ಸಿದ್ಧನಾಗಿರುವುದಿಲ್ಲ.

**ಶ್ರೀ ಜ್ಯೋತಿರ್ಮಯಿ ಬಸು:** ಅಂದರೆ, ಇನ್ನೂ ಹೆಚ್ಚಿನ ಕಾಳಸಂತೆ....

**ಸಭಾಧ್ಯಕ್ಷರು:** ಅವರು ನಿಮಗೆ ಉತ್ತರಿಸಿದ್ದಾರೆ. ನೀವು ಅದನ್ನು ಸಮ್ಮತಿಸದೆ ಇರಬಹುದು. ಅದು ಬೇರೆ ಪ್ರಶ್ನೆ.

**ಶ್ರೀ ಟಿ.ಎ.ಪೈ:** ಇನ್ನೊಂದು ಕಾರಿನ ಬಗ್ಗೆ ಹೇಳುವುದಾದರೆ, ಅದಕ್ಕೆ ಕೊಂಚ ಬಂಡವಾಳ ಹಾಕಬೇಕಾಗಿದೆ. ಪ್ರೀಮಿಯರ್ ಪ್ರೆಸಿಡೆಂಟ್ ಕಾರನ್ನು 14,000 ದಿಂದ 18,000 ಕಾರುಗಳ ಉತ್ಪಾದನೆಗೆ ಅನುವುಮಾಡಿಕೊಡಲಾಗಿದೆ. ಇದು ಮಾರುಕಟ್ಟೆಯ ಒತ್ತಡವನ್ನು ತಗ್ಗಿಸುವುದಲ್ಲದೆ, ಇತರ ರಫ್ತು ಮಾರುಕಟ್ಟೆಯನ್ನು ವಿಸ್ತರಿಸಲು ಸಾಧ್ಯವಾಗುವಂತೆ ಮಾಡುತ್ತದೆ. ಬೇರೆ ದೇಶದ ಗಿರಾಕಿಗಳೇನಾದರೂ ದೊರೆತಲ್ಲಿ ಈ ಕಾರು, ಇಟಲಿಯ ಫಿಯೆಟ್ ಮತ್ತು ಜಪಾನಿನ ಟೊಯೋಟೋ ಜತೆಗೆ ಸ್ಪರ್ಧಿಸಲು ಅರ್ಹತೆ ಹೊಂದಿದೆ. ಹೊರಗಿನ ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸುವ ಅವಕಾಶ ಸಿಕ್ಕಿದರೆ ಪ್ರಾಯಶಃ ಇವರು ನಮ್ಮ ಉತ್ಪಾದನೆಯ ವಿರುದ್ಧ ಆರೋಪಗಳನ್ನು ಮಾಡುತ್ತಾ ಹೋಗಲಾರರು ಎಂದು ನಾನು ಭಾವಿಸಿದ್ದೇನೆ.

*

## ಅನುದಾನದ ಬೇಡಿಕೆಯ ಮೇಲಿನ ಚರ್ಚೆ

## ಅಭಿವೃದ್ಧಿಯ ಹೊಸ್ತಿಲಲ್ಲಿ ಕೈಗಾರಿಕಾ ಭಾರತ

### 7 ಮೇ, 1976

**ಶ್ರೀ ಟಿ.ಎ.ಪೈ** (ಸಚಿವರು, ಕೈಗಾರಿಕೆ ಮತ್ತು ನಾಗರಿಕ ಸರಬರಾಜು):

ಮಾನ್ಯ ಉಪಾಧ್ಯಕ್ಷ ಮಹೋದಯರೇ, ಕಳೆದ 6ತಾಸು ಕಾಲ ನಮ್ಮ ಇಲಾಖೆಯ ಮೇಲಿನ ಅನುದಾನಗಳ ಬೇಡಿಕೆಯ ಕುರಿತಾದ ಚರ್ಚೆಯನ್ನು ಕೇಳಿರುತ್ತೇವೆ. ಒಂದಿಷ್ಟು ಹೂಗೊಂಚಲು, ಒಂದಿಷ್ಟು ಹೀಗಳೆಯುವಿಕೆಯೂ ಇಲಾಖೆಗೆ ಸಂದಿವೆ. ಇದರಿಂದ ನಾನೆಂದೂ ವಿಚಲಿತನಾಗಿಲ್ಲ.

### ಭಾರತದ ಶಕ್ತಿಯನ್ನು ಜಗತ್ತಿಗೆ ಸಾರಬೇಕು

ಭಾರತ ತನ್ನ ಶಕ್ತಿಯನ್ನು ಮತ್ತೆ ಪುನರ್ ಸ್ಥಾಪಿಸಬೇಕೆಂದು ನಾನು ಹೇಳುತ್ತ ಬಂದಿದ್ದೇನೆ. ಇಂದು ನಾವು ಜಗತ್ತಿನಲ್ಲೇ ಅತ್ಯಂತ ಶಕ್ತಿಯುತ ಕೈಗಾರಿಕಾ ರಾಷ್ಟ್ರವಾಗಿ ಹೊರಹೊಮ್ಮುತ್ತಿದ್ದೇವೆ. ಕೆಲವೇ ಕೆಲವು ಅನಿಯಮಿತ ವಿಷಯಗಳು ಈ ಸನ್ನಿವೇಶದಲ್ಲಿ ಗಣನೆಗೆ ಬರುವಂತಿಲ್ಲ. ನಾವು ಏನನ್ನು ಸಾಧಿಸಿದ್ದೇವೋ ಆ ಕುರಿತು ನಮಗೆ ಹೆಮ್ಮೆ ಇದೆ. ನಾವೇನು ಸಾಧಿಸಲು ಬಾಕಿ ಇದೆಯೋ ಅದನ್ನು ಪರಿಗಣಿಸಿದಾಗ ನಮ್ಮ ಸಾಧನೆ ಸಾಕಾಗಿಲ್ಲವೆಂದು ಹೇಳಬಹುದು. ಕಳೆದ 27ವರ್ಷಗಳ ಅವಧಿಯಲ್ಲಿ ಈ ದಿಶೆಯಲ್ಲಿ ನಾವು ಏನನ್ನೂ ಸಾಧಿಸಿಲ್ಲ ಅಂದರೆ ಅದು ನಿಜವನ್ನು ಮರೆಮಾಚಿದಂತಾಗುತ್ತದೆ. ಭಾರತೀಯ ಮನೋಧರ್ಮವೇ ಹಾಗೆ– ನಾವು ಇತರ ದೇಶಗಳ ಸಾಧನೆಯನ್ನು ಕೊಂಡಾಡುತ್ತೇವೆ ಮತ್ತು ಅದನ್ನು ಪ್ರೀತಿಸುತ್ತೇವೆ. ಚೈನಾ ಸಾಧಿಸಿದ ಪ್ರಗತಿಯನ್ನು ನಿನ್ನೆ ಓರ್ವ ಮಾನ್ಯ ಸದಸ್ಯರು ಉಲ್ಲೇಖಿಸಿದರು.

**ಶ್ರೀ ಕೃಷ್ಣ ಚಂದ್ರ ಹಲ್ದರ್:** ಅದು ಕೇವಲ ಹೋಲಿಕೆಗಾಗಿ ಹೇಳಿದ್ದಷ್ಟೇ. ಬೇರೆ ಯಾವುದೇ ದೇಶಕ್ಕಿಂತ ನಾವು ನಮ್ಮ ದೇಶವನ್ನು ಮತ್ತು ನಮ್ಮ ಜನರನ್ನು ಹೆಚ್ಚಾಗಿ ಪ್ರೀತಿಸುತ್ತೇವೆ.

**ಶ್ರೀ ಟಿ.ಎ.ಪೈ:** ನಾವು ಏನನ್ನು ಸಾಧಿಸಿದ್ದೇವೋ, ಅದನ್ನು ಇತರ ದೇಶಗಳ ಜತೆಗೆ ಹೋಲಿಸುವಂಥದ್ದು – ಒಂದು. ನಮ್ಮ ಅನೇಕ ಗೌ.ಸದಸ್ಯರು

ಏನು ತಿಳಿದುಕೊಂಡಿದ್ದಾರೆ ಅಂದರೆ, ಚೈನಾ ತನ್ನ ಸ್ವಂತ ಕೈಗಾರಿಕೆ ಮತ್ತು ತಾಂತ್ರಿಕತೆಯಿಂದ ಅಭಿವೃದ್ಧಿ ಸಾಧಿಸಿದೆ ಅಂತ. ಇದೀಗ ಕೆಲವೇ ದಿನಗಳ ಹಿಂದೆ ನಾನು ಫ್ರಾನ್ಸ್ ಮತ್ತು ಜರ್ಮನಿಯ ಕಾರ್ಖಾನೆಗಳಿಗೆ ಭೇಟಿ ಕೊಟ್ಟಾಗ ಬೆಳಕಿಗೆ ಬಂದದ್ದು ಏನೂಂತಂದ್ರೆ, ಈ ಎರಡೂ ದೇಶಗಳು ಚೀನಾಕ್ಕೋಸ್ಕರವೇ ವಿಶೇಷವಾಗಿ ಕೆಲವು ತಾಂತ್ರಿಕ ಉಪಕರಣಗಳನ್ನು ತಯಾರಿಸಿ ರಫ್ತು ಮಾಡ್ತಾ ಇದೆ ಅಂತ. ಅಂದರೆ, ಯಾವುದೇ ರಾಷ್ಟ್ರ ಜಗತ್ತಿನ ಮಿಕ್ಕ ರಾಷ್ಟ್ರಗಳಿಂದ ಸ್ವತಂತ್ರವಾಗಿರೋದಕ್ಕೆ ಸಾಧ್ಯವಿಲ್ಲ ಅನ್ನುವಂಥದ್ದು. ನಾವು ಎಲ್ಲಿಯವರೆಗೆ ಪರರಾಷ್ಟ್ರಗಳ ಮಮತೆಯಲ್ಲಿ ಸಿಲುಕಿಕೊಂಡಿರುತ್ತೇವೋ ಮತ್ತು ಅಂತಹ ರಾಷ್ಟ್ರಗಳು, ಅದು ಅಮೆರಿಕಾವಾಗಿರಲಿ, ರಷ್ಯಾ ಇರಲಿ ಅಥವಾ ಚೈನಾ ಇರಲಿ, ಅಲ್ಲಿಯವರೆಗೆ ನಾವು ನಮ್ಮ ಕುಂದುಕೊರತೆಗಳನ್ನು ನೀಗಿಸಲು ಸಾಧ್ಯವಾಗುವುದಿಲ್ಲ. ಭೂಮಿಯಲ್ಲಿ ಯಾವುದಾದರು ಸ್ವರ್ಗದಂಥ ರಾಷ್ಟ್ರವನ್ನು ತೋರಿಸಲು ಈ ಸದನಕ್ಕೆ ಸಾಧ್ಯವೇ? ಯಾವುದೇ ರಾಷ್ಟ್ರವನ್ನು ತೆಗೆದುಕೊಳ್ಳಿ ಅದಕ್ಕೆ ಯಾವುದೇ ಸಮಸ್ಯೆಯನ್ನು ನಿರ್ಮೂಲನ ಮಾಡುವುದಕ್ಕೆ ಸಾಧ್ಯವಾಗಿಲ್ಲ. ಆದ್ದರಿಂದ ಜಗತ್ತಿನ ಎದುರು ನಾವು ತೋರ್ಪಡಿಸುವ ಚಿತ್ರ ಹೇಗಿರಬೇಕೆಂದರೆ, ನಾವು ಇಷ್ಟು ಪ್ರಗತಿ ಸಾಧಿಸಿದ್ದೇವೆ, ನಮ್ಮ ಶಕ್ತಿ ಇಷ್ಟಿದೆ, ನಾವು ಬೆಳವಣಿಗೆಯ ಹಾದಿಯಲ್ಲಿದ್ದೇವೆ ಅಂತ.

## ಪ್ರತಿಭಟನೆಗಳೇ ನಮಗೆ ಮಾರಕ

ನಾನು ನನ್ನ ಜಿಲ್ಲೆಯ ಅಸೆಂಬ್ಲಿಯ ಸದಸ್ಯನಾಗಿದ್ದಾಗ, ನನಗೆ ನೆನಪಿದೆ, ನಮ್ಮ ಜಿಲ್ಲೆಯಲ್ಲಿ ಅನೇಕ ನದಿಗಳು, ಅವುಗಳಿಗೆ ಸೇತುವೆಗಳ ನಿರ್ಮಾಣ ಆಗಬೇಕಿತ್ತು. ಎಲ್ಲ ಸೇತುವೆಗಳನ್ನು ಒಮ್ಮೆಲೇ ಕಟ್ಟಲು ಸಾಧ್ಯವಿಲ್ಲ ತಾನೇ? ಒಂದು ಸೇತುವೆ ನಿರ್ಮಾಣವಾದೊಡನೆ ಅದರ ಉದ್ಘಾಟನೆ ನಡೆಯಿತು. ಆಗ ಮುಖ್ಯ ಇಂಜಿನಿಯರ್ ದೊಡ್ಡ ಭಾಷಣ ಮಾಡಿದ್ರು. ತಕ್ಷಣವೇ ಅಲ್ಲೊಂದು ಪ್ರತಿಭಟನೆ ನಡೆಯಿತು. ಜನರು ಇನ್ನೊಂದು ನದಿಯನ್ನು ತೋರಿಸಿ, ಅದಕ್ಕೆ ಯಾಕೆ ಸೇತುವೆಯನ್ನು ಕಟ್ಟಿಲ್ಲ ಅಂತ ಪ್ರಶ್ನಿಸತೊಡಗಿದರು. ನಾನು ಅಂದುಕೊಂಡೆ, ಈ ದೇಶದಲ್ಲಿ ನಾವೇನು ಸಾಧಿಸಿದ್ದೇವೋ ಅದರಿಂದ ಯಾವತ್ತೂ ನಮಗೆ ತೃಪ್ತಿ ಎಂಬುದೆ ಇಲ್ಲ ಅಂತ.

ಇಂದು ನಾವು ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಸಾಲಿನಲ್ಲಿದ್ದೇವೆ. ಕೆಲವೊಮ್ಮೆ ನಾವು ಅಭಿವೃದ್ಧಿಶೀಲ ರಾಷ್ಟ್ರವೆಂದು ಅಂದುಕೊಂಡಿದ್ದೂ ಉಂಟು. ನಾವು ನಮ್ಮ ವಿಸ್ತಾರವಾದ ದೇಶವನ್ನು ಅಭಿವೃದ್ಧಿಹೊಂದಿದೆ ಅಂತ ಹೇಳಿದಾಗ ಈ ಸಮಸ್ಯೆ ತೋರುವಂಥದ್ದು. ನಮ್ಮ ದೇಶದ ಒಂದು ರಾಜ್ಯದಷ್ಟು ವಿಸ್ತಾರ ಹೊಂದಿರುವ ಯುರೋಪಿನ ಒಂದು ದೇಶವನ್ನು ಇದಕ್ಕೆ ಹೋಲಿಸಲು ಸಾಧ್ಯವೇ? ನಾವು ತುಂಬಾ ಸಾಧಿಸುವುದಿದೆ ಎಂದು ನನಗೆ ತಿಳಿದಿದೆ. 27 ವರ್ಷಕ್ಕೆ ಹಿಂದಿಗೂ ಇಂದಿಗೂ ಇರುವ ವ್ಯತ್ಯಾಸವೆಂದರೆ, ನಮ್ಮದೇ ಶಕ್ತಿಯಿಂದ ಮಿಕ್ಕುಳಿದ ಭಾಗಗಳ ಪ್ರಗತಿಯನ್ನು ನಾವು ಸಾಧಿಸಲು ಶಕ್ಯರಿದ್ದೇವೆ ಅನ್ನುವಂಥದ್ದು. ನಮ್ಮಲ್ಲಿ ಶ್ರದ್ಧೆಯಿದ್ದಲ್ಲಿ ನಾವು ಪ್ರಗತಿ ಸಾಧಿಸುತ್ತೇವೆ. ಕೈಗಾರಿಕಾ ವಲಯದಲ್ಲಿ ನಾವೇನಾದರೂ ಪ್ರಗತಿ ಸಾಧಿಸಿದ್ದರೆ ಅದು ನಮ್ಮೊಳಗಿನ ಘರ್ಷಣೆಯನ್ನು ನಿವಾರಿಸಿರುವುದರಿಂದ ಎಂದು ನಾನು ಭಾವಿಸುತ್ತೇನೆ. ಯಾವತ್ತು ನಾವು ಭಾರತೀಯರು ಭಾರತೀಯ ಪರಿಹಾರದ ನೀತಿಯನ್ನು ಪಾಲಿಸುತ್ತೇವೋ ಅಂದಿಗೆ ನಮ್ಮೆಲ್ಲ ಸಮಸ್ಯೆಗಳು ಪರಿಹಾರವಾಗುತ್ತದೆ.

ಯಾವಾಗ ಉತ್ಪನ್ನಗಳ ಕೊರತೆ ಇರುವುದಿಲ್ಲವೋ, ಆವಾಗ ಬೇಡಿಕೆ ಮೊದಲಿನಂತೆ ಇರುವುದಿಲ್ಲ. ಇದನ್ನು ಇಂದಿನ ಕೈಗಾರಿಕೋದ್ಯಮಿಗಳು ಕಂಡುಕೊಂಡಿದ್ದಾರೆ. ಹಿಂದೆ ಬೇಡಿಕೆಗಳು ಕೃತ್ರಿಮವಾಗಿದ್ದವು. ಜನತೆಗೆ ಉತ್ಪನ್ನಗಳ ಕೊರತೆಯನ್ನು ತೋರಿಸಿದಾಗ, ಅವರು 6 ತಿಂಗಳಿಗೆ ಬೇಕಾಗುವಷ್ಟು ಸಾಮಗ್ರಿಗಳನ್ನು ಸಂಗ್ರಹಿಸಿ ಇಟ್ಟುಕೊಳ್ಳುತ್ತಿದ್ದರು. ಸಾಕಷ್ಟು ಉತ್ಪನ್ನಗಳು ದೊರೆಯುತ್ತದೆ ಎಂದಾಗ ಅವುಗಳ ಅಗತ್ಯವಿದ್ದಾಗ್ಯೂ, 'ಇರಲಿ ನಾಳೆ ಕೊಂಡರಾಯ್ತು' ಅಂತ ಹೇಳುವುದು ವಾಡಿಕೆ. ಇದು ಆರ್ಥಿಕ ಹಿನ್ನೆಡೆಯಲ್ಲ.

## ಕೃಷಿಯೇ ನಮ್ಮ ಬೆನ್ನೆಲುಬು

ನಾನು ಕೈಗಾರಿಕಾ ಮಂತ್ರಿಯಾಗಿದ್ದರೂ ಹೇಳ್ತೇನೆ ನಮ್ಮ ದೇಶದ ಪ್ರಮುಖ ಉದ್ದಿಮೆ ಅಂದರೆ ಅದು ಕೃಷಿಯೇ– ಯಾಕೆಂದರೆ, ಪ್ರಗತಿಗೆ ಅದು ಸಾಧಕ–ಸಂಪತ್ತಿನ ದೃಷ್ಟಿಯಿಂದಲೂ, ಔದ್ಯೋಗಿಕ ದೃಷ್ಟಿಯಿಂದಲೂ. ನಮ್ಮನ್ನು ಮತ್ತು ಅಮೆರಿಕಾವನ್ನು ಹೋಲಿಕೆಗೆ ಒಡ್ಡುವಂಥ ಬಹಳ ಮಂದಿಯನ್ನು ನಾನು ನೋಡಿದ್ದೇನೆ. ಅಮೆರಿಕೆಯ ಒಟ್ಟು ಜನಸಂಖ್ಯೆಯ 9% ಮಾತ್ರ ಕೃಷಿಯಲ್ಲಿ ತೊಡಗಿದ್ರೆ, ಭಾರತದಲ್ಲಿ 70% ಜನರು ಕೃಷಿಯನ್ನು ಅವಲಂಬಿಸಿದ್ದಾರೆ ಅಂತ

ಹೇಳುತ್ತಾರೆ. ಅಮೆರಿಕಾದ ಒಟ್ಟು ಉದ್ಯಮದ 40%ದಷ್ಟು ಉದ್ಯಮ ಕೃಷಿ ಅವಲಂಬಿತವಾಗಿದೆ ಎಂಬುದನ್ನು ಅವರು ಮರೆತಿದ್ದಾರೆ. ಕೃಷಿ ಅದರಷ್ಟಕ್ಕೇ ಬೆಳವಣಿಗೆ ಕಾಣಲು ಸಾಧ್ಯವಿಲ್ಲ. ಕೃಷಿ ಮತ್ತು ಕೈಗಾರಿಕೆ ಜತೆ ಜತೆಯಲ್ಲಿ ಹೋದಾಗ ಮಾತ್ರ ಪ್ರಗತಿ ಸಾಧ್ಯ.

ತಾಂತ್ರಿಕ ಉದ್ದಿಮೆಗಳು ಮಾತ್ರ ನಮ್ಮ ದೇಶದ ಮುಂಚೂಣಿ ಯಲ್ಲಿರಬೇಕೆಂದು ಅನೇಕರು ಬಗೆದರೆ, ನಾನು ಹೇಳುವುದು ಏನೆಂದರೆ, ಅದರ ಜತೆಗೆ ಅಷ್ಟೇ ಪ್ರಾಧಾನ್ಯತೆಯನ್ನು ಕೃಷಿ ಅವಲಂಬಿತ ಉದ್ದಿಮೆಗಳಿಗೆ ಕೊಡಬೇಕಾಗಿದೆ ಅಂತ. ಭಾರೀ ಉದ್ದಿಮೆಗಳು ನಮಗೆ ಯಾಕೆ ಬೇಕೂಂತ ನಿನ್ನೆ ಒಬ್ಬ ಮಾನ್ಯ ಸದಸ್ಯರು ಪ್ರಶ್ನೆ ಹಾಕಿದ್ರು. ಎಂದಾದರೂ ನಾವು ಜಗತ್ತಿನಿಂದ ಪ್ರತ್ಯೇಕವಾಗಿ ಒಂಟಿಯಾಗಿ ಉಳಿಯುವ ಪ್ರಸಂಗ ಬಂದಾಗ ನಮ್ಮ ರಕ್ಷಣೆಗೆ ಬರುವಂಥದ್ದು ಭಾರೀ ಉದ್ದಿಮೆಗಳೇ. ಅವರ ಅಂಬೋಣ ಏನಂತಂದ್ರೆ, ನಮ್ಮೆಲ್ಲ ಕೈಗಾರಿಕೆಗಳು ಕಾರ್ಮಿಕ ಸಹಕಾರೀ ಕೈಗಾರಿಕೆಗಳಾಗಬೇಕಂತ. ಕೋಕಾ ಕೋಲಾ ಫ್ಯಾಕ್ಟರಿಯನ್ನು ನಾವು ನಡೆಸುತ್ತೇವೆ- ಅವರು ಹೇಳುವಂತೆ, ಕಾರ್ಮಿಕರ ಸಹಾಯದಿಂದ ಕೊಕಾಕೋಲಾವನ್ನು ತುಂಬಿಸಿದರೆ ಹ್ಯಾಗೆ? ಅಂತ. ಅದಕ್ಕೆ ಯಂತ್ರದ ಅವಶ್ಯಕತೆಯಿಲ್ಲ ಅನ್ನುವಂಥದ್ದು. ಸರಿ ಎಲ್ಲಾದರೂ ಇದರ ಪ್ರಯೋಗ ಶುರುವಾಗಲಿ. ಇದು ಹೆಚ್ಚು ಉದ್ಯೋಗವನ್ನು ಕಲ್ಪಿಸಿಕೊಡಬಲ್ಲುದು. ನಮ್ಮ ತೊಂದರೆ ಅಂದರೆ, ನಾವು ಅನೇಕ ಸಲ ದ್ವಿಮುಖ ನೀತಿಯ ವ್ಯಕ್ತಿತ್ವವನ್ನು ಹೊಂದಿರುವಂಥದ್ದು. ನಮಗೆ ಸಮಸ್ಯೆ ಏನೆಂಬುದಂಥ ಗೊತ್ತು, ಆದರೆ ಅದನ್ನು ಎದುರಿಸುವುದಕ್ಕೆ ಮಾತ್ರ ತಯಾರಾಗಿರುವುದಿಲ್ಲ. ಇದು ನಮ್ಮ ಧೋರಣೆಯೂ ಹೌದು, ದುರಂತವೂ ಹೌದು. ಆದ್ದರಿಂದ ಅದಕ್ಕೆ ನಾನು ಹೆಚ್ಚು ಪ್ರಾಮುಖ್ಯತೆಯನ್ನು ಕೊಡುವುದಿಲ್ಲ.

## ಗಾಂಧೀಜಿ ಎಂದಿಗೂ ನಮಗೆ ಪ್ರಸ್ತುತ

ಗಾಂಧೀಜಿ ಇಂದಿನ ನಮ್ಮ ದೇಶಕ್ಕೆ ಎಷ್ಟು ಸಂಗತವೆಂಬ ಪ್ರಶ್ನೆ ಬಂತು- ಈ ವಿಷಯದಲ್ಲಿ, ಸಂಗತವೆಂದೇ ನಾನು ಸಮ್ಮತಿಸುತ್ತೇನೆ. ಕೈಗಾರಿಕಾ ಮಂತ್ರಿಯಾಗಿ ನಾನು ಹೇಳುವಂಥದ್ದು ಇದು- ಗಾಂಧೀಜಿ ಇಂದು ನಮಗೆ ಅತ್ಯಂತ ಸಂಗತವಾಗಿದ್ದಾರೆ ಅಂತ. ಅವರು ಹೇಳಿದ್ದು ನಮ್ಮ ಭಾರೀ ಉದ್ದಿಮೆಗಳಿಗೂ ಅನ್ವಯಿಸುವಂಥದ್ದೇ. ಅಂದರೆ ಮಿಲಿಯಾಂತರ ಜನರಿಗೆ ಉದ್ಯೋಗ ಕಲ್ಪಿಸುವ

ದಿಶೆಯಲ್ಲಿ ನಾವಿರುವಾಗ, ಅಂತಹ ಯೋಚನೆ ಆಗಬೇಕಾದ್ದು ಅನಿವಾರ್ಯವೇ, ಚೈನಾದಲ್ಲಿ ಅಳವಡಿಸಿದ ಹಾಗೆ. ಹಾಗಂತ ಹೇಳಿದಾಗ, ಎಲ್ಲಾ ನಿರುದ್ಯೋಗಿಗಳಿಗೂ ಉಕ್ಕು ಸ್ಥಾವರದಲ್ಲೋ, ಕಲ್ಲಿದ್ದಲು ಗಣಿಯಲ್ಲೋ, ಭಾರೀ ಯಂತ್ರದ ತಯಾರಿಕಾ ಘಟಕದಲ್ಲೋ ಉದ್ಯೋಗ ಕಲ್ಪಿಸಲು ಬರುವುದಿಲ್ಲ. ಎಷ್ಟು ಸಂಪತ್ತು ಉತ್ಪಾದನೆ ಸಾಧ್ಯವೋ ಅಷ್ಟನ್ನು ಉತ್ಪಾದಿಸುವ ನಿಟ್ಟಿನಲ್ಲಿ ಅವರಿಗೆ ಅವಕಾಶ ಕಲ್ಪಿಸಿಕೊಡುವತ್ತ ನಮ್ಮ ಶ್ರಮವಿರಬೇಕು.

***

## ರಾಷ್ಟ್ರ ನಿರ್ಮಾಣದಲ್ಲಿ
## ಯುವ ಶಕ್ತಿಯ ಬಳಕೆ

**5ನೇ ಆಗಸ್ಟ್, 1977**

**(ಲೋಕಸಭೆಯಲ್ಲಿ, "ರಾಷ್ಟ್ರ ನಿರ್ಮಾಣದಲ್ಲಿ ಯುವ ಶಕ್ತಿಯ ಬಳಕೆ" ಎಂಬ ವಿಷಯದ ಮೇಲಿನ ಚರ್ಚೆಯಲ್ಲಿ ಭಾಗವಹಿಸಿ ನೀಡಿದ ಭಾಷಣ)**

**ಶ್ರೀ ಟಿ.ಎ.ಪೈ:** ಕಳೆದ ಹತ್ತಾರು ವರ್ಷಗಳಿಂದ ಪ್ರತಿಯೊಂದು ವೇದಿಕೆಯ ಮೇಲೂ ನಾನು ರಾಷ್ಟ್ರ ಸೇವೆಗೆ ಖಡ್ಡಾಯ ನೀತಿಯನ್ನು ಅನುಸರಿಸಬೇಕೆಂದು ಪ್ರತಿಪಾದಿಸುತ್ತ ಬಂದಿದ್ದೇನೆ. ಮಿಲಿಯಾಂತರ ಸಮಸ್ಯೆಗಳು ಒಂದೆಡೆಯಾದರೆ, ಮಿಲಿಯಾಂತರ ಜನರು ಇನ್ನೊಂದೆಡೆ ನಮಗಿದ್ದಾರೆ. ದುರ್ದೈವದಿಂದ ನಮ್ಮ ಯೊಜನೆಗಳು ಜನರನ್ನೂ ಸಮಸ್ಯೆಗಳನ್ನೂ ಒಂದುಗೂಡಿಸುತ್ತಲೂ ಇಲ್ಲ ಸಮಸ್ಯೆಗಳ ನಿವಾರಣೆಯಲ್ಲಿ ಸಫಲವಾಗುತ್ತಲೂ ಇಲ್ಲ. ಮಾನವ ಸಂಪನ್ಮೂಲದಲ್ಲಿ ಭಾರತ ಬಹಳ ಶ್ರೀಮಂತ ರಾಷ್ಟ್ರವೆಂದು ನಾವು ಹೇಳುತ್ತೇವೆ. ಅಮೆರಿಕಾ ಮತ್ತು ರಷ್ಯಾ ದೇಶಗಳನ್ನು ಬಿಟ್ಟರೆ ನಮ್ಮ ದೇಶ, ತಂತ್ರಜ್ಞರು ಮತ್ತು ವಿಜ್ಞಾನಿಗಳ ಸಂಖ್ಯೆಯಲ್ಲಿ ಮೂರನೇ ಸ್ಥಾನ ಪಡೆಯುತ್ತದೆ. ಆದರೆ ಅವರೆಲ್ಲ ಉದ್ಯೋಗವಿಲ್ಲದೆ ಇದ್ದಾರೆ.

### ಡಿಗ್ರಿ ಬೇಡ, ಉದ್ಯೋಗ ಬೇಕು

ನಮ್ಮಲ್ಲಿ ಮಾನವ ಸಂಪನ್ಮೂಲವಿದೆ, ಮಾನವ ಸಂಪತ್ತು ಇದೆ. ಆದರೆ ಯಾಕೋ ನಮ್ಮ ಪುರಾತನ ಜಮೀನ್ದಾರೀ ಪದ್ಧತಿಯ ಕಾರಣದಿಂದಾಗಿ ಆರ್ಥಿಕ

ಬೆಂಬಲವಿಲ್ಲದೆ ಈ ಸಂಪನ್ಮೂಲಗಳ ಬಳಕೆ ಸಾಧ್ಯವಾಗುತ್ತಿಲ್ಲ. ನಾವು ಸ್ವಯಂ ಸೇವೆಯ ಬಗೆಗೆ ಮಾತನಾಡುತ್ತೇವೆ. ಭೂಸೇನೆಯ ಬಗ್ಗೆಯೂ ಮಾತನಾಡುತ್ತೇವೆ. ಇವೆಲ್ಲದರ ಅರ್ಥವೇನು? ಬಡ ಮಕ್ಕಳು ಬಡತನದಲ್ಲಿರುವ ಮಕ್ಕಳು, ಸ್ವಯಂ ಸೇವೆಗೆ ಅರ್ಪಿಸಿಕೊಳ್ಳಬೇಕಾಗಿದೆ. ಹೆಚ್ಚು ವಶೀಲಿ ಇರುವ ಜನರು, ಅಧಿಕಾರ ಇರುವವರು, ಪ್ರಮುಖ ಸ್ಥಾನಮಾನಗಳನ್ನು ಗಿಟ್ಟಿಸಿಕೊಳ್ಳುತ್ತಾರೆ. ಹಾಗಾಗಿ ಉಳ್ಳವರು ಮತ್ತು ಇಲ್ಲದವರ ನಡುವಿನ ವ್ಯತ್ಯಾಸ ಹೆಚ್ಚಾಗುತ್ತಾ ಹೋಗುತ್ತಿದೆ. ಸರಕಾರದ ಖರ್ಚಿನಲ್ಲಿ ವಿದ್ಯಾಭ್ಯಾಸ ಮಾಡಿರುವಂಥವರು ಯಾಕೆ ದೇಶಕ್ಕೆ ತಮ್ಮ ಕೊಡುಗೆಯನ್ನು ನೀಡಬಾರದು ಎನ್ನುವ ಕುರಿತು ನಾನು ಚರ್ಚಿಸುತ್ತಾ ಬಂದಿದ್ದೇನೆ. ಯಾವುದೇ ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಪಾಲ್ಗೊಂಡಾಗ ನನಗೆ ವಿದ್ಯಾರ್ಥಿಗಳು ಹೇಳುವುದೊಂದೇ – ನಮಗೆ ಡಿಗ್ರಿ ಬೇಡ, ಉದ್ಯೋಗ ಬೇಕು ಅಂತ. ಆದರೂ ಹೆಚ್ಚು ಹೆಚ್ಚು ಕಾಲೇಜುಗಳು ಗ್ರಾಮೀಣ ಪ್ರದೇಶಗಳಲ್ಲಿ ಬೇಕಾಗಿವೆ ಎಂದು ನಾವು ಆಗ್ರಹಪಡಿಸುತ್ತಿದ್ದೇವೆ.

## ಸ್ವಂತ ಯೋಜನೆ!

ಕಳೆದ ವರ್ಷ ಕೇರಳದಲ್ಲಿ ಒಂದು ಸಮಾರಂಭಕ್ಕೆ ನನ್ನನ್ನು ಆಹ್ವಾನಿಸಿದ್ದರು. ಒಬ್ಬ ಪದವೀಧರ ಯುವಕ ಒಂದು ಶಾಲೆಯಲ್ಲಿನ ಪೇದೆಯ ಕೆಲಸಕ್ಕೆ ಅರ್ಜಿ ಹಾಕಿದ್ದ. ಶಾಲೆಯ ಆಡಳಿತ ಅವನಲ್ಲಿ 500ರೂಪಾಯಿಯನ್ನು ನೀಡಿದರೆ ಕೆಲಸ ಕೊಡುವುದಕ್ಕೆ ಒಪ್ಪಿದರು. 19 ಮಂದಿ ಅರ್ಜಿದಾರರು 500/– ರೂಪೈ ತೆತ್ತು ಆ ಕೆಲಸಕ್ಕೆ ಸೇರಲು ಬಯಸಿದ್ದರು. ಬೇರೆಯವರಿಗೆ ಹಣವನ್ನು ತೆತ್ತು ಕೆಲಸಕ್ಕೆ ಸೇರುವ ಬದಲು ಈ ಹುಡುಗರೆಲ್ಲ ಸೇರಿ ಒಂದು ಯೋಜನೆ ರೂಪಿಸಿದರು. ಅವರೆಲ್ಲ ಒಂದು ಬ್ಯಾಂಕ್‌ಗೆ ಹೋಗಿ ಪ್ರತಿಯೊಬ್ಬ 5000/– ಮೊತ್ತವನ್ನು ಸಾಲ ಪಡೆದು ಒಂದು ಲಕ್ಷ ಸಂಗ್ರಹಿಸಿದರು. ಕೇರಳ ಸರಕಾರದ ಅಭಿವೃದ್ಧಿ ನಿಗಮ ಕೂಡಾ ಅವರಿಗೆ 3ಲಕ್ಷ ರೂಪಾಯಿ ಒದಗಿಸಿತು. ಅವರೊಂದು ಬಟ್ಟೆಯ ಗಿರಣಿಯನ್ನು ಸ್ಥಾಪಿಸಿದರು. ಅದನ್ನು ಉದ್ಘಾಟಿಸಲು ನನ್ನನ್ನು ಆಹ್ವಾನಿಸಿದ್ದರು. ಅದೊಂದು ಅನನ್ಯ ಅನುಭವವೆಂದು ಅವರೆಲ್ಲ ಹೇಳಿದರು. ಕೇರಳದ ಒಂದು ದುರ್ದೈವವೆಂದರೆ ರಾಜ್ಯದ ಒಟ್ಟು ಸಂಪನ್ಮೂಲದಲ್ಲಿ 40% ಶಿಕ್ಷಣಕ್ಕೂ ಉಳಿದದ್ದು ಆಡಳಿತಕ್ಕೂ ಉಪಯೋಗಿಸುವಂಥದ್ದು.

ಇಂದು ದೇಶದ ಮುಂದಿರುವ ಪ್ರಶ್ನೆ ಅಂದರೆ, ಶಿಕ್ಷಣಕ್ಕಾಗಿ ಹಣವನ್ನೆಲ್ಲ ವ್ಯಯಿಸಿ, ಅದೇ ಸಂಪನ್ಮೂಲ ಉದ್ಯೋಗ ಸೃಷ್ಟಿಸಲು ಆಗದೆ ಹೋದರೆ, ಏನು ಪ್ರಯೋಜನವಾಯ್ತು ಅಂತ?– ಮುಖ್ಯವಾದದ್ದು ಶಿಕ್ಷಣವೋ, ಉದ್ಯೋಗವೋ? ನಮ್ಮ ಸಂಪನ್ಮೂಲಗಳು ಸೀಮಿತವಾಗಿದ್ದಲ್ಲಿ ಅದನ್ನು ಪುನರ್ವಿಂಗಡಿಸಿ ಹೆಚ್ಚು ಹೆಚ್ಚು ಉದ್ಯೋಗಾವಕಾಶ ನಿರ್ಮಿಸಲು ಸಾಧ್ಯವಾದರೆ ಹೇಗೆ? ದೇಶ ಈ ಸಮಸ್ಯೆಗಳನ್ನು ಎದುರಿಸಲೇ ಬೇಕಾಗಿದೆ.

ಇಂದು 11 ಮಿಲಿಯ ನಿರುದ್ಯೋಗಿಗಳು ದೇಶಾದ್ಯಂತ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ತಮ್ಮ ಹೆಸರುಗಳನ್ನು ನೋಂದಾಯಿಸಿದ್ದಾರೆ. ಕಾರ್ಮಿಕ ಮತ್ತು ಉದ್ಯೋಗ ಮಂತ್ರಿಗಳ ಕೆಲಸ ಇಂದು ನಿರುದ್ಯೋಗಿಗಳ ಹೆಸರುಗಳನ್ನು ದಾಖಲಿಸುವುದೂ, ಉದ್ಯೋಗ ವಿನಿಮಯ ಕೇಂದ್ರಗಳನ್ನು ಸ್ಥಾಪಿಸುವುದಕ್ಕೂ ಸೀಮಿತವಾಗಿಬಿಟ್ಟಿದೆ.

ಈವೊತ್ತು ನಿರುದ್ಯೋಗಿ ಯುವಕರು ಎಷ್ಟೊಂದು ಹತಾಶರಾಗಿದ್ದಾರೆ ಅಂದರೆ, ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ತಮ್ಮ ಹೆಸರನ್ನು ನೋಂದಾಯಿಸುವುದಕ್ಕೂ ಹಿಂದೇಟು ಹಾಕುತ್ತಿದ್ದಾರೆ. ಯಾಕೆಂದರೆ, ಅದರಿಂದ ಯಾವುದೇ ಪ್ರಯೋಜನವಿಲ್ಲವೆನ್ನುವುದು ಅವರ ಅನಿಸಿಕೆ. ವಿದೇಶಗಳಲ್ಲಿ ಉದ್ಯೋಗ ನೀಡುವ ಏಜನ್ಸಿಗಳು ನಿರುದ್ಯೋಗಿಗಳನ್ನೂ ಉದ್ಯೋಗಪತಿಗಳನ್ನೂ ಒಂದೆಡೆ ಕಲೆತು ವಿಚಾರ ವಿನಿಮಯ ಮಾಡಿಕೊಳ್ಳುವ ಅವಕಾಶವನ್ನು ಕಲ್ಪಿಸಿಕೊಡುತ್ತದೆ.

ನಮ್ಮ ದೇಶದಲ್ಲಿ ಸರಕಾರ ಉದ್ಯೋಗಸ್ಥರ ಪರವಾಗಿದೆಯೇ ಹೊರತು ನಿರುದ್ಯೋಗಿಗಳನ್ನು ಅವಗಣನೆಗೆ ಗುರಿಮಾಡಿದೆ. ನಮ್ಮ ದೇಶದಲ್ಲಿ ಉದ್ಯೋಗ ಹೊಂದಿದವರಿಗಿಂತ ನಿರುದ್ಯೋಗಿಗಳ ಸಂಖ್ಯೆಯೇ ಜಾಸ್ತಿಯಾಗಿದೆ. ಹಾಗಾಗಿ ಇಂದು ನಿರುದ್ಯೋಗಿಗಳ ಕಡೆಗೆ ಗಮನಹರಿಸುವ ಸಮಯ ಬಂದಿದೆ. ಈ ಸಮಸ್ಯೆಯನ್ನು ಬಗೆಹರಿಸಬೇಕಾದರೆ, ನಿರುದ್ಯೋಗ ಮತ್ತು ಉದ್ಯೋಗಗಳನ್ನು ಜತೆಗೆ ಪರಿಗಣಿಸಬೇಕಾಗಿದೆ. ಪ್ರತ್ಯೇಕ ಪ್ರತ್ಯೇಕ ಪರಿಗಣಿಸುವುದರಿಂದ ಏನೂ ಪ್ರಯೋಜನವಿರಲಾರದು. ಮುಂದುವರಿದ ದೇಶಗಳಿಗಿಂತ ನಮ್ಮ ಬೆಲೆಯೇರಿಕೆ, ಆದಾಯ, ಮತ್ತು ದಿನಗೂಲಿಯು ಬಗೆಗೇ ಮಾತಾಡುತ್ತೇವೆ– ಆದರೆ ನಿರುದ್ಯೋಗವೂ ನಮ್ಮ ದೊಡ್ಡ ಸಮಸ್ಯೆ ಎಂಬುದನ್ನು ತಿಳಿಯಬೇಕು. ಆದ್ದರಿಂದ, ನಿರುದ್ಯೋಗ, ಆದಾಯ, ದಿನಗೂಲಿ ಹಾಗೂ ಬೆಲೆಯೇರಿಕೆ – ಇವೆಲ್ಲವನ್ನೂ

ಜತೆಯಲ್ಲಿ ಪರಿಗಣಿಸದಿದ್ದಲ್ಲಿ ಪ್ರಾಯಶಃ ನನಗನಿಸುತ್ತದೆ ಈ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಿಲ್ಲ.

## ಶಾಲಾ ಮಕ್ಕಳ ಬಳಕೆ

ಬಹಳ ವರ್ಷಗಳ ಹಿಂದೆ ನನ್ನ ಜಿಲ್ಲೆಯಲ್ಲಿ ಕೆಲವು ಕೃಷಿಕರಿಗೆ ನಾನು ಮಲ್ಲಿಗೆ ಬೇಸಾಯಕ್ಕಾಗಿ ಆರ್ಥಿಕ ನೆರವು ನೀಡಿದ್ದೆ. ಮಲ್ಲಿಗೆ ಬೇಸಾಯದ ದೊಡ್ಡ ವ್ಯವಹಾರವೇ ಇದೆ. ಅವರು ಪ್ರತಿದಿನ 10,000/- ರೂಪಾಯಿ ಮೌಲ್ಯದ ಮಲ್ಲಿಗೆ ಹೂವನ್ನು ಮುಂಬಯಿಗೆ ಸರಬರಾಜು ಮಾಡುತ್ತಾರೆ. ಈ ವ್ಯವಹಾರವನ್ನು ಯಾತಕ್ಕಾಗಿ ವಿಸ್ತರಿಸಬಾರದು ಎಂದು ನಾನು ಯೋಚಿಸಿದೆ. ಸಮಸ್ಯೆ ಅಂದರೆ, ಮಲ್ಲಿಗೆ ಹೂಗಳನ್ನು ಸಮಯಕ್ಕೆ ಸರಿಯಾಗಿ ಗಿಡದಿಂದ ಕಿತ್ತು, ಮಾಲೆಗಳಾಗಿ ಅವರು ಕಟ್ಟಬೇಕು. ಅದರೆ ಅದಕ್ಕೆ ಕೂಲಿ ಕೆಲಸದವರು ಇಲ್ಲ. ಅಂದರೆ, ಬಹಳ ಅವಶ್ಯದ ಒಂದು ಚಟುವಟಿಕೆಗೂ ಕೂಲಿ ಕಾರ್ಮಿಕರ ಅಭಾವ ಕಂಡು ಬಂತು. ಗ್ರಾಮಾಭಿವೃದ್ಧಿಯ ಕುರಿತು ನೀವು ಮಾತನಾಡುವಾಗ ಅಲ್ಲಿ ಮುಂದೆ ಬರಬಹುದಾದ ಇನ್ನಿತರ ಸಮಸ್ಯೆಗಳ ಕುರಿತೂ ನಿಗಾಹರಿಸುವುದು ಅವಶ್ಯಕವೆಂದು ನನಗೆ ಅನಿಸುತ್ತಿದೆ. ಮೇಲೆ ಹೇಳಿದ ಕೂಲಿ ಕಾರ್ಮಿಕರ ಸಮಸ್ಯೆಗೆ ಬಹುಶಃ ಶಾಲಾ ಮಕ್ಕಳನ್ನು ಆ ಕಾರ್ಯಕ್ಕೆ ನಿಯೋಜಿಸುವಂಥದ್ದೇ ಸೂಕ್ತವೆಂದು ನನಗನಿಸುತ್ತಿದೆ.

ಜರ್ಮನಿಯಲ್ಲಿ ಆಲೂಗಡ್ಡೆ ವ್ಯವಸಾಯದ ಕಾಲದಲ್ಲಿ ಆಲೂಗಡ್ಡೆಗಳನ್ನು ಆಯುವುದಕ್ಕೆ ಶಾಲಾ ಮಕ್ಕಳನ್ನು ಬಳಸುತ್ತಾರೆ. ಚೆಕೋಸ್ಲೋವಾಕಿಯಾದಲ್ಲಿ ಜೋಳವನ್ನು ಆಯುವುದಕ್ಕೆ ಶಾಲಾ ಮಕ್ಕಳನ್ನು ಯೋಜಿಸುತ್ತಾರೆ. ಚೆಕೋಸ್ಲೋವಕಿಯಾಕ್ಕೆ ನಾನು ಹೋಗಿದ್ದಾಗ ಕೈಗಾರಿಕಾ ಸಚಿವರು ಸ್ವತಃ ತಾನು ಜೋಳ ಕೀಳುವುದಕ್ಕೆ ತನ್ನ ಮಗನಿಗೆ ಸಹಾಯಮಾಡುತ್ತೇನೆ ಎಂದು ನನಗೆ ತಿಳಿಸಿದರು.

## ಪ್ರಜಾಪ್ರಭುತ್ವದ ಅರ್ಥ

ಭಾರತದಲ್ಲಿ ಈ ಬಗೆಯ ಕೆಲಸಕ್ಕೆ ಶಾಲಾಮಕ್ಕಳನ್ನು ಬಳಸುವುದನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ? ಪ್ರಾಯಶಃ ಹೆತ್ತವರು ತಮ್ಮ ಮಕ್ಕಳನ್ನು ಹೀಗೆ ಬಳಸುವುದನ್ನು ವಿರೋಧಿಸುತ್ತಾರೆ. ನಮ್ಮ ವಿದ್ಯಾಭ್ಯಾಸದ ಒಂದು ಅಂಗವಾಗಿ

ಇಂತಹ ಚಟುವಟಿಕೆಗಳನ್ನು ಎಲ್ಲಿಯವರೆಗೆ ಅಳವಡಿಸಲಾಗುವುದಿಲ್ಲವೋ ನಾವು ಈ ದಿಶೆಯಲ್ಲಿ ಯಶಸ್ವಿಯಾಗಲಾರೆವು. ನನಗೆ ಕೇಳುತ್ತಾರೆ– ಇದು ಪ್ರಜಾಪ್ರಭುತ್ವವೇ? ಪ್ರಜಾಪ್ರಭುತ್ವವೆಂದರೇನು? ಅಮೆರಿಕಾದಲ್ಲಿ ಯುವಕರು ವಿಯೆಟ್ನಾಂಗೆ ಹೋಗಿ ತಮ್ಮ ಪ್ರಾಣ ತೆತ್ತು ಪ್ರಜಾಪ್ರಭುತ್ವದ ಅರ್ಥವನ್ನು ಉಳಿಸಿಕೊಂಡರೆ ನಾವು ನಮ್ಮ ಯುವಕರಿಗೆ ದೇಶಕ್ಕಾಗಿ ಜೀವಿಸಿ, ದೇಶಕ್ಕಾಗಿ ಆತ್ಮಾರ್ಪಣೆ ಬೇಡ ಎಂದು ಬೋಧಿಸುತ್ತೇವೆ. ಜೀವಿಸುವುದು ಪ್ರಜಾಪ್ರಭುತ್ವವಲ್ಲದೇ ಹೋದಲ್ಲಿ ಪ್ರಜಾಪ್ರಭುತ್ವದ ಅರ್ಥ ನನಗೆ ತಿಳಿಯುವುದಿಲ್ಲ. ಬಹುಶಃ ಪ್ರಜಾಪ್ರಭುತ್ವಕ್ಕಿರುವ ಅರ್ಥವನ್ನು ದೇಶದ ಕೆಲವೇ ಮಂದಿ ತಿರುಚಿಕೊಂಡು ಅರ್ಥೈಸುತ್ತಿದ್ದಾರೆ ಮಾತ್ರವಲ್ಲ ಜನರಿಗೆ ಆ ಮೂಲಕ ಮೋಸ ಮಾಡುತ್ತಿದ್ದಾರೆ.

ಆದ್ದರಿಂದ ನಾನು ಹೇಳುವುದಿಷ್ಟೇ ಯುವ ಜನಾಂಗವನ್ನು ದೇಶದ ಸಮಸ್ಯೆಯೊಂದಿಗೆ ಗುರುತಿಸಿ ನೋಡಿ. ಶಿಕ್ಷಣ ಪದ್ಧತಿಯೊಂದರಿಂದಲೇ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವೆಂದು ನೀವು ಅಂದುಕೊಂಡರೆ ಅದು ಸರ್ವಥಾ ಸಾಧ್ಯವಾಗದು. ಶಿಕ್ಷಣ ಮುಗಿಸಿದ ಬಳಿಕ ಯಾವನೇ ಯುವಕ ಸ್ವಂತ ಉದ್ಯೋಗ ಮಾಡಲು ತೊಡಗಿದರೆ, ಅಥವಾ ಬೇಸಾಯಕ್ಕೆ ತೊಡಗಿದರೆ. ಅಂಥವರಿಗೆ ರಾಷ್ಟ್ರೀಯ ಸೇವೆಯ ಅವಶ್ಯಕತೆ ಬೇಕಾಗಿಲ್ಲ. ಆದರೆ ಅವರು ಉದ್ಯೋಗ ಪಡೆದು 10 ರಿಂದ 5 ಗಂಟೆಯ ನಾಗರಿಕರಾಗಿ ಬಾಳುವ ಹಂಬಲಹೊಂದಿದ್ದರೆ ಮತ್ತು ಅವರಿಗೆ ಉದ್ಯೋಗ ರಕ್ಷಣೆಯ ಭದ್ರತೆ ನೀಡುತ್ತಿದ್ದರೆ, ಸದಾ ಕಾಲ ಮಿಕ್ಕ ಅಭದ್ರ ಸಮಾಜ ಏನು ಮಾಡಬೇಕು? ಅದು ನಿಜವಾದ ಆದರ್ಶ ನೀತಿಯಾಗಿದ್ದರೇನು ಬಂತು?

ಈ ಬಗೆಯ ದಾರಿಯನ್ನೇ ತುಳಿಯಬೇಕೆಂದುಕೊಂಡಲ್ಲಿ, ರಾಷ್ಟ್ರೀಯ ಸೇವೆಯು ಕೆಲವು ಬದ್ಧತೆಗಳನ್ನು ಅಳವಡಿಸಲಿ. ನಾವು ದೇಶದ ಸಮಸ್ಯೆಗಳ ಬಗೆಗೆ ಚಿಂತಿಸುವಂತಾಗಲಿ. ದೇಶದ ಸಮಸ್ಯೆಗಳ ಬಗ್ಗೆ ಚಿಂತಿಸುವಾಗ ದೀರ್ಘಕಾಲೀನ ಮತ್ತು ಅಲ್ಪ ಕಾಲೀನ ಸಮಸ್ಯೆಗಳೆಂದುಕೊಳ್ಳೋಣ. ಆದರೆ ನಾವು ಪ್ರತಿದಿನವೂ ಅಲ್ಪ ಕಾಲೀನ ಸಮಸ್ಯೆಗಳ ಬಗ್ಗೆಯೆ ಚಿಂತಿಸಿ ಜೀವಿಸುತ್ತಿದ್ದೇವೆ. 2000ದ ಇಸವಿಯಲ್ಲಿ ಯಾವ ಬಗೆಯ ಸಮಾಜ ನಮಗೆ ಬೇಕಾಗಿದೆ ಎಂದು ನಾವು ಎಂದಾದರೂ ಚಿಂತಿಸಿದ್ದೇವೆಯೇ? ಯಾವ ರೀತಿಯ ಸಮಸ್ಯೆಗಳು ಆಗ ಉದ್ಭವಿಸಬಹುದೆಂದು ಕಲ್ಪಿಸಿದ್ದೇವೆಯೇ? ನಮ್ಮ ಬಡತನದ ಬಗ್ಗೆಯಷ್ಟೇ ನಾವು ಚಿಂತಿಸುತ್ತಿದ್ದೇವೆ.

ನಿಜವಾಗಿಯೂ ನಾವು ಹಿಂದೆ ಕಳೆದು ಹೋದ ವಿಷಯಗಳ ಕುರಿತಾಗಿಯೇ ಅತಿಯಾಗಿ ಮಾತನಾಡುತ್ತಿದ್ದೇವೆ. ಆದರೆ ಕಳೆದ 30ವರ್ಷಗಳಲ್ಲಿ ನಾವು ಏನೂ ಮಾಡಿಲ್ಲ. ಮುಂದಿನ 25 ವರ್ಷಗಳಲ್ಲಿ ನಾವೇನು ಮಾಡಬಲ್ಲೆವು ಎಂಬುದನ್ನು ತಿಳಿದುಕೊಳ್ಳಬೇಕು ಎಂದು ನಾನು ಬಯಸುವುದು. ಯಾವುದೇ ತೆರನಾದ ಸಂಘರ್ಷವಿಲ್ಲದೆ ನಾವೆಲ್ಲರೂ ಜತೆಯಾಗಿ ವ್ಯವಹರಿಸಿದರೆ ಇದಕ್ಕೊಂದು ಪರಿಹಾರ ಕಂಡುಕೊಳ್ಳಬಹುದು.

## ಜನಸಂಖ್ಯೆಯ ಸವಾಲು

ಭಾರತೀಯ ಮಿದುಳಿಗೆ, ಭಾರತೀಯ ಜ್ಞಾನಕ್ಕೆ ಈ ಸವಾಲನ್ನು ಪರಿಹರಿಸುವುದು ಅತೀತವಾಗಿದೆ ಎಂದು ಅನಿಸುತ್ತಿದೆಯಾ? ಇಂಥದ್ದಕ್ಕೆ ಯಾವುದೇ ಪಾಶ್ಚಾತ್ಯ ದೇಶದಿಂದಾಗಲೀ ರಷ್ಯಾದಿಂದಾಗಲೀ ಅನುಕರಣೆಯ ಮಾದರಿ ನಮಗೆ ಲಭ್ಯವಾದೀತು ಎಂದು ನನಗೆ ಅನಿಸುವುದಿಲ್ಲ. ನಾನು ಸೋವಿಯತ್ ರಷ್ಯಾ ಯಾಕೆ ಹೇಳಿದೆ ಅಂದರೆ, ಒಂದು ವೇಳೆ ಅವರು ಅಭಿವೃದ್ಧಿ ಹೊಂದುವಂಥ ಕಾಲಕ್ಕೆ ನಮ್ಮಷ್ಟು ಜನಸಂಖ್ಯೆಯ ಸಮಸ್ಯೆಯನ್ನು ಹೊಂದಿದ್ದರೆ ಪ್ರಾಯಶಃ ಅವರಿಗೂ ನಮ್ಮ ಇಂದಿನ ಸ್ಥಿತಿಯೇ ಬರುತ್ತಿತ್ತು ಎಂದು ನನ್ನ ಅಭಿಪ್ರಾಯ. ನನಗನಿಸುತ್ತಿದೆ ಜ್ಞಾನವೇ ಈ ದೇಶದ ದೊಡ್ಡ ಶತ್ರು. ನೀವು ಎಲ್ಲಾ ಪರಿಣಿತರನ್ನು ಕೇಳುತ್ತೀರಿ ಮತ್ತು ಅವರು ಇದಕ್ಕೆಲ್ಲ ಯಾವುದೇ ಪರಿಹಾರವಿಲ್ಲೆಂದು ಹೇಳಿಬಿಡುತ್ತಾರೆ. ನೀವು ಯಾವುದೇ ಸಮಸ್ಯೆಯನ್ನು ಪ್ರತ್ಯೂರ್ವಕವಾಗಿ ಪರಿಗಣಿಸದೇ ಹೋದಲ್ಲಿ ಅದಕ್ಕೆ ಪರಿಹಾರ ಕಂಡುಕೊಳ್ಳುವುದು ಅಸಾಧ್ಯ. ನಿಮ್ಮ ಮಗನ ಬಗ್ಗೆ ಯೋಚಿಸುವಾಗ ನಿಮಗೆ ಒಂದು ಪರಿಹಾರವಿದೆ. ಆದರೆ ದೇಶದ ಓರ್ವ ಪುತ್ರನ ಬಗ್ಗೆ ಚಿಂತಿಸುವಾಗ ಅದಕ್ಕೆ ಪರಿಹಾರವಿರುವುದಿಲ್ಲ.

ಆದ್ದರಿಂದ ಆಶಯವೆಂದರೆ, ಸಾಮೂಹಿಕ ಕಾರ್ಯಕ್ರಮಗಳನ್ನು ಎತ್ತಿಕೊಳ್ಳಬೇಕು. ಅಂದರೆ, ಸಮುದಾಯದ ನಿರಕ್ಷರತೆಯನ್ನು ನಿರ್ಮೂಲನ ಮಾಡುವಂಥ ಕಾರ್ಯಕ್ರಮಗಳು. ನಿರಕ್ಷರತೆ ಇಂದು ದೇಶದ ಒಂದು ಬೃಹತ್ ಸಮಸ್ಯೆ. ಇನ್ನೊಂದು ಆರೋಗ್ಯ ಸಮಸ್ಯೆಗಿರುವ ಕಾರಣಗಳು. ಅಮೆರಿಕಾ ದೇಶದಲ್ಲಿ ಇಷ್ಟು ಜನಸಂಖ್ಯೆಗೆ ಇಷ್ಟು ಹಾಸಿಗೆಗಳು, ಇಷ್ಟು ದಾದಿಯರು ಮತ್ತು ಇಷ್ಟು ವೈದ್ಯರು ಅಂತ ಇದ್ದರೆ, ಅವರ ಜತೆಗೆ ನಮ್ಮನ್ನು ಯಾಕೆ ಹೋಲಿಕೆಗೆ ಒಡ್ಡಬೇಕು?

ನಮ್ಮನ್ನು ಇತರ ದೇಶಗಳ ಜತೆಗೆ ಹೋಲಿಕೆಗೆ ಒಡ್ಡಲು ಯಾಕೆ ಸಾಧ್ಯವಿಲ್ಲ ಅಂದರೆ, ಪ್ರತಿವರ್ಷ ನಾವು ಹೆಚ್ಚು ಕಡಿಮೆ ಆಸ್ಟ್ರೇಲಿಯಾ ದೇಶದಷ್ಟು ಜನಸಂಖ್ಯೆಯನ್ನು ಸೇರಿಸಿಕೊಳ್ಳುತ್ತಿದ್ದೇವೆ. ಆದ್ದರಿಂದ ನಾವು ಏನು ಮಾಡಬೇಕೆಂದರೆ ರೋಗ ಬಂದಾಗ ಅದನ್ನು ಚಿಕಿತ್ಸೆಗೆ ಒಳಪಡಿಸುವುದರ ಬದಲು, ರೋಗ ಬಾರದಂತೆ ನೋಡಿಕೊಳ್ಳಬೇಕು ರೋಗಕಾರಕಗಳನ್ನು ನಿರ್ಮೂಲನ ಮಾಡುವತ್ತ ನಮ್ಮ ಗಮನ ಬೇಕು. ಸ್ವಾಸ್ಥ್ಯದ ಬಗೆಗೆ ಶಿಕ್ಷಣ ಬೇಕಾಗಿದೆ.

ಮೂರನೇ ನಮ್ಮ ದೊಡ್ಡ ಸಮಸ್ಯೆ ಜನಸಂಖ್ಯೆ. ಈ ಮಾಹಿತಿಯನ್ನು ದೇಶದ ಮೂಲೆಮೂಲೆಗೂ ಪ್ರತಿಯೊಂದು ಕುಟುಂಬಕ್ಕೂ ಒಯ್ಯಬೇಕು. 80 ವರ್ಷ ದಾಟಿದವರಿಗೋ ಅವಿವಾಹಿತರಿಗೋ ಇದನ್ನು ಹೇಳುವುದಲ್ಲ. ಕುಟುಂಬ ಯೋಜನೆ ರಾಷ್ಟ್ರೀಯ ಕಾರ್ಯಕ್ರಮವಾಗಬೇಕು ಮತ್ತು ಪ್ರತಿಯೊಬ್ಬ ಪ್ರಜೆಯ ಕರ್ತವ್ಯವಾಗಬೇಕು. ವೃತ್ತಿ ಗೌರವದ ಹೊರತಾಗಿಯೂ ನಾವು ಒಂದು ಹೊಸ ಸಮಾಜವನ್ನು ಹೇಗೆ ಕಟ್ಟಬಲ್ಲೆವೆಂದು ನನ್ನ ಮನವರಿಕೆಯಾಗುತ್ತಿಲ್ಲ. ತಕ್ಷಣ ನಮಗೆ ಯಾರು ಲಭ್ಯರೋ ಅವರ ಬಗ್ಗೆ ನಮಗೆ ಕಾಳಜಿ ಬೇಕು. ಮತ್ತು ಅವರ ಪರಿಣತಿಯನ್ನು ಉಪಯೋಗಿಸಿಕೊಳ್ಳಬೇಕು. ಕಡ್ಡಾಯ ರಾಷ್ಟ್ರೀಯ ಸೇವೆಯನ್ನು ಅನುಮೋದಿಸುವಂತೆ ನಾನು ಹೇಳುತ್ತೇನೆ. ಇದೊಂದು ಪರ್ಯಾಯ ವ್ಯವಸ್ಥೆಯ ಸೂಚನೆ ಅಷ್ಟೇ. ನಿಮಗೆ ಬೇರೇನಾದರೂ ಹೊಳೆದರೆ ದಯವಿಟ್ಟು ತಿಳಿಸಿರಿ. ಯೋಚನೆ ಮಾಡಬೇಕು.

## ರಾಷ್ಟ್ರೀಯ ಸೇವೆ ಕಡ್ಡಾಯ

ಯಾವನೇ ವ್ಯಕ್ತಿ ಉದ್ಯೋಗವನ್ನು ಹುಡುಕಿಕೊಂಡು ಬಂದಾಗ ಆತ ಕಡ್ಡಾಯವಾಗಿ ರಾಷ್ಟ್ರೀಯ ಸೇವೆಯನ್ನು ಸಲ್ಲಿಸಿರುವ ಬಗ್ಗೆ ಒಂದು ಪ್ರಮಾಣ ಪತ್ರವನ್ನು ಸಲ್ಲಿಸಬೇಕು. ಅದರಲ್ಲಿ ಆತ ಆ ರಾಜ್ಯಕ್ಕೆ ಯಾವುದೇ ರೀತಿಯ ಸೇವೆಯನ್ನು ಸಲ್ಲಿಸಿರಬಹುದು. ಆ ಬಗೆಯ ಸೇವೆಯನ್ನು ಸಮಸ್ಯೆಗಳಿಗೆ ಅನುಗುಣವಾಗಿ ಕಾಲಕಾಲಕ್ಕೆ ಬದಲಾಯಿಸಿರಲೂಬಹುದು. ಒಂದು ವೇಳೆ ಸ್ವಾದ್ಯೋಗದಲ್ಲಿ ನಿರತನಾದವನು ಕೃಷಿಯನ್ನು ಉದ್ಯೋಗವನ್ನಾಗಿ ಆಯ್ಕೆಮಾಡಿಕೊಂಡಾಗ ಆತ ಅಂತಹ ಪ್ರಮಾಣ ಪತ್ರವನ್ನು ಸಲ್ಲಿಸಬೇಕಾದ್ದಿಲ್ಲ. ಯಾಕಂದರೆ, ಈ ನಿಟ್ಟಿನಲ್ಲಿ ನಮ್ಮ ಏಕೈಕ ಗುರಿ ಅಂದರೆ ಪ್ರತಿಯೊಬ್ಬ ನಾಗರಿಕನೂ

ತನ್ನ ಸ್ವಂತ ಕಾಲ ಮೇಲೆ ನಿಲ್ಲಬೇಕು ಎಂಬುದು. ಈ ಬಗ್ಗೆ ವಿಶೇಷ ಗಮನ ಹರಿಯುತ್ತದೆ ಎಂದು ನಾನು ಭಾವಿಸುತ್ತೇನೆ, ಮಾತ್ರವಲ್ಲ ಇದು ಎಂದೂ ಪ್ರಜಾಪ್ರಭುತ್ವದ ವಿರೋಧಿಯೂ ಅಲ್ಲ ಎನ್ನುವಂಥದ್ದು.

ದೇಶದ ಮುಂದಿರುವ ಬೃಹತ್ ಸಮಸ್ಯೆ ಅಂದರೆ ಈ ಕೋಟ್ಯಾಂತರ ಜನರಿಗೆ ಅಷ್ಟೊಂದು ವೆಚ್ಚ ಮಾಡಿ ತರಬೇತಿ ಕೊಡುವಂಥದ್ದು ಮತ್ತು ದಿನದಿನವೂ ಉಲ್ಬಣಿಸುತ್ತಿರುವ ಅವರ ಸಮಸ್ಯೆಗಳನ್ನು ಎದುರಿಸುವಂತದ್ದು. ಅದು ಯಾವ ಸರಕಾರವೇ ಇರಲಿ, ಇವೆಲ್ಲವನ್ನು ಒಟ್ಟುಗೂಡಿಸಿ ನಾವು ಹೊಸ ರಾಷ್ಟ್ರವೊಂದನ್ನು ಕಟ್ಟಲು ನಿರ್ಧಾರ ಮಾಡದಿದ್ದಲ್ಲಿ ಈ ಸಮಸ್ಯೆಗಳೆಲ್ಲ ಹಾಗೆಯೇ ಉಳಿದುಕೊಳ್ಳಲು ಸಾಧ್ಯ.

## ಬರೀ ಶಿಕ್ಷಣ ಸಮಸ್ಯೆಗೆ ದಾರಿ

ಒಬ್ಬನಿಗೆ ಶಿಕ್ಷಣ ಕೊಟ್ಟಿರೋ, ನೀವು ಒಂದು ಸಮಸ್ಯೆಯನ್ನೇ ಹುಟ್ಟುಹಾಕಿದಂತೆ. ಇಂದು ನಮ್ಮ ಅನೇಕ ಹಳ್ಳಿಗಳು ಬಡತನದಲ್ಲೇ ಇರುವುದಕ್ಕೆ ಕಾರಣ ನಮ್ಮ ಶಿಕ್ಷಣ ಹಳ್ಳಿಗಳಿಂದ ಸುಶಿಕ್ಷಿತರನ್ನು ಪಟ್ಟಣಕ್ಕೆ ಒಯ್ದುಬಿಟ್ಟಿರುವುದು. ಮತ್ತು ನಮ್ಮ ಬ್ಯಾಂಕಿಂಗ್ ವ್ಯವಸ್ಥೆ. ಉನ್ನತ ಧ್ಯೇಯಗಳ ಹೊರತಾಗಿಯೂ, ಬ್ಯಾಂಕಿಂಗ್ ಗ್ರಾಮೀಣ ಪ್ರದೇಶಕ್ಕೆ ಸಾಗದೆ ಇರುವಂಥದ್ದು. ನಮ್ಮ ಗ್ರಾಮೀಣ ಪ್ರದೇಶಗಳು ಬಡತನಕ್ಕೆ ಗುರಿಯಾಗುತ್ತಿರುವುದು ಇದೇ ಕಾರಣದಿಂದಿರಬಹುದು. ಪ್ರತಿಯೊಂದು ಅಭಿವೃದ್ಧಿಗೂ ಅನಭಿವೃದ್ಧಿಯ ಒಂದು ಮುಖವೂ ಇರುತ್ತದೆ. ಇದನ್ನು ಗಮನಿಸದೇ ಹೋದಲ್ಲಿ ನಮ್ಮ ಸಮಸ್ಯೆ ಬಗೆಹರಿಯುವುದಿಲ್ಲ. ರಾಷ್ಟ್ರೀಯ ಸೇವೆಯಲ್ಲಿ ನಿರತರಾಗಿರುವವರಿಗೆ ಸ್ವಲ್ಪ ಭತ್ಯೆಯನ್ನೂ ನೀಡಬೇಕಾಗುತ್ತದೆ. ಇದನ್ನು ನಾನು ಬಲವಾಗಿ ಅನುಮೋದಿಸುತ್ತೇನೆ.

## ನಿವೃತ್ತ ಸೇನಾ ಅಧಿಕಾರಿಗಳ ಬಳಕೆ

ಇನ್ನೊಂದು ಸಮಸ್ಯೆ ನಮ್ಮನ್ನು ಕಾಡುತ್ತಿದೆ. ನಮ್ಮ ಸೇನೆಯ ಅಧಿಕಾರಿಗಳು ಬೇಗನೆ ನಿವೃತ್ತಿ ಹೊಂದುತ್ತಾರೆ. ಮತ್ತು ನಿರುದ್ಯೋಗಿಗಳ ಸೇನೆಗೆ ಅವರು ಸೇರ್ಪಡೆಗೊಳ್ಳುತ್ತಾರೆ. ಈ ಯೋಜನೆಯ ಅನುಷ್ಠಾನಕ್ಕೆ ಅಂತಹ ನಿವೃತ್ತರನ್ನು ಯಾಕಾಗಿ ನಿಯೋಜಿಸಬಾರದು? ಅವರ ಅನುಭವದ ಸದುಪಯೋಗ ಯಾಕೆ ಪಡೆಯಬಾರದು? ಈ ದೇಶದಲ್ಲಿ ಒಬ್ಬ ನಿವೃತ್ತನಾದಾಗ ನಿಷ್ಪ್ರಯೋಜಕನಾಗುತ್ತಾನೆ.

ವೃತ್ತಿಯಿಂದ ನಿವೃತ್ತನಾದರೆ ಹೆಚ್ಚು ಯುವಕರಿಗೆ ಉದ್ಯೋಗ ಲಭಿಸುತ್ತದೆ ಎಂದು ನಾವು ತಿಳಿದು ಕೊಂಡಿದ್ದೇವೆ. ಆದರೆ ನಿವೃತ್ತರಾದವರ ಪಕ್ವತೆ ಮತ್ತು ಅನುಭವದ ಪರಿಗಣನೆ ಏನು? ನಿವೃತ್ತರಾದ ಕ್ಷಣದಲ್ಲೇ ಅವರನ್ನು ಪ್ರತ್ಯೇಕವಾಗಿ ನೋಡುವುದೇಕೆ? ಅವರ ಪ್ರಬುದ್ಧತೆಯನ್ನು ತರುಣ ಜನಾಂಗದ ಏಳ್ಗೆಗೆ ಯಾಕೆ ಬಳಸಬಾರದು? ಈ ದಿಶೆಯಲ್ಲಿ ದೊಡ್ಡದೊಂದು ಕಾರ್ಯದ ಅನಿವಾರ್ಯತೆ ಕಂಡುಬರುತ್ತದೆ.

***

## ಯೋಜನಾ ಮಂತ್ರಾಲಯ

## ಅನುದಾನಕ್ಕಾಗಿರುವ ಬೇಡಿಕೆಗಳ ಕುರಿತಾದ ಚರ್ಚೆ

### 28 ಮಾರ್ಚ್ 1979

### (ಡಾ.ಸುಶೀಲಾ ನಾಯರ್–ಸಭಾಧ್ಯಕ್ಷತೆ)

**ಶ್ರೀ ಟಿ.ಎ.ಪೈ:** ಮ್ಯಾಡಮ್ ಅವರೇ, ನಾವು ಯೋಜನೆಯನ್ನು ರೂಪಿಸುವಂಥ ಕಾಲದಲ್ಲಿ, ಯಾವ ವಿಷಯದ ಮೇಲೆ ಒತ್ತನ್ನು ನೀಡಬೇಕೆಂಬ ಬಗ್ಗೆ ನಮ್ಮಲ್ಲಿ ಭಿನ್ನಾಭಿಪ್ರಾಯಗಳಿರಬಹುದು. ಆದರೆ ಮುಂದಿನ ಐದು ವರ್ಷಗಳಲ್ಲಿ ದೇಶ ಯಾವ ದಿಶೆಯಲ್ಲಿ ಅಭಿವೃದ್ಧಿಹೊಂದಬೇಕೆಂಬ ಬಗೆಗೆ ಪ್ರಾಯಶಃ ನಮ್ಮೆಲ್ಲರಲ್ಲೂ ಒಮ್ಮತ ಇದ್ದೇ ಇರುತ್ತದೆ ಎಂಬ ಭಾವನೆ ನನ್ನದು. ನನ್ನ ವೈಯಕ್ತಿಕ ಅಭಿಪ್ರಾಯದ ಪ್ರಕಾರ, ನಮಗೊಂದು ರಾಷ್ಟ್ರೀಯ ಧೋರಣೆ ಇಲ್ಲದಿರುವುದೇ ನಮ್ಮಲ್ಲಿ ತೊಡಕುಗಳಿಗೆ ಕಾರಣ. ರಾಷ್ಟ್ರೀಯ ಧೋರಣೆ ಅಥವಾ ಗುರಿ ಇಲ್ಲದಿರುವ ಬಗ್ಗೆಯೇ ನಮ್ಮ ಯೋಜನೆಯ ಪ್ರತಿಪಾದನೆ ಆಗಬೇಕಾಗಿದೆ. ಐದು ವರ್ಷಗಳ ಅವಧಿಯಲ್ಲಿ ನಾವೇನು ಸಾಧಿಸಬೇಕೋ ಅದನ್ನು ನಮ್ಮ ಯೋಜನೆ ತತ್ತ್ವಶಃ ಎತ್ತಿಹಿಡಿಯಬೇಕು. ನಮ್ಮಂಥ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಒದಗಿರುವ ಸಮಯಾವಕಾಶವೇ ಅತ್ಯಂತ ಮಹತ್ವದ ಸಂಪನ್ಮೂಲವೆಂದು ಪರಿಗಣಿಸಬೇಕು. ನಿಜವಾಗಿಯೂ ನಾವು ಆ ದಿಶೆಯಲ್ಲಿ ಆಲೋಚನೆ ಮಾಡಿದ್ದಿದೆಯೇ? ನಾವೆಂದೂ ಹಾಗೆ ಯೋಚಿಸಿದ್ದೇ ಇಲ್ಲ. ಕಾರಣವೆಂದರೆ, ಪ್ರತಿಯೊಂದು ಯೋಜನೆಯೂ ಕಟ್ಟಕಡೆಗೆ ಅನೇಕ ಯೋಜನೆಗಳ ಒಂದು

ಪಟ್ಟಿಯಾಗಿ ಪರಿವರ್ತನೆಯಾಗುತ್ತದೆ ಅಷ್ಟೆ. ಅದು ಕೃಷಿಯಿರಲಿ, ಕೈಗಾರಿಕೆಯಿರಲಿ– ಎಷ್ಟು ಹಣವನ್ನು ನಾವು ವ್ಯಯ ಮಾಡಿದ್ದೇವೆ ಎಂಬುದರ ಮೇಲೆ ನಮ್ಮ ಯೋಜನೆ ಎಷ್ಟು ಫಲಿಸಿತು ಎಂದು ಲೆಕ್ಕ ಹಾಕುತ್ತೇವೆ. ಈ ರೀತಿಯಲ್ಲಿ ಗಣನೆ ಮಾಡುವುದರಿಂದ ಕಳೆದ ವರ್ಷಕ್ಕಿಂತ ನಾವು ಎಷ್ಟು ಅಭಿವೃದ್ಧಿ ಹೊಂದಿದ್ದೇವೆ ಎಂದಷ್ಟೇ ತಿಳಿಯಲು ಶಕ್ತರಾಗುತ್ತೇವೆ.

ತೀವ್ರವಾದ ಪೈಪೋಟಿಗಳನ್ನು ಎದುರಿಸುವ ನಮ್ಮಂಥ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ, ನಮ್ಮ ಬೆಳವಣಿಗೆಯನ್ನು ಅಳೆಯುವಂಥ ಇನ್ನೊಂದು ಬಗೆಯ ಅಳತೆಗೋಲು ಬೇಕೆಂದು ತಿಳಿಯಬೇಕು. ನಾವೆಷ್ಟು ಬೆಳೆದಿದ್ದೇವೆ ಎನ್ನುವುದರ ಜತೆಗೆ ನಾವೇನು ಮಾಡಲು ಉಳಿದಿದೆ ಎಂಬ ಬಗ್ಗೆಯೂ ತಿಳುವಳಿಕೆ ಬೇಕು. ಸರಕು ಅದೇ ಪ್ರಮಾಣದ್ದು ಇದ್ದಾಗ್ಯೂ, ಅದಕ್ಕೆ ವಿಧಿಸಿಲಾದ ಬಾಡಿಗೆಯಲ್ಲಿ ಮಾತ್ರ ಯಾವದೇ ಹೆಚ್ಚಳವಾಗಿಲ್ಲ. ಹೀಗಾಗಿ ಹಾಕುವ ಅಸಲು ಬಂಡವಾಳ ಅಧಿಕವಾಗುತ್ತಿದ್ದರೂ, ವರಮಾನದಲ್ಲಿ ವೃದ್ಧಿವುಂಟಾಗುತ್ತಿಲ್ಲ.

ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ನಾವು ಗ್ರಾಮೀಣ ಅಭಿವೃದ್ಧಿಯ ಕುರಿತಂತೆ ಬಹಳಷ್ಟು ಮಾತನಾಡಿದೆವು. ಅದೇ ವಿಷಯವನ್ನು ಅನುಷ್ಠಾನಗೊಳಿಸುವ ಬಗೆಗೆ, ಈಗ ನಾವು ಆರನೇ ಪಂಚವಾರ್ಷಿಕ ಯೋಜನೆಯ ಅನುಷ್ಠಾನಕ್ಕಾಗಿ ಕಾಯಬೇಕಾಗಿದೆ. ಯಾಕೆಂದರೆ ನಾವು ಹೇಳುವುದಕ್ಕೂ ಮಾಡುತ್ತಿರುವುದಕ್ಕೂ ಪರಸ್ಪರ ಯಾವುದೇ ಹೊಂದಾಣಿಕೆಯಾಗಲೀ ಸಂಬಂಧವಾಗಲೀ ಇರುವುದಿಲ್ಲ.

## ಬೆಕ್ಕು ಇಲಿಯ ಕತೆ

ಮ್ಯಾಡಮ್ ಅವರೇ, ಈ ಸಂದರ್ಭದಲ್ಲಿ ಬೆಕ್ಕು ಇಲಿಯ ಕತೆಯೊಂದು ನನಗೆ ನೆನಪಿಗೆ ಬರುತ್ತಿದೆ. ಒಂದು ಬೆಕ್ಕು ಯಾವಾಗಲೂ ಒಂದು ಇಲಿಯನ್ನು ಬೆದರಿಸುತ್ತಿತ್ತು. ಇಲಿಗೆ ಏನು ಮಾಡಬೇಕೆಂದೇ ತೋಚಲಿಲ್ಲ. ಒಂದು ದಿನ ಅದು ಒಂದು ಜಾಣ ಗೂಬೆಯನ್ನು ಸಂಪರ್ಕಿಸಿತು. ಗೂಬೆ ಹೇಳಿದ್ದು ಇಷ್ಟೇ, 'ಇದು ತುಂಬಾ ಸುಲಭದ ಕೆಲಸ. ನೀನು ಸ್ವತಃ ಒಂದು ಬೆಕ್ಕಿನ ಥರ ಆಗು.' ಇಲಿ ಹಿಂದಿರುಗಿ ಬಂತು. ಎಷ್ಟೇ ಪ್ರಯತ್ನಿಸಿದರೂ ಅದಕ್ಕೆ ಬೆಕ್ಕಿನ ಥರ ಆಗುವುದಕ್ಕೆ ಆಗಲಿಲ್ಲ. ಮರುದಿನವೇ ಇಲಿ ಮತ್ತೆ ತನ್ನ ಅಹವಾಲನ್ನು ಗೂಬೆಗೆ ಒಯ್ದಿತು. ಗೂಬೆಗೆ ತುಂಬಾ ರೇಗಿತು. ಅದು ಹೇಳಿತು, 'ನಾನು ನಿನಗೆ ಕೇವಲ ಕೌಶಲ್ಯವನ್ನು

ಹೇಳಿಕೊಡಬಲ್ಲೆನೇ ಹೊರತು ಅದರ ಅನುಷ್ಠಾನ ಮಾಡುವಂಥದ್ದು ನಿನ್ನ ಹಣೆಬರಹ'

ಅದೇ ರೀತಿಯಲ್ಲಿ ಯೋಜನೆಗಳನ್ನು ತಯಾರಿಸುವುದರಲ್ಲಿ ನಾವು ಬಹಳ ನೈಪುಣ್ಯವನ್ನು ಹೊಂದಿರುತ್ತೇವೆ. ಆದರೆ ಅದರ ಅನುಷ್ಠಾನದ ಸಂದರ್ಭದಲ್ಲಿ ನಾವು ಎಲ್ಲೆಲ್ಲೋ ಕಳೆದು ಹೋಗುತ್ತಿದ್ದೇವೆ. ಅದೇ ನಮ್ಮ ದೇಶದ ದುರಂತ. ಈವೊತ್ತಿನ ಪೇಪರ್ ನೋಡಿ– ಎರಡು ರಾಸಾಯನಿಕ ಗೊಬ್ಬರ ಕಾರ್ಖಾನೆಗಳು ದುಪ್ಪಟ್ಟು ದುಬಾರಿಯಾಗಿವೆ, ಯಾಕೆಂದರೆ ಅವುಗಳ ಕುರಿತು ಯಾವುದೇ ತೀರ್ಮಾನ ಕೈಗೊಳ್ಳುವತ್ತ ಯಾರೂ ಗಮನಹರಿಸುತ್ತಿಲ್ಲ ಎಂಬುದಾಗಿ. ಇದಕ್ಕೆ ಯಾರನ್ನು ಹೊಣೆಗಾರರನ್ನಾಗಿ ಮಾಡುತ್ತೀರಿ? ಯಾರು ತೀರ್ಮಾನ ಕೈಗೊಳ್ಳುತ್ತಾರೆ?

ಜಗತ್ತು ಇಂದು ಸಣ್ಣದಾಗುತ್ತಿದೆ. ನಾವು ಯಾವುದೇ ತೀರ್ಮಾನವನ್ನು ನಮ್ಮಷ್ಟಕ್ಕೇ ತೆಗೆದುಕೊಳ್ಳುವಂತಿಲ್ಲ. ಯೋಜನಾ ಆಯೋಗ ತನ್ನ ಯಾವುದೇ ಯೋಜನೆಯನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಜಗತ್ತಿನ ಇಂದಿನ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಂಡಿದೆ ಅಂತ ನಿಮಗೆ ಅನಿಸುತ್ತಿದೆಯಾ? ಸರಕಾರ ದೇಶವನ್ನು ತನ್ನ ವಿಶ್ವಾಸಕ್ಕೆ ತೆಗೆದುಕೊಂಡು ಈ ಎಲ್ಲಾ ತೀರ್ಮಾನಗಳನ್ನು ಕೈಗೊಳ್ಳಬೇಕಾದುದು ಅನಿವಾರ್ಯವೆಂದು ನನಗನಿಸುತ್ತಿದೆ. ***

## ಸಂತಾಪ ಸೂಚನೆ

### ಏಳನೇ ಲೋಕಸಭೆಯ 6ನೇ ಅಧಿವೇಶನ–

### ಸೋಮವಾರ, 17ಆಗಸ್ಟ್, 1981– 26 ಶ್ರಾವಣ, ಶಕವರ್ಷ 1903

ಸಭಾಧ್ಯಕ್ಷರು ಸಂತಾಪ ಸೂಚನೆಯ ನಿಲುವಳಿಯನ್ನು ಮಂಡಿಸುತ್ತ ಶ್ರೀ ಟಿ.ಎ.ಪೈಯವರ ಗುಣಗಾನವನ್ನು ಮಾಡಿದರು:

"ಕರ್ನಾಟಕದ ಉಡುಪಿ ಲೋಕಸಭಾ ಕ್ಷೇತ್ರವನ್ನು ಪ್ರತಿನಿಧಿಸಿದ ಶ್ರೀ ಟಿ.ಎ.ಪೈ ಅವರು 6ನೇ ಲೋಕಸಭೆಯ(1977–79) ಸದಸ್ಯರಾಗಿದ್ದರು. ಅದಕ್ಕೆ ಮುನ್ನ ಅವರು, 1952ರಲ್ಲಿ ಮದ್ರಾಸು ಪ್ರಾಂತದ ಶಾಸನ ಸಭೆಯ ಸದಸ್ಯರೂ, 1956ರಲ್ಲಿ ಮೈಸೂರು ಪ್ರಾಂತದ ಶಾಸನ ಸಭೆಯ ಸದಸ್ಯರೂ ಆಗಿ

ಸೇವೆಸಲ್ಲಿಸಿದ್ದಾರೆ. 1972–77ರ ಅವಧಿಯಲ್ಲಿ ಶ್ರೀ ಟಿ.ಎ.ಪೈ ಅವರು ರಾಜ್ಯಸಭೆಯ ಸದಸ್ಯರಾಗಿದ್ದರು. 1972ರಲ್ಲಿ ಶ್ರೀ ಪೈಯವರು ಕೇಂದ್ರ ಮಂತ್ರಿಮಂಡಲದಲ್ಲಿದ್ದು ವಿವಿಧ ಇಲಾಖೆಗಳಲ್ಲಿ ಕಾರ್ಯನಿರ್ವಹಿಸಿರುತ್ತಾರೆ –ರೇಲ್ವೇ, ಭಾರೀ ಕೈಗಾರಿಕೆ, ಉಕ್ಕು ಮತ್ತು ಗಣಿಗಾರಿಕೆ, ವಿಜ್ಞಾನ ಮತ್ತು ತಂತ್ರಜ್ಞಾನ, ಕೈಗಾರಿಕೆ ಮತ್ತು ನಾಗರಿಕ ಸರಬರಾಜು ಹಾಗೂ ಕೈಗಾರಿಕೆ– ಇವು, 1977 ಮಾರ್ಚ್ ತನಕ ಅವರು ನಿರ್ವಹಿಸಿರುವ ಇಲಾಖೆಗಳು. ಮತ್ತೆ ಕೇಂದ್ರ ಮಂತ್ರಿಯಾಗಿ ಆಗಸ್ಟ್ 1979ರಲ್ಲಿ ನಿಯುಕ್ತರಾದರು.

ವಿತ್ತ ಮತ್ತು ಬ್ಯಾಂಕಿಂಗ್ ವಲಯದಲ್ಲಿ ಅಪ್ರತಿಮ ಪ್ರಾವೀಣ್ಯತೆ ಹೊಂದಿದ್ದ ಅವರು ಸಿಂಡಿಕೇಟ್ ಬ್ಯಾಂಕ್, ಭಾರತೀಯ ಆಹಾರ ನಿಗಮ ಮತ್ತು ಭಾರತೀಯ ಜೀವ ವಿಮಾ ನಿಗಮಗಳ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ.

1972ರಲ್ಲಿ ಅವರಿಗೆ ರಾಷ್ಟ್ರಾಧ್ಯಕ್ಷರು ಪದ್ಮಭೂಷಣ ಪ್ರಶಸ್ತಿಯನ್ನು ನೀಡಿ ಗೌರವಿಸಿದ್ದಾರೆ. ಕರ್ನಾಟಕದ ಮಣಿಪಾಲದಲ್ಲಿ ಅವರು 1981, ಮೇ ತಿಂಗಳ 29ರಂದು ತಮ್ಮ 59ನೇ ವಯಸ್ಸಿನಲ್ಲಿ ಗತಿಸಿದ್ದಾರೆ.

ನಮ್ಮ ಅತೀವ ಸಂತಾಪವನ್ನು ಸೂಚಿಸುವ ಸಲುವಾಗಿ ನಾವೆಲ್ಲ ಎದ್ದುನಿಂತು ಸ್ವಲ್ಪಕಾಲ ಮೌನವನ್ನು ಆಚರಿಸೋಣ"

(ಸರ್ವ ಸದಸ್ಯರೂ ಎದ್ದು ನಿಂತು ಸ್ವಲ್ಪ ಹೊತ್ತು ಮೌನವನ್ನು ಆಚರಿಸಿದರು)

***



"........ದೇವರು ಮತ್ತು ಟಿ.ಎ.ಪೈಯವರು ಮಧ್ಯರಾತ್ರಿಯಲ್ಲಿ ಒಟ್ಟಿಗೆ ಬಂದು ಮನೆ ಬಾಗಿಲು ತಟ್ಟಿದರೆ ನಾನು ಟಿ.ಎ.ಪೈ ಅವರನ್ನು ಮೊದಲಿಗೆ ಒಳಗೆ ಕರೆಯುತ್ತೇನೆ.

"......ನಲುವತ್ತು ವರ್ಷಗಳ ಹಿಂದೆ ಪೈಗಳು ಇದ್ದರೆಂದು ನಾನು ಇಂದು ಬದುಕಿ ಉಳಿದಿದ್ದೇನೆ."

–ಕನ್ನಡದ ಕಟ್ಟಾಳು, ಪ್ರಖ್ಯಾತ ಪತ್ರಕರ್ತರಾದ ಡಾ.ಪಾಟೀಲ ಪುಟ್ಟಪ್ಪನವರು

# ಸಹೃದಯಿ ಟಿ.ಎ.ಪೈ

## –ಪದ್ಮಭೂಷಣ ಡಾ. ಡಿ.ವೀರೇಂದ್ರ ಹೆಗ್ಗಡೆಯವರು

## ಧರ್ಮಾಧಿಕಾರಿ, ಶ್ರೀಕ್ಷೇತ್ರ ಧರ್ಮಸ್ಥಳ



ಡಾ. ಡಿ. ವೀರೇಂದ್ರ ಹೆಗ್ಗಡೆಯವರನ್ನು ಸಂದರ್ಶಿಸುತ್ತಿರುವ
ಲೇಖಕ ಡಾ.ಶಿವಾನಂದ ಬೇಕಲ್

ಇಡೀ ದೇಶ ಕಂಡ ಅತ್ಯಂತ ಪ್ರತಿಭಾನ್ವಿತ ಮತ್ತು ಪ್ರಭಾವೀ ವ್ಯಕ್ತಿ ಅನ್ನಿಸಿಕೊಳ್ಳುವವರಲ್ಲಿ ಶ್ರೀಟಿ.ಎ.ಪೈ ಖಂಡಿತವಾಗಿಯೂ ಒಬ್ಬರು. ನನಗೆ ಅದೃಷ್ಟವಶಾತ್ ಅವರನ್ನು ಬಹಳ ಹತ್ತಿರದಿಂದ ಭೇಟಿಯಾಗುವ, ಮಾತನಾಡುವ ಮತ್ತು ಅವರ ಜತೆಗೆ ಅನೇಕ ಸಂದರ್ಭಗಳಲ್ಲಿ ಅವರ ಚಿಂತನೆಗಳನ್ನು ಹಂಚಿಕೊಳ್ಳುವ ಅವಕಾಶ ದೊರಕಿತು. ಅವ್ರು ಬೇರೆ ಎಲ್ರಿಗೂ ಗೊತ್ತಿದ್ದ ಹಾಗೆ ವ್ಯವಹಾರಸ್ತರು, ಬ್ಯಾಂಕಿನಲ್ಲಿ ಅಥವಾ ಬೇರೆ ಎಲ್ಐಸಿಯಲ್ಲಾಗಲೀ, ಬೇರೆ ಅನೇಕ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಿದವರು.

ಒಂದು ಬಾರಿ ಅವ್ರು ಈ ಕ್ಷೇತ್ರಕ್ಕೆ ಬಂದಾಗ ನಾನು ಅವ್ರನ್ನ ಮಾತಾಡ್‌ಸ್ತಾ ಇದ್ದೆ. ಆವಾಗ ಅವ್ರು ಒಂದು ಮಾತು ಹೇಳಿದ್ರು. "ಈ ದೇಶದ ರೇಲ್ವೇ ಇಲಾಖೆ ನಮ್ಮ ಅತ್ಯಂತ ಪ್ರಮುಖ ಆರ್ಥಿಕ ವ್ಯವಸ್ಥೆಯ ಶಕ್ತಿ. ಆದರೆ ಈ ಇಲಾಖೆಯನ್ನು ಮತ್ತೊಮ್ಮೆ ಸಶಕ್ತವಾಗಿ ಮತ್ತು ಸರಿಯಾದ ಪಟ್ಟಿಯ ಮೇಲೆ ತರಬೇಕಾದ್ರೆ

ಬಹಳಷ್ಟು ಕೆಲ್ಸ ಮಾಡಬೇಕಾಗಿದೆ. ನಾನು ಮಂತ್ರಿಯಾಗಿ, ಕನಿಷ್ಠ ಆರು ತಿಂಗಳ ಕಾಲ ರೇಲ್ವೇ ಡಿಪಾರ್ಟ್‌ಮೆಂಟಿನ ಮಾಹಿತಿ ಪಡ್ಕೊಳ್ಳಿಕ್ಕೆ ನನಗೆ ಸಾಧ್ಯವಾಯಿತು. ಮತ್ತು ಇನ್ನೂ ಹೆಚ್ಚಿನ ಅಧ್ಯಯನ ಮಾಡಬೇಕಾಗಿದೆ"– ಎನ್ನುವ ಮಾತನ್ನು ಅವ್ರು ಹೇಳಿದ್ರು. ಇದನ್ನು ಬಹಳಷ್ಟು ಮಂದಿಗೆ ನಾನು ಹೇಳ್ತೇನೆ. ಬಹುಶಃ ಈಗಿನ ಕಾಲದಲ್ಲಿ ಯಾರಾದ್ರೂ ಒಬ್ರು ಅಧಿಕಾರಕ್ಕೆ ಬಂದ್ರೆ, ಸರಕಾರದಲ್ಲಾಗ್ಲೀ ಅಥ್ವಾ ಖಾಸಗೀ ಸಂಸ್ಥೆಯಲ್ಲಾಗ್ಲೀ ಬಂದ್ರೆ, ಅವ್ರು ತಕ್ಷಣವೇ ಪತ್ರಿಕಾ ಹೇಳಿಕೆಗಳನ್ನು ಕೊಡ್ತಾ ಹೋಗ್ತಾರೆ; ಅಥ್ವಾ ತಾನು ಸರ್ವಜ್ಞನಂತೆ ವರ್ತಿಸ್ತಾರೆ. ಟಿ.ಎ.ಪೈ ಅಂಥವ್ರು ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾಗಿದ್ದವರು, ರೇಲ್ವೇ ಡಿಪಾರ್ಟ್‌ಮೆಂಟಿನ ಮಾಹಿತಿ ಪಡಕೊಳ್ಳಲು 6 ತಿಂಗಳು ಬೇಕಾಗ್ತದೆ ಅಂದ್ರೆ –ಇದರಲ್ಲಿ ಎರಡು ದೃಷ್ಟಿ ನಮಗೆ ಸ್ಪಷ್ಟವಾಗಿ ಗೋಚರಿಸ್ತದೆ– ಮೊದಲನೆಯದಾಗಿ, ಆಳವಾಗಿ ಅಧ್ಯಯನ ಮಾಡದೆ ಯಾವುದೇ ವ್ಯವಹಾರವನ್ನು ಮಾಡಬಾರದು. 'ಇಲಾಖೆಯನ್ನು ನಾನು ಅರಿತುಕೊಳ್ಳಬೇಕಾದರೆ ಆರು ತಿಂಗಳ ದೀರ್ಘ ಅಧ್ಯಯನ ಮಾಡಬೇಕೆಂಬುದೇ' ಒಂದು ದೃಷ್ಟಿ. ಇನ್ನೊಂದು, ಈ ಆರು ತಿಂಗಳ ಕಾಲ ನಾನು ಪಡೆದುಕೊಂಡೆ ಎನ್ನುವ ದೃಷ್ಟಿಯಲ್ಲಿ ನಾನು ಇದನ್ನು ಸುಧಾರಿಸಬೇಕಾದಲ್ಲಿ ಇನ್ನೂ ಮಾಹಿತಿಯನ್ನು ಹೆಚ್ಚು ಸಂಗ್ರಹಿಸಬೇಕೆನ್ನುವ ಉತ್ಸಾಹ– ಈ ಎರಡೂ ವಿಶೇಷವಾದ ವಿಷಯಗಳನ್ನು ನಾನು ಅನೇಕ ಸಂದರ್ಭಗಳಲ್ಲಿ ಉಲ್ಲೇಖಿಸಿದ್ದೇನೆ.

## ಭಕ್ತಿ ಶ್ರದ್ಧೆಯ ಮಹತ್ವ

ಅದಲ್ಲದೆ, ಇನ್ನೊಂದು ಬಾರಿ ಅವ್ರು ಧರ್ಮಸ್ಥಳ ಕ್ಷೇತ್ರಕ್ಕೆ ಬಂದು, ನಾನು ಮತ್ತು ಅವ್ರು ಜತೆಯಾಗಿ ದೇವಸ್ಥಾನದ ಒಳಕ್ಕೆ ಹೋದೆವು. ದೇವಸ್ಥಾನದ ಗರ್ಭಗುಡಿಯ ಸುತ್ತ ಪ್ರದಕ್ಷಿಣೆ ಬರ್ತಾ ಇದ್ದೆವು.

ಆ ಸಂದರ್ಭದಲ್ಲಿ ಸಾಮಾನ್ಯವಾಗಿ ದೇವಸ್ಥಾನದಲ್ಲಿ ಒಂದು ವಾತಾವರಣ ಇತ್ತು. ಅದು ಏನೂಂದ್ರೆ, ದೇವಸ್ಥಾನಗಳಿಗೆ ಹೋಗುವುದು, ಹಿಂದೂ ದೇವಸ್ಥಾನಗಳಿಗೆ ಹೋಗುವುದು. ಹಿಂದೂ ದೇವರ ದರ್ಶನ ಮಾಡುವಂಥದ್ದು, ಇತ್ಯಾದಿಗಳು ಸೆಕ್ಯೂಲರ್ ವ್ಯವಸ್ಥೆಯಲ್ಲಿ ವಿರುದ್ಧವಾದದ್ದು, ಹಾಗಾಗಿ ಯಾರಾದ್ರೂ 'ನಾನು ದೇವಸ್ಥಾನಕ್ಕೆ ಹೋಗ್ತೇನೆ, ನನಗೂ ದೇವರ ಮೇಲೆ ನಂಬಿಕೆ ಇದೆ, ಭಕ್ತಿ ಶ್ರದ್ಧೆಗಳಿದ್ದಾವೆ' ಅಂತ ಬಾಯಿಬಿಟ್ಟು ಹೇಳುತ್ತಿರಲಿಲ್ಲ. ಇಂತಹ ಸಂದರ್ಭಗಳಲ್ಲಿ ಅನೇಕ ಸಚಿವರುಗಳು, ಕೇಂದ್ರ ಸರಕಾರದಲ್ಲಿದ್ದಂಥ ಅನೇಕ ಸಚಿವರುಗಳು,

ರಾಜ್ಯ ಸರಕಾರದಲ್ಲಿದ್ದಂಥ ಅನೇಕ ಸಚಿವರುಗಳು ದೇವಸ್ಥಾನಗಳ ಭೇಟಿಯನ್ನು ಕಡಿಮೆ ಮಾಡಿದ್ರು. ಬಹಿರಂಗವಾಗಿ ಗುರುತಿಸಿಕೊಳ್ಳಲು, ದೇವಸ್ಥಾನದಲ್ಲಿ ಅಥವಾ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಗುರುತಿಸಿಕೊಳ್ಳಲು ಸಂಕೋಚ ಪಡ್ತಾ ಇದ್ರು. ಈ ಸಂದರ್ಭದಲ್ಲಿ ಪ್ರದಕ್ಷಿಣೆ ಹೋಗ್ತಾ, ಅವ್ರೊಂದು ಮಾತು ಹೇಳಿದ್ರು, ಏನೂಂದ್ರೆ,–

"ನೋಡಿ, ಅನೇಕ ಮಂದಿ ಮನೆಯಲ್ಲಿ ಅಥ್ವಾ, ವೈಯಕ್ತಿಕವಾಗಿ ಧಾರ್ಮಿಕರಿದ್ದಾರೆ. ಆದರೆ ಬಹಿರಂಗವಾಗಿ ಅದನ್ನು ಹೇಳಿಕೊಳ್ಳಿಕ್ಕೆ ಭಯಪಡ್ತಾರೆ. ಆದ್ರೆ ನಾನು ಖಂಡಿತವಾಗಿ ಹೇಳ್ತೇನೆ, ನಾನು ಧಾರ್ಮಿಕನೂ ಇದ್ದೇನೆ, ಮತ್ತು ನನ್ನನ್ನು ಯಾರಾದರೂ ಪ್ರಶ್ನಿಸಿ, 'ನಿನಗೆ ಅಧಿಕಾರ ಬೇಕೋ ಅಥ್ವಾ ನಿನ್ನ ಧಾರ್ಮಿಕ ವಿಶ್ವಾಸಗಳು ಬೇಕೋ?' ಅಂತ ಕೇಳಿದ್ರೆ, ಖಂಡಿತವಾಗಿ 'ಅಧಿಕಾರಕ್ಕಿಂತ ಮಹತ್ವದ್ದು, ನನ್ನ ಧಾರ್ಮಿಕ ನಂಬಿಕೆ ಮತ್ತು ನನ್ನ ವಿಶ್ವಾಸ' ಅನ್ನುವ ಮಾತನ್ನು ಹೇಳ್ತೇನೆ." ಅಂತ ಹೇಳಿದ್ರು.

ಅದ್ರ ಜತೆಗೆ ಅವ್ರ ಕೈಬೆರಳಲ್ಲಿದ್ದ ಉಂಗುರವನ್ನು ತೋರಿಸಿ–

"ನೋಡಿ ನಾನು ಗಣೇಶ ಮೂರ್ತಿ ಇರುವಂಥ ಈ ಉಂಗುರ ಇಟ್ಟುಕೊಂಡೇ ಕ್ಯಾಬಿನೆಟ್ ಮೀಟಿಂಗ್‌ಗೆ ಬೆಳಿಗ್ಗೆ ಹೋಗ್ತೇನೆ" ಅಂತ ಹೇಳಿದ್ರು. ಅವ್ರಲ್ಲಿ ಈ ಭಾವನೆ ಇದ್ದದ್ದು ಬೇರೆ ಸಂದರ್ಭಗಳಲ್ಲಿ ಪ್ರಕಟವಾಗ್ತಿತ್ತೋ ಇಲ್ವೋ ಗೊತ್ತಿಲ್ಲ. ಅಂತೂ ಸಜ್ಜನ, ದೈವಭಕ್ತ, ಆತ್ಮಸಾಕ್ಷಿಗೆ ಸರಿಯಾಗಿ ನಡಕೊಳ್ಳುವ ವ್ಯಕ್ತಿ ಎಂಬುದಕ್ಕೆ ಈ ಸಂದರ್ಭ ಸಾಕ್ಷಿ ಎಂಬುದು ನನ್ನ ಭಾವನೆ.

ಇದೇ ರೀತಿಯಲ್ಲಿ ನಾನು ಕಂಡ ಹಾಗೆ, ಬಡವರ ಬಗ್ಗೆ, ವಿಶೇಷವಾಗಿ ಸಮಾಜದ ಎಲ್ಲ ವರ್ಗಗಳ, ಕೃಷಿಕರು, ಮಧ್ಯಮವರ್ಗದ ರೈತರು ಮತ್ತು ವ್ಯಾಪಾರಿಗಳು ಇವ್ರ ಬಗ್ಗೆ ಅವ್ರಿಗೆ ತೀವ್ರವಾದಂಥ ಕಾಳಜಿ ಇತ್ತು. ಇವುಗಳನ್ನ ಅನೇಕ ಬಾರಿ ಅವ್ರು ವ್ಯಕ್ತ ಪಡಿಸಿದ್ದು ಇತ್ತು. ಯಾಕಂದ್ರೆ ಇವ್ರು ಡಾ.ಟಿ.ಎಂ.ಎ.ಪೈಯವರ ಗರಡಿಯಲ್ಲಿ ಬೆಳೆದವ್ರು. 'ಪಿಗ್ಮಿ'ಯ ಮೂಲಕ ಹಣ ಸಂಗ್ರಹಿಸಿ ಬ್ಯಾಂಕನ್ನು ಕಟ್ಟಿದವರು ಮತ್ತು ಜನತೆಗೆ ಅದ್ರಿಂದ ಅನೇಕ ಲಾಭಗಳನ್ನು ಅಥ್ವಾ ಪ್ರಯೋಜನಗಳನ್ನು ಕೊಡ್ಲಿಕ್ಕೆ ಹೊರಟವರು. ಅಂತಹ ವ್ಯಕ್ತಿಗೆ ಸಹಜವಾಗಿ ಇಂಥ ದೃಷ್ಟಿ ಇತ್ತು.

## ಗಣಪತಿ ಅಂದ್ರೆ ಜೀವ

ಸಹಕಾರೀ ಕ್ಷೇತ್ರದಲ್ಲಿ ಅವ್ರು ಏನಾದರೂ ವಿಶೇಷವಾಗಿ ಸೇವೆ ಮಾಡಿದ್ರೆ ಈ ಜೀವನ ದೃಷ್ಟಿ ಕಾರಣ ಅಂತ ನಾನು ವೈಯಕ್ತಿಕವಾಗಿ ತಿಳಕೊಂಡಿದ್ದೇನೆ. ಹಾಗಾಗಿ ಅವ್ರ ಮನೆಯಲ್ಲಿ ಅವ್ರು ಅನೇಕ ಗಣಪತಿಯ ಮೂರ್ತಿಗಳನ್ನು ಸಂಗ್ರಹಿಸಿ ಇಟ್ಟಿದ್ದನ್ನು ನಾನು ಕಂಡಿದ್ದೇನೆ. ಮತ್ತು ಅವ್ರ ಶ್ರೀಮತಿ, ವಸಂತಿ ಪೈಯವ್ರು ಕೂಡಾ ಹೇಳಿದ್ರು, "ನಮ್ಮಲ್ಲಿ ಅಪಾರವಾದ ಗಣೇಶ ಮೂರ್ತಿಗಳ ಸಂಗ್ರಹ ಇದೆ. ನಮ್ಮ ಯಜಮಾನ್ರು, ಎಲ್ಲಿ ಹೋದ್ರೂ ಗಣೇಶನನ್ನು ಕಂಡ್ರೆ, ಬಹಳ ಭಕ್ತಿಯಿಂದ ಅದನ್ನು ಸಂಗ್ರಹಿಸಿಕೊಂಡು ಮನೆಯಲ್ಲಿ ಇಟ್ಟುಕೊಳ್ತಾರೆ" ಅಂತ್ಹೇಳಿ. ಹಾಗಂದ್ರೆ, ನಂಬಿಕೆಗೂ ವ್ಯವಹಾರಕ್ಕೂ ಇಷ್ಟೊಂದು ಹತ್ತಿರವಾಗಿದ್ದ ಅವರ ದೃಷ್ಟಿ ಅಂತಂದ್ರೆ ಒಂದು ಕಡೆ ಸಮಾಜದ ಮೇಲೆ ನಿಜವಾದ ಕಳಕಳಿ, ಅದ್ರ ಜತೆಗೆ ದೈವ ಭಕ್ತಿಯಲ್ಲಿ ಅಷ್ಟೇ ತೀವ್ರವಾದ ಕಳಕಳಿ – ಇದನ್ನು ಎರಡನ್ನೂ ಸಮ್ಮಿಳನಗೊಳಿಸಿದ್ರೆ, 'ಭಕ್ತಿ ನನ್ನ ಆತ್ಮಶಕ್ತಿಯನ್ನು ಹೆಚ್ಚಿಸುತ್ತದೆ, ಅದ್ರ ಜತೆಗೆ ನಾನು ಮಾಡಬೇಕಾದ ಕರ್ತವ್ಯಕ್ಕೆ ಅದು ಪ್ರೇರಣೆ ಕೊಡುತ್ತದೆ ಅಂತ.



ಡಾ. ಎಸ್. ಬೇಕಲ್ ಅವರ ಮೆಟಲ್ ರಿಲೀಫ್ ಕೃತಿ

## ಚುರುಕಾದ ಓಡಾಟ

ಇನ್ನೊಂದು ಮಾತು ನಾನು ಹೇಳುವುದಾದ್ರೆ, ಅತ್ಯಂತ ವ್ಯಸ್ತವಾಗಿದ್ದಂಥ ವ್ಯಕ್ತಿ ಅವ್ರು. ಯಾವಾಗ ನೋಡಿದ್ರೂ ಚುರುಕಾದ ಓಡಾಟ, ಚುರುಕಾದ ಮಾತು ಅವ್ರ ಶಕ್ತಿ. ಅವ್ರು ಕೊನೆಯವರೆಗೂ, ಅವ್ರಿಗೆ ವೈಯಕ್ತಿಕವಾಗಿ, ಅನಾರೋಗ್ಯಗಳು ಕೆಲವೊಂದು ಇದ್ರೂ ಕೂಡಾ, ಪ್ರತಿಯೊಂದು ವ್ಯವಹಾರದಲ್ಲಿ, ಓಡಾಟದಲ್ಲಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದ್ರಲ್ಲಿ, ಸರಕಾರೀ ವ್ಯವಹಾರಗಳಲ್ಲಿ ಎಲ್ಲದರಲ್ಲೂ ಅತ್ಯಂತ ಚುರುಕಾಗಿ ಕೆಲಸ ಕಾರ್ಯ ಮಾಡಿದಂಥ ವ್ಯಕ್ತಿ ಅವ್ರು. ಈ ಚುರುಕುತನ ಮತ್ತು ಬಹಳ ತೀವ್ರವಾದ ಜ್ಞಾಪಕ ಶಕ್ತಿ ಮತ್ತು ಯಾವುದೇ ಒಂದು ವಿಷಯದ ಬಗ್ಗೆ ಆಳವಾದ ಅಧ್ಯಯನ ಮಾಡಿ ನಿರ್ಣಯಕೊಡಬಲ್ಲ ಶಕ್ತಿ ನನಗೆ ಯಾವಾಗ್ಲೂ ಆಶ್ಚರ್ಯವನ್ನುಂಟು ಮಾಡ್ತಾ ಇತ್ತು.

## ಅಪಾರವಾದ ಸ್ಮರಣ ಶಕ್ತಿ

ಇದರ ಜತೆಗೆ ಎಲ್ಲರಿಗೂ ಗೊತ್ತಿದ್ದ ಹಾಗೆ, ಸ್ಟೇಟಿಸ್ಟಿಕ್ಸ್, ಅಂಕಿ ಅಂಶಗಳು, ಯಾವುದೇ ಒಂದು ವಿಷಯವನ್ನು ಎತ್ತಿದ್ರೆ, ಅದರ ಅಂಕೆ ಸಂಖ್ಯೆಗಳ ಮಾಹಿತಿ ನಾಲಗೆಯ ತುದಿಯಲ್ಲಿರ್ತಾ ಇತ್ತು. ಅವರ ಒಂದು ಭಾಷಣವನ್ನು ಕೇಳಿದ್ರೆ, ಸಂಖ್ಯೆಗಳು ಓತಪ್ರೋತವಾಗಿ ಹರಿದು ಬರ್ತಿತ್ತು. ಅವರ ಸ್ಮರಣ ಶಕ್ತಿ, ಜತೆಗೆ ಆ ವಿಷಯದ ಬಗ್ಗೆ ಅಧಿಕಾರಯುತವಾಗಿ ಮಾತನಾಡುವ ಕ್ಷಮತೆ, ಅದರೊಂದಿಗೆ ಅದರ ಹಿಂದಿನ ದಾಖಲಾತಿಯ ಜತೆಗೆ ಇಂದಿನ ವಸ್ತುಸ್ಥಿತಿ ಮತ್ತು ಮುಂದೆ ನಾವು ನಡೆದುಕೊಳ್ಳಬೇಕಾದ ರೀತಿ ಇವು ಮೂರನ್ನು ಕೂಡ ಅವ್ರು ಗಮನಿಸಿ ಮಾತಾಡುತ್ತಿದ್ದುದ್ದನ್ನು ನೋಡಿದ್ರೆ, ಆ ಮಾತುಗಳನ್ನು ಕೇಳುವುದೇ ದೊಡ್ಡ ಸಂತೋಷದ ವಿಷಯ.

## ಅದ್ಭುತ ವಾಗ್ಮಿ

ಅನೇಕ ಸಲ ಕೇಳಿದ್ದೆ, ಅವ್ರು ಏನಾದ್ರೂ ಮಣಿಪಾಲದಲ್ಲೋ ಅಥ್ವಾ ಬೆಂಗಳೂರಿನಲ್ಲೋ ಇನ್ಯಾವುದೇ ಭಾರತದ ಕೇಂದ್ರಗಳಲ್ಲೋ ಅವರ ಪ್ರವಚನ ಇದೆ ಅಥ್ವಾ ಭಾಷಣ ಇದೆ ಅಂದ್ರೆ ಬಹಳ ಜನ ಅದನ್ನು ಕೇಳಬೇಕಂತಲೇ ಹೋಗ್ತಾ ಇದ್ರು. ಅಂದ್ರೆ, ಭಾಷಣ ಅನ್ನುವಂಥದ್ದು ಕೇವಲ



ಆಕರ್ಷಣೆಯ ವಿಷಯವೂ ಅಲ್ಲ, ಅದರ ಜತೆಗೆ, ಆ ಮಾತನಾಡುವ ರೀತಿ, ವಿಷಯ ಮಂಡನೆಯ ರೀತಿ, ವಿಚಾರಗಳನ್ನು ವಿಸ್ತರಿಸಿ ಅದನ್ನು ಹೇಳುವ ರೀತಿ, ಅದರ ಜತೆಗೆ ಯಾವುದಾದರೂ ಒಂದು ನಿರ್ದಿಷ್ಟವಾದ ಮಾಹಿತಿಯನ್ನು ಕೊಟ್ಟು ಅದಕ್ಕೊಂದು ತೀರ್ಮಾನವನ್ನು ಕೊಡತಕ್ಕಂಥದ್ದು. 'ಇದು ಈ ರೀತಿ ಇದೆ; ಇಂಥಾ ಪರಿಹಾರವೇ ಯೋಗ್ಯ' ಅನ್ನುವಂಥ ಮಾತು, ಅನೇಕ ಸಲ ಅವರ ಭಾಷಣವನ್ನ ಆಕರ್ಷಣೀಯವಾಗಿ ಮಾಡ್ತಿತ್ತು. ಅವ್ರ ಧ್ವನಿಯು ಕೂಡಾ ಆಕರ್ಷಣೀಯವಾಗಿತ್ತು. ಅವರ ಭಾಷೆ, ಇಂಗ್ಲಿಷ್ ಮೇಲಿನ ಹಿಡಿತ, ಅವ್ರ ಧ್ವನಿ ಇವು ಕೂಡಾ ಕೇಳುಗರನ್ನ ಆಕರ್ಷಣೆಗೆ ಒಳಪಡಿಸ್ತಾ ಇತ್ತು, ಮಂತ್ರಮುಗ್ಧರನ್ನಾಗಿ ಮಾಡ್ತಾ ಇತ್ತು.

## ಹಾಸ್ಯ ಪ್ರವೃತ್ತಿ

ಹೀಗೆ ಅವರ ಮತ್ತು ನಮ್ಮ ಕ್ಷೇತ್ರದ ಸಂಬಂಧ ಬಹಳ ಆತ್ಮೀಯವಾಗಿತ್ತು. ಒಂದು ಸಾರಿ ಡಾ.ಟಿ.ಎಂ.ಎ.ಪೈ ಅವರು, ಮಣಿಪಾಲ್ ಇಂಡಸ್ಟ್ರೀಸ್‌ನ ಮೀಟಿಂಗನ್ನು ಧರ್ಮಸ್ಥಳದಲ್ಲಿ ಏರ್ಪಡಿಸಿದ್ರು. ನಾನು ಆ ಸಂಸ್ಥೆಯ ನಿರ್ದೇಶಕನಾಗಿದ್ದೆ. ಅನೇಕ ಬಾರಿ ಮೀಟಿಂಗ್‌ಗಳಿಗೆ ನನಗೆ ಹೋಗ್ಲಿಕ್ಕೆ ಆಗಿರ್ಲಿಲ್ಲ. ಟಿ.ಎ.ಪೈಯವರು ಕೊಂಚ ಕಾಲ ಅದರ ಅಧ್ಯಕ್ಷರಾಗಿದ್ರು. ಅವ್ರು 'ಮುಂದಿನ ಮೀಟಿಂಗನ್ನು ಧರ್ಮಸ್ಥಳದಲ್ಲೇ ಇಟ್ಟುಕೊಂಡು ಬಿಡಾಣ' ಅಂತ ಹೇಳಿದ್ರು. ಇಲ್ಲಿಗೆ ಬಂದು ಮೀಟಿಂಗ್ ಮಾಡುವಾಗ, 'ನೋಡಿ, ಮಹಮ್ಮದ ಬೆಟ್ಟದ ಬಳಿಗೆ ಹೋಗದಿದ್ರೆ, ಬೆಟ್ಟವೇ ಮಹಮ್ಮದನ ಬಳಿಗೆ ಹೋಗ್ತದೆ' ಅನ್ನುವಂಥ ಇಂಗ್ಲಿಷ್ ಗಾದೆ ಇದೆ. ಹಾಗೆ, ನೀವು ಮೀಟಿಂಗ್‌ಗೆ ಬರದಿದ್ರೆ ಏನಾಯ್ತು?, ನಾವೇ ನಿಮ್ಮತ್ರ ಬಂದು ಮೀಟಿಂಗ್ ಮಾಡ್ತಾ ಇದ್ದೇವೆ ಅನ್ನುವ ಮಾತನ್ನು ಕೂಡಾ ಅವ್ರು ಹೇಳಿದ್ರು. ಅಷ್ಟು ಪ್ರೀತಿ, ವಿಶ್ವಾಸ ಮತ್ತು ನಮ್ಮ ಕ್ಷೇತ್ರದ ಮೇಲೆ ಗೌರವ ಅವ್ರಿಗಿತ್ತು. ಒಳ್ಳೆಯ ಸ್ನೇಹಿತ್ರೂ ಆಗಿದ್ರು, ಅದರ ಜತೆಗೆ ನಮ್ಮ ಭಕ್ತರೂ ಅಭಿಮಾನಿಗಳೂ ಆಗಿದ್ರು. ಅವ್ರ ಸ್ಮರಣೆ ಮಾಡೋದು, ಮತ್ತೆ ಈವೊತ್ತು ಈ ಸಂದರ್ಶನದ ಮೂಲಕ ಅವ್ರನ್ನ ಸ್ಮರಿಸಿಕೊಂಡದ್ದು ನನಗೆ ತುಂಬ ಸಂತೋಷವನ್ನುಂಟು ಮಾಡಿದೆ.

***

# ಅನುಪಮ ವ್ಯಕ್ತಿ

**–ಡಾ. ಪಾಟೀಲ ಪುಟ್ಟಪ್ಪ**



**ಟಿ.ಎ.ಪೈಯವರಿಗೆ ಪಾಟೀಲ ಪುಟ್ಟಪ್ಪನವರಿಂದ ಉಡುಗೊರೆ**

ಜೀವನದಲ್ಲಿ ಬಹಳ ಎತ್ತರದ ಸ್ಥಾನಗಳನ್ನು ಸ್ವಂತ ಸಾಮರ್ಥ್ಯದಿಂದ ಸಂಪಾದಿಸಿದ್ದ ಟಿ.ಎ.ಪೈಗಳು ಅದ್ಭುತ ಶಕ್ತಿಗಳ ಅನುಪಮ ವ್ಯಕ್ತಿಯಾಗಿದ್ದರು. ವ್ಯಕ್ತಿಗಳನ್ನು, ಸಂಸ್ಥೆಗಳನ್ನು, ದೇಶವನ್ನು ಕಟ್ಟುವ ಅನ್ಯಾದೃಶ ಪರಿಣತಿ ಅವರಲ್ಲಿತ್ತು. ಮಾಧವ ಪೈಗಳು ಮತ್ತು ತೋನ್ಸೆ ಅನಂತ ಪೈಗಳು ಸಿಂಡಿಕೇಟ್ ಬ್ಯಾಂಕಿನ ಮಣಿಪಾಲದ ಕಣ್ಣು, ತಲೆ ಹಾಗೂ ಹೃದಯಗಳೆನಿಸಿದ್ದರು. ಟಿ.ಎ.ಪೈಗಳು ತಮ್ಮ ಹೃದಯದಲ್ಲಿ ಮಾನವ ಅಂತಃಕರಣದ ಹಾಲನ್ನು ತುಂಬಿಕೊಂಡು ಬೆಳೆದಿದ್ದರು. ಅವರು ತಮ್ಮ ಮನೆಯ 'ಅಮೂಲ್ಯ ರತ್ನ'ವೆಂದು ಡಾ.ಟಿ.ಎಂ.ಎ.ಪೈಗಳು ಹೇಳುತ್ತಿದ್ದರು. ಅವರು ತಮ್ಮ ತಂದೆ ಉಪೇಂದ್ರ ಪೈ, ಚಿಕ್ಕಪ್ಪ ಡಾ. ಟಿ.ಎಂ.ಎ.ಪೈ ಹಾಗೂ ಡಾ.ಎ.ವಿ.ಬಾಳಿಗಾ ಅವರ ನಿರ್ಮಾಣವಾಗಿದ್ದಾರೆ.

ತಮ್ಮ ಸಾರ್ವಜನಿಕ ಜೀವನದ ಮೂವತ್ತು ವರ್ಷಗಳಲ್ಲಿ ಅವರು ಅನೇಕ ಹುದ್ದೆಗಳಲ್ಲಿ, ಯಾರೊಬ್ಬರಿಂದಲೂ ನಿರ್ವಹಿಸುವುದು ಸಾಧ್ಯವಿಲ್ಲ ಎಂಬಷ್ಟು ಶ್ರೇಷ್ಠತೆಯಿಂದ ನಿರ್ವಹಿಸಿದ್ದರು.

## ಅವರಂಥ ಬ್ಯಾಂಕರ್ ಬೇರೆ ಇಲ್ಲ!

ಅವರು ಬ್ಯಾಂಕರರಾಗಿದ್ದರು. ಆದರೆ ಅವರಂಥ ಬ್ಯಾಂಕರರು ಭಾರತದಲ್ಲಿ ಬೇರೆ ಯಾರೊಬ್ಬರೂ ಇಲ್ಲವೆನ್ನುವ ಪ್ರತೀತಿಯನ್ನು ನಿರ್ಮಿಸಿದ್ದರು. ಅವರಂತೆ ಆ ಹುದ್ದೆಗಳನ್ನು ನಿರ್ವಹಿಸುವವರು ಯಾರೂ ಇಲ್ಲವೆನ್ನುವ ಇತಿಹಾಸವನ್ನು ತಮ್ಮ ಹಿಂದೆ ಅವರು ಬಿಟ್ಟು ಬಂದರು.

ಬಡವರ ಬಗೆಗೆ, ಬಿದ್ದವರ ಬಗೆಗೆ, ಅವಕಾಶ ಹೀನರ ಬಗೆಗೆ ಅವರ ಹೃದಯದಲ್ಲಿ ಯಾವಾಗಲೂ ಸ್ಥಾನ ಇದ್ದೇ ಇರುತ್ತಿತ್ತು. ಅವರು ತಾವು ದೊಡ್ಡವರೆಂದು ತಿಳಿದುಕೊಳ್ಳದೆ ದೊಡ್ಡ ಕಾರ್ಯಗಳನ್ನು ಮಾಡುತ್ತಿದ್ದರು. ತಮ್ಮ ಸಂಪರ್ಕಕ್ಕೆ ಬಂದವರೆಲ್ಲರಲ್ಲಿ ಅವರು ಹೊಸ ವಿಚಾರಗಳನ್ನು ಹೊಸ ಉತ್ಸಾಹವನ್ನು ತುಂಬಿ ಸಮಸ್ಯೆಗಳನ್ನು ಬಿಡಿಸುವ ಹೊಸ ದೃಷ್ಟಿಯನ್ನು ತಂದುಕೊಡುತ್ತಿದ್ದರು.

### ಮಾನವೀಯ ಅಂತಃಕರಣ

ಅವರಂಥ ಇನ್ನೊಬ್ಬ ಮನುಷ್ಯ ಸಿಕ್ಕಲಾರ ಎನ್ನುವ ಅಪೂರ್ವತೆ ಇದ್ದಿತು. ಅವರು ಕೇಂದ್ರ ಸರಕಾರದಲ್ಲಿ ಮಹತ್ವದ ಮಂತ್ರಿಗಳಾಗಿದ್ದ ಕಾಲದಲ್ಲಿ ಸ್ವಿಜರ್‌ಲ್ಯಾಂಡಿಗೆ ಹೋಗಿದ್ದರು. ಅವರೊಂದಿಗೆ ಅವರ ಆಪ್ತ ಕಾರ್ಯದರ್ಶಿ ಕೂಡಾ ಇದ್ದರು. ಅಲ್ಲಿಯ ಹೋಟೇಲಿನಲ್ಲಿದ್ದ ಕಾಲದಲ್ಲಿ ಅವರು ತಮ್ಮ ಕೋಣೆಯಿಂದ ಹೊರಬಿದ್ದು ಆ ಹೋಟೇಲಿನ ಸ್ವಾಗತ ಕೋಣೆಗೆ ಬಂದಾಗ ಅವರಿಗೆ ಅಲ್ಲಿ ಅವರ ಆಪ್ತ ಕಾರ್ಯದರ್ಶಿ ಅಸ್ವಸ್ಥರಾಗಿ ಚಡಪಡಿಸುತ್ತಿರುವುದು ಕಂಡಿತು. ಆಗ ರಾತ್ರಿ ಒಂಭತ್ತೂವರೆ ಆಗಿದ್ದಿತು. ಅವರ ಸಹಾಯಕ್ಕೆ ಅಲ್ಲಿ ಯಾರೂ ಇರಲಿಲ್ಲ. ಅವರಿಗೆ ತಕ್ಷಣವೇ ವೈದ್ಯಕೀಯ ಚಿಕಿತ್ಸೆಯ ಅವಶ್ಯಕತೆಯಿದ್ದಿತು.

ಅವರು, ತಾವು ಮಂತ್ರಿಗಳು ಎಂಬುದನ್ನು ಮರೆತು ಮಾನವತೆಯನ್ನು ಮೆರೆದರು. ಆತನನ್ನು ಎತ್ತಿಕೊಂಡು ಹೊರಗಿದ್ದ ತಮ್ಮ ಕಾರಿನವರೆಗೆ ಒಯ್ದು ಕಾರನ್ನು ಬಿಟ್ಟುಕೊಂಡು ವೈದ್ಯರ ಬಳಿಗೆ ಹೋಗಿ ಉಪಚಾರ ಕೊಡಿಸಿದರು. ಆತ ಬದುಕಿದರು. ಮಂತ್ರಿಯಾದವರು ಯಾರು ಈ ಕೆಲಸವನ್ನು ಮಾಡುತ್ತಾರೆ?

## ಅಂಬಾನಿಯವರಿಗೆ ಸಾಲ

ಇಂದು ಅಂಬಾನಿ ಔದ್ಯಮಿಕ ಸಂಸ್ಥೆ 'ರಿಲಯನ್ಸ್' ಭಾರತದಲ್ಲೇ ಬೃಹತ್ತಾಗಿ ಬೆಳೆದಿದೆ. ಆರಂಭದ ದಿನಗಳಲ್ಲಿ ಧೀರೂಭಾಯಿ ಅಂಬಾನಿಯವರಿಗೆ ಸಾಲ ನೀಡಲು ಯಾವ ಬ್ಯಾಂಕಿನವರೂ ಮುಂದೆ ಬರಲಿಲ್ಲ. ಆಗ ಟಿ.ಎ.ಪೈಗಳು ಹಣಕಾಸಿನ ಯಾವ ಶಕ್ತಿಯೂ ಇಲ್ಲದ ಧೀರೂಭಾಯಿಯವರಿಗೆ ನೆರವು ನೀಡಿ ಅವರು ಬೆಳೆಯುವಂತೆ ಅವರಿಗೆ ಬಹುದೊಡ್ಡ ಆಧಾರವಾಗಿ ನಿಂತರು. ಯಾವ ಬ್ಯಾಂಕರನಿಗೂ ಇಲ್ಲದ ದೃಷ್ಟಿ ಟಿ.ಎ.ಪೈಗಳಲ್ಲಿ ಇದ್ದಿತು.

ಅವರು ಜೀವವಿಮಾ ನಿಗಮದ ಅಧ್ಯಕ್ಷರಾಗಿದ್ದ ಕಾಲದಲ್ಲಿ ಅದಕ್ಕೆ ಹೊಸ ದೃಷ್ಟಿಯನ್ನೂ, ಹೊಸ ಕಾರ್ಯಶಕ್ತಿಯನ್ನೂ ತಂದುಕೊಟ್ಟರು. ತಮ್ಮ ಕಛೇರಿಯಿಂದ ಹೊರಬಿದ್ದು ಅವರು ತಮ್ಮ ಕಾರಿನ ಬಳಿ ಬಂದಾಗ ಬಹು ಜರ್ಬಾಗಿ ವೇಷಧರಿಸಿದ ಒಬ್ಬ ಜವಾನ ಬಂದು ಆ ಕಾರಿನ ಬಾಗಿಲು ತೆರೆದ. ಇದನ್ನು ಗಮನಿಸಿದ ಅವರು ತಮ್ಮ ಕಛೇರಿಗೆ ವಾಪಸ್ಸು ಆದಾಗ, ಆ ಜವಾನನು ಬೇರೆ ಏನು ಕೆಲಸ ಮಾಡುತ್ತಾನೆ ಎಂದು ಕೇಳಿದರು. ಅವನು ಅಧ್ಯಕ್ಷರು ಕಾರಿನಿಂದ ಬರುವ ಹೋಗುವುದನ್ನಷ್ಟೇ ನೋಡಿಕೊಳ್ಳುತ್ತಾನೆ ಎಂದರು. 'ಕಾರಿನ ಬಾಗಿಲನ್ನು ತೆರೆಯುವುದನ್ನು ಮುಚ್ಚುವುದನ್ನು ಅಧ್ಯಕ್ಷರು ಸ್ವತಃ ಮಾಡಿಕೊಳ್ಳಬಲ್ಲರು, ಅವನಿಗೆ ಬೇರೆ ಕೆಲಸ ಹಚ್ಚಿರಿ' ಎಂದು ಅವರು ಹೇಳಿದರು.

## ಛೇರ್‌ಮನ್ ಲಿಫ್ಟ್

ಮುಂಬಯಿಯ ಜೀವವಿಮಾ ಕಛೇರಿಗೆ ಹೋದಾಗ ಟಿ.ಎ.ಪೈಗಳು ಅಲ್ಲಿ ಎರಡು ಲಿಫ್ಟ್ ಇರುವುದನ್ನು ಕಂಡರು. ತಾವು ಹೋಗುವ ಲಿಫ್ಟ್‌ನಲ್ಲಿ ಅವರ ವಿನಾ ಬೇರೆ ಯಾರೂ ಇರುತ್ತಿರಲಿಲ್ಲ. ಇನ್ನೊಂದು ಲಿಫ್ಟ್‌ನ ಬಳಿಯಲ್ಲಿ ಜನರು ಸಾಲುಗಟ್ಟಿ ನಿಲ್ಲುತ್ತಿದ್ದರು.

ಈ ವಿಚಿತ್ರವನ್ನು ಕಂಡ ಪೈಗಳು 'ಅವರೇಕೆ ಉದ್ದಕ್ಕೆ ನಿಂತಿದ್ದಾರೆ? ಇಲ್ಲಿ ಬರಬಾರದೆ?' ಎಂದು ತಾವಿದ್ದ ಲಿಫ್ಟ್ ನ ಕಡೆಗೆ ಬೆರಳು ಮಾಡಿ ತೋರಿಸಿದರು. 'ಅದು ಛೇರಮನ್ ಲಿಫ್ಟ್' ಎಂದು ಅಲ್ಲಿಯವರು ಹೇಳಿದರು. ಅವರು ಹೇಳಿದ ಮಾತು ಟಿ.ಎ.ಪೈಗಳಿಗೆ ಭಾರೀ ತಮಾಷೆಯಾಗಿ ಕಂಡಿತು. 'ಛೇರಮನ್‌ರ ಈ ಲಿಫ್ಟ್ ಅವರನ್ನಷ್ಟೇ ಯಾಕೆ ಬೇರೆಯವರನ್ನೂ ಕರೆದೊಯ್ಯಬಲ್ಲುದು' ಎಂದು

ಹೇಳಿದರು. ಅಂದಿನಿಂದ ಥೇರಮನ್‌ರ ಲಿಫ್ಟ್ ಎಲ್ಲರ ಉಪಯೋಗಕ್ಕೂ ಮುಕ್ತವಾಯಿತು.

## ಪರಿಹಾರದ ಮನುಷ್ಯ

ಟಿ.ಎ.ಪೈಗಳು ಸಮಸ್ಯೆಯ ಮನುಷ್ಯರಾಗಿರಲಿಲ್ಲ, ಪರಿಹಾರದ ಮನುಷ್ಯರಾಗಿದ್ದರು. ಅವರೆದುರು ನೀವು ಯಾವುದೇ ಪ್ರಶ್ನೆಯನ್ನು ತೆಗೆದುಕೊಂಡು ಹೋದರೂ ಅದರ ಬಗೆಗೆ ಅವರ ಬಳಿಯಲ್ಲಿ ಪರಿಹಾರ ಇದ್ದೇ ಇರುತ್ತಿತ್ತು. ಅವರು ವಿಳಂಬವನ್ನು ಸಹಿಸುವವರಲ್ಲ. ಹೊಣೆಗಾರಿಕೆಯನ್ನು ಹಾರಿಸಿಕೊಳ್ಳುವುದನ್ನೂ ಸಹಿಸುವವರಲ್ಲ. ಅವರು ಒಂದು ಸಲ ಮುಂಬಯಿಯಲ್ಲಿ ಸಿಂಡಿಕೇಟ್ ಬ್ಯಾಂಕ್‌ನ ಮ್ಯಾನೇಜರುಗಳ ಸಭೆಯನ್ನು ಕರೆದಿದ್ದರು. ಆ ಸಭೆ ತಾಜ್‌ಮಹಲ್ ಹೊಟೇಲಿನಲ್ಲಿ ಸೇರಿದ್ದಿತು. ಸಿಂಡಿಕೇಟ್ ಬ್ಯಾಂಕಿನವರು ವಿದೇಶಗಳಲ್ಲಿ ಓದಬೇಕೆನ್ನುವ ವಿದ್ಯಾರ್ಥಿಗಳಿಗೆ ಸುಲಭ ಬಡ್ಡಿದರದಲ್ಲಿ ಸಾಲಕೊಡುವ ಯೋಜನೆ ಮಾಡಿದ್ದರು. ಆಗ ಒಬ್ಬ ವಿದ್ಯಾರ್ಥಿ ವಿದೇಶೀ ವಿದ್ಯಾಭ್ಯಾಸದ ಸಾಲಕ್ಕೋಸುಗ ಸಿಂಡಿಕೇಟ್ ಬ್ಯಾಂಕಿನ ಮುಂಬಯಿ ಶಾಖೆಗೆ ಅರ್ಜಿ ಹಾಕಿದ್ದ. ವಿದೇಶಕ್ಕೆ ಹೋಗುವ ದಿನಕ್ಕೆ ಒಂದೇ ಒಂದು ದಿನ ಬಾಕಿಯಿದ್ದಿತು. ಆದರೆ ಲೋನ್ ಹಣ ಮಾತ್ರ ಅವನ ಕೈಗೆ ಬಂದಿರಲಿಲ್ಲ. ಆ ಯುವಕ ಆ ಹೊಟೇಲಿನೊಳಗೆ ಹೇಗೋ ನುಗ್ಗಿ ನೇರವಾಗಿ ಪೈಗಳೆದುರೇ ತನ್ನ ತೊಂದರೆಯನ್ನು ತೋಡಿಕೊಂಡ. ಪೈಗಳು ಮುಂಬೈ ಮ್ಯಾನೇಜರನ್ನು ಕರೆದು ಆ ಯುವಕನ ಕೆಲಸವನ್ನು ಅಂದೇ ಮಾಡಿ ತಮಗೆ ವರದಿ ಸಲ್ಲಿಸಬೇಕೆಂದು ತಿಳಿಸಿ ಅಲ್ಲಿಂದ ಕಳಿಸಿಕೊಟ್ಟರು.

ಒಬ್ಬ ತಂದೆ ಪಿ.ಯು.ಸಿ ಆದ ತಮ್ಮ ಮಗನಿಗೆ ಬ್ಯಾಂಕಿನಲ್ಲಿ ಕೆಲಸ ಕೊಡಬೇಕೆಂದು ಕೇಳುತ್ತ ಪೈಗಳ ಬಳಿಗೆ ಹೋದರು. ಪೈಗಳು ಆ ಯುವಕನ ಪಿ.ಯು.ಸಿ ಅಂಕಗಳನ್ನು ನೋಡಿದರು. ಅವನು ತನ್ನ ಪರೀಕ್ಷೆಯಲ್ಲಿ ನೂರಕ್ಕೆ ತೊಂಭತ್ತಕ್ಕಿಂತ ಹೆಚ್ಚು ಅಂಕಗಳನ್ನು ಪಡೆದಿದ್ದನು. 'ಅವನನ್ನು ಮುಂದಕ್ಕೆ ಓದಿಸಿ' ಎಂದು ಪೈಗಳು ಹೇಳಿದರು. 'ಓದಿಸುವ ಶಕ್ತಿ ತನ್ನಲಿಲ್ಲ' ಎಂದು ಆತ ತಿಳಿಸಿದಾಗ, ಪೈಗಳು ಅವನ ಓದಿನ ಖರ್ಚು ತಾವೇ ವಹಿಸಿಕೊಂಡರು.

## 20ರಲ್ಲಿ 16ಅಂಶ ಪೈಗಳದ್ದು

ಪೈಗಳು ಕೇಂದ್ರದಲ್ಲಿ ಇಂದಿರಾ ಸಂಪುಟದಲ್ಲಿದ್ದಾಗ ಭಾರತವನ್ನು ಅಭಿವೃದ್ಧಿಗೊಳಿಸುವ ಸಲಹೆ ಸೂಚನೆಗಳು ಇಂದಿರಾಗೆ ಬೇಕಾಗಿದ್ದವು. ಅವರು ತಮ್ಮ ಸಂಪುಟದ ಮಂತ್ರಿಗಳನ್ನು ಕೇಳಿದರು. ಇಂದಿರಾ ಗಾಂಧಿಯವರು ಅವರೆಲ್ಲ ಮುಂದೆಮಾಡಿದ ಸೂಚನೆಗಳಲ್ಲಿ ಇಪ್ಪತ್ತು ಆಯ್ಕೆ ಮಾಡಿಕೊಂಡರು. ಅವರು ಆಯ್ಕೆ ಮಾಡಿಕೊಂಡ 'ಇಪ್ಪತ್ತು ಅಂಶ'ಗಳಲ್ಲಿ ಹದಿನಾರನ್ನು ಪೈಗಳೇ ಸೂಚಿಸಿದ್ದರು. ಪೈಗಳು ಮಾಡುತ್ತಿದ್ದ ಕಾರ್ಯದಲ್ಲಿ ನಾವೀನ್ಯತೆ ಇರುತ್ತಿತ್ತು. ಕೃಷಿಕರಿಗೆ ಬ್ಯಾಂಕುಗಳು ಆರ್ಥಿಕ ನೆರವನ್ನು ನೀಡುತ್ತಿರಲಿಲ್ಲ. ರಿಸರ್ವ್ ಬ್ಯಾಂಕು ಅದಕ್ಕೆ ವಿರೋಧವಾಗಿತ್ತು. ಆ ವಿರೋಧವಿದ್ದರೂ ಅದನ್ನು ಲೆಕ್ಕಿಸದೆ ರೈತರಿಗೆ ನೆರವು ನೀಡಿ ಭಾರತ ಸರಕಾರಕ್ಕೆ ಅವರು ದಾರಿಯನ್ನು ತೋರಿಸಿದರು. ಟಿ.ಎ.ಪೈಗಳಿಂದ ಉಪಕಾರ ಪಡೆದ ಜನರು ಸಾವಿರಗಟ್ಟಲೆ ಇದ್ದಾರೆ. ಆದರೆ ನೆನೆಯುವ ಕೃತಜ್ಞ ಜನ ಇಲ್ಲ.

## ಟಿ.ಎ.ಪೈ ಮೊದಲು

ದೇವರು ಮತ್ತು ಟಿ.ಎ.ಪೈಯವರು ಮಧ್ಯರಾತ್ರಿಯಲ್ಲಿ ಒಟ್ಟಿಗೆ ಬಂದು ನನ್ನ ಮನೆ ಬಾಗಿಲು ತಟ್ಟಿದರೆ ನಾನು ಟಿ.ಎ.ಪೈ ಅವರನ್ನು ಮೊದಲಿಗೆ ಒಳಗೆ ಕರೆಯುತ್ತೇನೆ. ನಲುವತ್ತು ವರ್ಷಗಳ ಹಿಂದೆ ಪೈಗಳು ಇದ್ದರೆಂದು ನಾನು ಇಂದು ಬದುಕಿ ಉಳಿದಿದ್ದೇನೆ.

***

# ಟಿ.ಎ.ಪೈ – ನಾನು ಕಂಡಂತೆ

–ಡಾ. ಎಂ.ವಿ.ಕಾಮತ್



ಡಾ. ಎಂ.ವಿ.ಕಾಮತ್

ಪ್ರಸಾರ ಭಾರತಿಯ ವಿಶ್ರಾಂತ ಅಧ್ಯಕ್ಷರು ಹಾಗೂ ವಿಶ್ವಮಾನ್ಯ ಪತ್ರಕರ್ತರು

ನಾನು ಟಿ.ಎ.ಪೈಯವರನ್ನು ಬಹು ಹತ್ತಿರದಿಂದ ಕಂಡವನು. ನಾವು ಒಂದೇ ಪೇಟೆಯಲ್ಲಿ ಹುಟ್ಟಿ ಬೆಳೆದದ್ದು. ಒಂದೇ ಶಾಲೆಗೂ ಹೋಗಿದ್ದು. ಅವರು ನನಗೆ ನಾಲ್ಕೇ ತಿಂಗಳು ಚಿಕ್ಕವರು. ನಾನೇನೋ ಶಾಲೆಯಲ್ಲಿ ಒಂದು ತರಗತಿ ಮುಂದಿದ್ದೆ. ಅವರ ಮೊದಲ ಹೆಂಡತಿ ಪ್ರೇಮಾ ನನಗೆ ಅತ್ತಿಗೆಯಾಗಬೇಕು. ನಾವು ಎಲ್ಲ ಗೆಳೆಯರಾಗಿದ್ದೆವು.

ನಾವು ಅವರನ್ನು ಕರೆಯುತ್ತಿದ್ದುದು ಬಾಲಕೃಷ್ಣ ಅಂತ. ಕೊನೆಗೆ ಅವರು ತಮಗೆ ಔಪಚಾರಿಕವಾಗಿ ಇಟ್ಟ 'ಅನಂತ' ಎಂಬ ಹೆಸರನ್ನೇ ಗಟ್ಟಿ ಮಾಡಿಕೊಂಡರು. ಟಿ.ಎ.ಪೈ ಅದೇ ಅವರ ಖಾಯಂ ಹೆಸರಾಯಿತು. ಮನೆಮಂದಿಯೂ ಅವರನ್ನು ಟಿ.ಎ.ಪೈ ಎಂದೇ ಕರೆದರು.

## ಸಾಧಿಸುವ ಛಲ

ಅನಂತ ಯಾವಾಗಲೂ ಏನನ್ನಾದರೂ ಸಾಧಿಸಬೇಕೆಂಬ ಛಲವಿದ್ದವರು. ಕನುಸುಗಾರರಾಗಿದ್ದರೂ ಕಾರ್ಯಸಾಧಿಸುವ ಹಟವಿದ್ದವರು. ನಾನು ಅವರನ್ನು ಅಷ್ಟು ಹತ್ತಿರ ಬಲ್ಲವನಾದರೂ ಅವರ ಸಾಧನೆಗಳ ಸಂಖ್ಯೆ ಮತ್ತು ಆ ಸಾಧನೆಗಳ ಹಿರಿಮೆಯನ್ನು ಗಮನಿಸಿದಾಗ ನನಗೆ ಮಹದಾಶ್ಚರ್ಯವಾಗುತ್ತದೆ. ಅವರು ದೊಡ್ಡ ಮಾತುಗಾರ. ಅವರ ಜೊತೆ ಮಾತುಕತೆ ಅಂದರೆ ಒಮ್ಮುಖದ ಮಾರ್ಗ.

ಅವರು ಮಾತನಾಡುವುದು ನಾವು ಕೇಳುವುದು. ಆದರೆ ಅದು ಬರೀ ಕಾಡು ಹರಟೆಯಲ್ಲ;ಬರೀ ಲೋಕಾಭಿರಾಮವಾಗಿ ಅಲ್ಲ. ಅವರು ಹೊಸ ಯೋಚನೆಗಳ, ಹೊಸ ಚಿಂತನೆಗಳ, ಹೊಸ ನಂಬಿಕೆಗಳ ಬಗ್ಗೆ, ಅಪರೂಪಕ್ಕೊಮ್ಮೆ ಹಾಸ್ಯ ಚಟಾಕಿ ಹಾರಿಸುತ್ತಿದ್ದುದೂ ಇರುತ್ತಿತ್ತು. ಎಂದೂ ತಮ್ಮನ್ನು ಹೊಗಳಿ ಅಟ್ಟಕ್ಕೆ ಏರಿಸಿಕೊಂಡವರಲ್ಲ.

## ಉದಾರ ಅಂತಃಕರಣ

ಅವರು ಸ್ನೇಹ ಜೀವಿ. ಭಾವುಕ, ವಿಚಾರಶೀಲ ಹಾಗೂ ಪರೋಪಕಾರಿ. ತಮ್ಮ ಹಳೆಯ ಉಪಾಧ್ಯಾಯರಿಗೆ ಅಥವಾ ತೊಂದರೆಯಲ್ಲಿದ್ದ ಯಾರಿಗಾದರೂ ಅವರು ನೀಡುತ್ತಿದ್ದ ಸಹಾಯಹಸ್ತದ ಉದಾಹರಣೆಗಳು ಅನೇಕ. ಒಮ್ಮೆ ಬಹಳ ಹಿಂದೆ ನಿವೃತ್ತರಾದ ಅವರ ಹಿಂದಿನ ಉಪಾಧ್ಯಾಯರೊಬ್ಬರು ಆರ್ಥಿಕ ಮುಗ್ಗಟ್ಟಿನಲ್ಲಿರುವ ವಿಚಾರ ಅವರಿಗೆ ತಿಳಿಯಿತು. ಅವರು ಕೇಳದೆ ಅವರಿಗೆ ತಿಳಿಯದಂತೆ ಪ್ರತಿ ತಿಂಗಳೂ ಅವರಿಗೆ ಸ್ವಲ್ಪ ಹಣ ಸಂದಾಯವಾಗುವಂತೆ ಟಿ.ಎ.ಪೈ ವ್ಯವಸ್ಥೆ ಮಾಡಿದರು. ಈ ವ್ಯವಸ್ಥೆ ಆ ಉಪಾಧ್ಯಾಯರ ಮರಣಾನಂತರವೂ ಮುಂದುವರಿದು ಅವರ ಪತ್ನಿಗೆ ಪಾವತಿಯಾಗುತ್ತಿತ್ತು. ಮಾಜಿ ಸಂಸದರೊಬ್ಬರು ಆರ್ಥಿಕ ಸಂಕಷ್ಟದಲ್ಲಿದ್ದಾಗ ತಮ್ಮ ವೈಯಕ್ತಿಕ ಖಾತೆಯಿಂದ ಅವರಿಗೆ ನೆರವು ನೀಡಿದರು. ಕರ್ನಾಟಕ- ಆಂಧ್ರ ಪ್ರದೇಶಗಳಲ್ಲಿ ನೆರೆ ಬಂದಾಗ ಸಂಸತ್ ಸದಸ್ಯರಾಗಿ ತಾವು ಪಡೆಯುತ್ತಿದ್ದ ಒಂದು ವರ್ಷದ ಸಂಬಳವನ್ನು ನೆರೆ ಸಂತ್ರಸ್ತರ ನಿಧಿಗೆ ದೇಣಿಗೆ ಕೊಟ್ಟರು.

ಟಿ.ಎ.ಪೈ ತನ್ನವರ ಬಗ್ಗೆ ತುಂಬ ಕಾಳಜಿ ವಹಿಸುತ್ತಿದ್ದರು. ಅವರ ಸಹಾಯಕರಾಗಿದ್ದ ಸಂಪತ್ ಒಂದು ಘಟನೆಯನ್ನು ನೆನಪಿಸಿಕೊಳ್ಳುತ್ತಾರೆ. ಒಮ್ಮೆ ಯುರೋಪು ಪ್ರವಾಸದಲ್ಲಿದ್ದಾಗ- ದಿನವಿಡೀ ಕೆಲಸದ ಒತ್ತಡದಿಂದಾಗಿ ಸಂಪತ್ ಕುರ್ಚಿಯಲ್ಲಿ ಕುಳಿತಲ್ಲೇ ಕುಸಿದುಬಿಟ್ಟಿದ್ದರು. ಟಿ.ಎ.ಪೈ ತಮ್ಮ ಆಪ್ತರು ಏನು ಮಾಡುತ್ತಿದ್ದಾರೆಂದು ಇಣುಕಿ



**ಸ್ಪೆಶಲ್ ಅಸಿಸ್ಟೆಂಟ್ ಆರ್.ಸಂಪತ್ ಜತೆ ಶ್ರೀಟಿ.ಎ.ಪೈ**

ನೋಡುತ್ತಾರೆ– ಸಂಪತ್ ಕುರ್ಚಿಯಲ್ಲೇ ಕುಸಿದುಬಿಟ್ಟಿದ್ದಾರೆ! ಟಿ.ಎ.ಪೈ ಮೆಲ್ಲನೆ ತಮ್ಮ ಸಹಾಯಕರ ಬೂಟುಗಳನ್ನು ಕಳಚಿ, ಟೈಗಳನ್ನು ಸಡಿಲಿಸಿ, ಹೊರಕೋಟನ್ನು ಕಳಚಿ ಅವರನ್ನೆತ್ತಿ ಹಾಸಿಗೆಯಲ್ಲಿ ಮಲಗಿಸಿದರು. ಎಚ್ಚರಾದಾಗ ಅವರಿಗೆ ಬೇಕಾದ ನೀರು, ಔಷಧಗಳು ಕೂಡಲೇ ದೊರೆಯುವಂತೆ ಬದಿಯಲ್ಲಿ ಇರಿಸಿದರು. 'ಯಾವ ಬಾಸ್ ತಾನೇ ತನ್ನ ಯಃಕಶ್ಚಿತ್ ಸಹಾಯಕನಿಗೆ ಹೀಗೆ ಮಾಡಲು ಸಾಧ್ಯ?' ಎಂದು ಸಂಪತ್ ಕೇಳ್ತಾರೆ.

## ಕರುಣಾ ಮೂರ್ತಿ


ರೇಲ್ವೇ ಸಚಿವರಾಗಿ ರಾಷ್ಟ್ರಾಧ್ಯಕ್ಷ ವಿ.ವಿ. ಗಿರಿ ಅವರಿಂದ ಪ್ರಮಾಣ ವಚನ

ಒಂದು ಕಾಲದಲ್ಲಿ ಅಧಿಕಾರದಲ್ಲಿದ್ದು ಅದನ್ನು ಕಳಕೊಂಡವರ ಬಗ್ಗೂ ಅನಂತ್‌ಗೆ ಸ್ವಲ್ಪ ಮಟ್ಟಿನ ಸಹಾನುಭೂತಿ ಇತ್ತು. ಜನತಾ ಪಾರ್ಟಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಾಗ ಮಾಜಿ ರಾಷ್ಟ್ರಪತಿ ವಿ.ವಿ.ಗಿರಿ ಅವರಿಗೆ ಒದಗಿಸಲಾಗಿದ್ದ ಎ.ಸಿ. ರೈಲ್ವೆ ಪಾಸನ್ನು ಹಿಂತೆಗೆದುಕೊಂಡಿತ್ತು.

ಅನಂತ ಪೈ ರೈಲ್ವೆ ಮಂತ್ರಿಯಾದೊಡನೆ ಈ ಸವಲತ್ತನ್ನು ಮರಳಿ ಒದಗಿಸಿದ್ದಲ್ಲದೆ ಗಿರಿ ಅವರ ಸಹಾಯಕನಿಗೂ ರೈಲ್ವೆ ಪಾಸು ಒದಗಿಸಿ ಅದರ ಕುರಿತು ಮಾಜಿ ಅಧ್ಯಕ್ಷರಿಗೆ ಸ್ವತಃ ಟೆಲಿಫೋನ್ ಮುಖಾಂತರ ವಿಷಯವನ್ನು ತಿಳಿಸಿದರು. ಗಿರಿಯವರಿಗೆ ಇದೊಂದು ವಿಶೇಷ ಹೃದಯಸ್ಪರ್ಶಿ ನಡವಳಿಕೆ ಆಯಿತು.

ರೈಲ್ವೆ ಉದ್ಯೋಗಿಗಳಿಗೆ ಬೋನಸ್ ಕೊಡುವ ನಿರ್ಧಾರವಾಗಿ ಅದರ ಕುರಿತು ಮೊದಲ ಮಾಹಿತಿಯನ್ನು ಗಿರಿಯವರಿಗೆ ತಿಳಿಸುವ ಸೌಜನ್ಯವನ್ನು ಟಿ.ಎ.ಪೈ ತೋರಿಸಿದರು. ಗಿರಿ ಅವರು ಹಿಂದೆ ರೈಲ್ವೆ ಯೂನಿಯನ್‌ಗಳೊಂದಿಗೆ ಸಂಬಂಧವುಳ್ಳವರಾಗಿದ್ದರಿಂದ ಅವರಿಗೆ ಈ ಮಾಹಿತಿಯನ್ನು ನೀಡಿದರು. ಗಿರಿ ಅವರಿಗೆ ಇದು ತುಂಬ ತೃಪ್ತಿಯನ್ನುಂಟುಮಾಡಿತು.

ಅವರಿಗೆ ಸಾವಿರಾರು ಜನರ ಪರಿಚಯ. ಎಲ್ಲರ ಹೆಸರಲ್ಲದಿದ್ದರೂ ಮುಖ ಪರಿಚಯದಿಂದ ಸ್ನೇಹಪರವಾಗಿ ಮಾತನಾಡಿಸುತ್ತಿದ್ದರು. ಅನೇಕ ವೇಳೆ ಅವರ ಪತ್ನಿ, ಮಕ್ಕಳ ಹೆಸರುಗಳೂ ಅವರ ನೆನಪಿನಲ್ಲುಳಿಯುತ್ತಿದ್ದವು.

## ಮಗುವಿನ ಮುಗ್ಧತನ

ಅವರು ಕೋಪಿಸಿಕೊಂಡದ್ದನ್ನಾಗಲೀ ದನಿಯೆತ್ತಿ ಮಾತನಾಡಿದ್ದಾಗಲೀ ನಾನು ಕಂಡಿದ್ದಿಲ್ಲ. ಆದರೆ ಅನೇಕ ವೇಳೆ ಅವರು ಉದ್ವಿಗ್ನಗೊಳ್ಳುತ್ತಿದ್ದರು. ಅವರದು ಎಲ್ಲರ ಮನಸ್ಸನ್ನು ಗೆಲ್ಲುವ ನಿಷ್ಕಪಟ ಸ್ವಭಾವ. ಇಷ್ಟು ಲೋಕಾನುಭವವುಳ್ಳವರಾದರೂ ಅವರಲ್ಲಿ ಕೆಲವೊಮ್ಮೆ ಮಗುವಿನ ಮುಗ್ಧತನದ ಎಳೆಯೂ ಇತ್ತು. ಅವರ ಅಭಿಪ್ರಾಯವನ್ನು ಮನ್ನಿಸದವರೂ ಅವರನ್ನು ದ್ವೇಷಿಸುವಂತಿಲ್ಲ.

ಅವರ ಸ್ನೇಹ ಎಂದರೆ ಅದೇ ಒಂದು ನಮಗೆ ಆಧಾರ. ಅದು ನಮ್ಮಿಂದ ಆಧಾರ ಪಡೆಯುವಂಥದ್ದಲ್ಲ. ಅವರೆಂದೂ ಯಾರೊಡನೆಯೂ ಯಾಚಿಸಿದ್ದಿಲ್ಲ. ಸ್ನೇಹ ತೋರಿದವರನ್ನು ಹಾರ್ದಿಕವಾಗಿ ತಮ್ಮ ಆಪ್ತರಾಗಿ ಗಣಿಸುತ್ತಿದ್ದರು. ನನಗೆ ಅಷ್ಟು ಆಪ್ತರಾಗಿದ್ದ ಬೇರೆ ಗೆಳೆಯರಿರಲಿಲ್ಲ.

ಅವರಲ್ಲಿ ಕೃತಕತೆಯ ಲವಲೇಶವೂ ಇರಲಿಲ್ಲ. ಯಾವ ಸಂಕುಚಿತ ಮನೋಭಾವವೂ ಇರಲಿಲ್ಲ. ಕ್ಷುಲ್ಲಕ ವಿಷಯಗಳಲ್ಲಿ ಅವರ ಮನ ಹೋಗದು. ಮನಸ್ಸು ಎಂದಿಗೂ ಕಠಿಣವಾಗದು. ಅಷ್ಟು ಅನುಭವ ಸಂಪಾದಿಸಿದ್ದರೂ, ಅದೆಷ್ಟೋ ಜನರನ್ನು ಸನಿಹದಿಂದ ಬಲ್ಲವರಾಗಿದ್ದರೂ ಅವರಲ್ಲಿ ಡಾಂಬಿಕತೆ ಇರಲಿಲ್ಲ. ಯಾಕೆಂದೇ ನನಗೆ ತಿಳಿಯದು.

## ನೂರಾರು ಜನರ ನಮನ

ಅವರ ಕುರಿತು ಯೋಚಿಸುವಾಗ ಶೇಕ್ಸ್‌ಪಿಯರನ ಮಾತುಗಳು ನೆನಪಾಗುತ್ತದೆ–

"ಅವನು ಮಾನವರಲ್ಲೊಬ್ಬ
ಅವನ ಜೀವನ ಮೃದು– ಅವನ
ಗುಣಗಳ ಮಿಲನ ಹೇಗಿತ್ತೆಂದರೆ
ಪ್ರಕೃತಿ ಎದ್ದು
ನಿಂತು ಸಾರುವಂತಿತ್ತು;
ಈತನೊಬ್ಬ ಮಾನವ!"

ಅವರ ಜೀವನ ಮೃದು. ಅವರೂ ಮೃದು. ಅವರ ಗೆಳೆತನ ನನಗೀಗ ಇಲ್ಲ. ನನ್ನ ಜತೆ ಈ ಜೀವಕ್ಕೆ ನಮನ ಸಲ್ಲಿಸುವವರು ನೂರಾರು ಜನ ಇದ್ದಾರೆಂಬುದು ಸತ್ಯ.

***

## ಅಸಾಮಾನ್ಯ ಮುತ್ಸದ್ದಿ

**–ಕೆ.ಎಂ.ಉಡುಪ,**

**ಮ್ಯಾನೇಜಿಂಗ್ ಟ್ರಸ್ಟಿ, 'ಭಾರತ ವಿಕಾಸ ಟ್ರಸ್ಟ್' ಮಣಿಪಾಲ**



**ಮಣಿಪಾಲದ 'ಭಾರತ ವಿಕಾಸ ಟ್ರಸ್ಟ್'ನ ಕಚೇರಿಯಲ್ಲಿ ಶ್ರೀಕೆ.ಎಂ.ಉಡುಪ ಅವರೊಂದಿಗೆ ಲೇಖಕ ಡಾ.ಶಿವಾನಂದ ಬೇಕಲ್**

ಟಿ.ಎ.ಪೈಗಳ ಜೀವನದಲ್ಲಿ ನಾನು ಕಂಡುಕೊಂಡದ್ದು, ಮಹತ್ವದ ಸಾಧನೆ ಅಂದ್ರೆ ಅವ್ರು ಮುಟ್ಟಿದ್ದೆಲ್ಲ ಚಿನ್ನ ಆಗ್ತಾ ಇತ್ತು. ಸಿಂಡಿಕೇಟ್ ಬ್ಯಾಂಕ್ ಇರ್ಲಿ, ಫುಡ್ ಕಾರ್ಪೊರೇಶನ್ ಇರ್ಲಿ, ಎಲ್ಲೈಸಿ, ಕೇಂದ್ರದ ಮಂತ್ರಿ ಸ್ಥಾನ ಇರ್ಲಿ, ಅತ್ಯಂತ ದಕ್ಷತೆ

ಮತ್ತು ಯಶಸ್ವಿಯಾಗಿ ಅದನ್ನು ನಿರ್ವಹಿಸುವಂಥ ಒಬ್ಬ ವ್ಯಕ್ತಿ ಯಾರಾದ್ರೂ ಇದ್ರೆ, ನನಗನಿಸುವ ಮಟ್ಟಿಗೆ ಅದು ಟಿ.ಎ.ಪೈ ಒಬ್ಬರೇ.

## ಧೀರೂಭಾಯಿಯವರಿಗೆ ಆಪದ್ಬಾಂಧವರಾದ ಪೈ

ರಿಲಯನ್ಸ್ ಇಂಡಸ್ಟ್ರೀಸ್ ಈವೊತ್ತು ನಮ್ಮ ದೇಶದಲ್ಲಿ ಅತ್ಯಂತ ಯಶಸ್ವಿ, ಪ್ರಪಂಚದಲ್ಲಿ ಗುರುತಿಸಲ್ಪಟ್ಟಿರುವಂಥ ಒಂದು ಮಹಾನ್ ಸಂಸ್ಥೆ. ಇದನ್ನು



ಧೀರೂಭಾಯಿ ಅಂಬಾನಿ, ರಮಣಿಕ್‌ಭಾಯಿ ಅಂಬಾನಿ ಮತ್ತು
ಅವರ ಬಳಗದ ಜತೆಗೆ ಟಿ.ಎ.ಪೈ

ಸ್ಥಾಪಿಸಿದವ್ರು ಧೀರೂಬಾಯಿ ಅಂಬಾನಿಯವ್ರು. ಆದ್ರೆ, 1967ನೇ ಇಸವಿಯಲ್ಲಿ ತನ್ನ ಮನೆತನಕ್ಕೆ ಸೇರಿದಂಥ ಕೆಲವೊಂದು ಜವುಳಿ ಉದ್ಯಮವನ್ನು– ಅಹಮದಾಬಾದ್, ಬರೋಡಾದಲ್ಲಿ– ಅದನ್ನು ಪುನಃ ಸ್ಥಾಪಿಸಲಿಕ್ಕೆ ಪ್ರಯತ್ನಿಸಿದಾಗ ಅವ್ರಿಗೆ 15 ಲಕ್ಷ ರೂಪಾಯಿಯ ಅವಶ್ಯಕತೆಯಿತ್ತು. ಇದನ್ನು ಕೊಳ್ಳಲಿಕ್ಕೆ ಮುಂಬಯಿಯಲ್ಲಿ ಯಾರೂ ಮುಂದೆ ಬರ್ಲಿಲ್ಲ; ಯಾವ ಬ್ಯಾಂಕೂ ಮುಂದೆ ಬರ್ಲಿಲ್ಲ. ಆಗ ಯಾರೋ ಹೇಳಿದ ಪ್ರಕಾರ, ಟಿ.ಎ.ಪೈಗಳನ್ನು ಸಂಪರ್ಕಿಸಿದ್ರು. ಟಿ.ಎ.ಪೈಗಳು ಆಗ ಸಿಂಡಿಕೇಟ್ ಬ್ಯಾಂಕಿನ ಛೇರ್‌ಮನ್ ಆಗಿದ್ರು. ಅವ್ರಲ್ಲಿ ನಾನು ಕಂಡುಕೊಂಡ ದೊಡ್ಡ ಗುಣ

ಅಂತಂದ್ರೆ, ಇನ್ನೊಬ್ರು ಹೇಳಿದ್ದನ್ನು ಸೂಕ್ಷ್ಮವಾಗಿ ಗ್ರಹಿಸುವಂಥ ಅದ್ಭುತ ಶಕ್ತಿ. ಅಂಬಾನಿಯವ್ರು ತಮ್ಮ ಯೋಜನೆಗಳನ್ನು ಒಂದು ಗಂಟೆ ಕಾಲ ಟಿ.ಎ.ಪೈಯವರಲ್ಲಿ ತಿಳಿಸಿದ ನಂತರ, ಅದೇ ನಿಮಿಷಕ್ಕೆ ಅವರು ನಿರ್ಧಾರ ತಗೊಂಡ್ರು.



**ಸಿಂಡಿಕೇಟ್ ಬ್ಯಾಂಕು ಆಯೋಜಿಸಿದ ಸಭೆಯಲ್ಲಿ ಟಿ.ಎ.ಪೈ ಮತ್ತು ಕೆ.ಕೆ.ಪೈಯವರು.**
**ಅಂಬಾನಿಯವರನ್ನೂ ಚಿತ್ರದಲ್ಲಿ ಕಾಣಬಹುದು**

ನಮ್ಮ ಸಿಂಡಿಕೇಟ್ ಬ್ಯಾಂಕಿನ ಫೋರ್ಟ್ ಬ್ರಾಂಚಿನ ಮ್ಯಾನೇಜರ್ ಎಂ.ಕೆ.ಕಾಮತ್ ಅಂತ ಇದ್ರು, 'ನನ್ನತ್ರ ಸ್ಯಾಂಕ್ಷನ್ ತಗೊಂಡು 15ಲಕ್ಷ ರಿಲೀಸ್ ಮಾಡಿ' ಅಂತ ಹೇಳಿದ್ರು. ಅಂದರೆ ಆಗಿನ 15ಲಕ್ಷ ಈವೊತ್ತಿನ ಸುಮಾರು 15ಕೋಟಿ ರೂಪಾಯಿ. ಇಂಥ ಒಂದು ನಿರ್ಧಾರದಿಂದ ಅಂಬಾನಿಯವ್ರು ಯಶಸ್ವೀ ಉದ್ಯಮ ಸ್ಥಾಪನೆ ಮಾಡಿ ಹಿಂದಿರುಗಿ ನೋಡದೆ, ಈವೊತ್ತು ಪ್ರಪಂಚದಲ್ಲಿ ಮಹತ್ವದ ಸ್ಥಾನ ತಂದುಕೊಟ್ರು. ಅವ್ರ ಮಕ್ಳು ಅದನ್ನು ನಡೆಸ್ತಾ ಇದ್ದಾರೆ. ಅಂಥ ದೂರ ದೃಷ್ಟಿ ಟಿ.ಎ.ಪೈ ಅವರದ್ದು.

ಅಂಬಾನಿಯವರು ಸಾಯುವವರೆಗೆ ಟಿ.ಎ.ಪೈಯವರನ್ನು ಮರೀಲಿಲ್ಲ. ಪೈಯವರು ತೀರಿಕೊಂಡಾಗ ವಿಶೇಷ ವಿಮಾನದಲ್ಲಿ ಮಣಿಪಾಲಕ್ಕೆ ಬಂದು, ಅವ್ರ ಪಾರ್ಥಿವ ಶರೀರಕ್ಕೆ ಗೌರವ ತೋರಿಸಿದಂಥವ್ರು, ಅಂಬಾನಿಯವ್ರು.

ಇಂಥ ಅನೇಕ ಉದಾಹರಣೆಗಳು ಇದ್ದಾವೆ. ಈವೊತ್ತು ಅನೇಕ ಜನರು ಟಿ.ಎ.ಪೈಗಳನ್ನು ನೆನೆಸಿಕೊಳ್ಳುವಂಥದ್ದು ಈವೊಂದು ಗುಣದಿಂದ. ಉದ್ದಿಮೆ ಸ್ಟಾರ್ಟ್ ಮಾಡುವಂಥದ್ದು ಇರಬಹುದು, ಅಧಿಕಾರಿ ಇರಬಹುದು, ಅಥ್ವಾ ಜೀವನದಲ್ಲಿ ಅನೇಕ ಅನುಭವ ಪಡೆದವ್ರು ಇರಬಹುದು. ಅವರ ಹಿಂದೆ ಟಿ.ಎ.ಪೈಯವರಿದ್ರು.

ಡಾ.ಟಿ.ಎಂ.ಎ.ಪೈಯವರ ಅಣ್ಣನ ಮಗ ಶ್ರೀ ಟಿ.ಎ.ಪೈ ಅವರು. ಚಿಕ್ಕಪ್ಪ ಡಾ.ಪೈಯವರೊಂದಿಗೆ ಹೆಗಲು ಕೊಟ್ಟು, ಅವರ ಎಲ್ಲ ಕಾರ್ಯಗಳಲ್ಲಿ ಸಹಕಾರ ನೀಡಿ ರಾಷ್ಟ್ರ ಮಟ್ಟದಲ್ಲಿ ಗುರುತಿಸಿಕೊಂಡು, ಒಬ್ಬ ಧೀಮಂತ ನಾಯಕರಾಗಿ ರೂಪುಗೊಂಡದ್ದು ಒಂದು ಅದ್ವಿತೀಯ ಆಖ್ಯಾಯಿಕೆ.

## ಸಾಮಾನ್ಯ ಜನರ ಅಸಾಮಾನ್ಯ ವಿತ್ತ ಸಂಸ್ಥೆ

1962ನೇ ಇಸವಿಯಲ್ಲಿ ಸಿಂಡಿಕೇಟ್ ಬ್ಯಾಂಕಿನ ಆಡಳಿತ ನಿರ್ದೇಶಕರಾಗಿ ನೇತೃತ್ವ ವಹಿಸಿಕೊಂಡ ಅನಂತರ ಮುಂದಿನ ಹತ್ತು ವರ್ಷಗಳಲ್ಲಿ ಸಿಂಡಿಕೇಟ್ ಬ್ಯಾಂಕ್ ಸಾಮಾನ್ಯ ಜನರ ಅಸಾಮಾನ್ಯ ವಿತ್ತ ಸಂಸ್ಥೆಯಾಗಿ ರೂಪುಗೊಂಡು ರಾಷ್ಟ್ರದ ಗಮನ ಸೆಳೆಯಿತು. ಸ್ವತಃ ಆರ್ಥಿಕ ತಜ್ಞರಾದ ಟಿ.ಎ.ಪೈ ಅವರು ಅದ್ಭುತ ಮ್ಯಾನೇಜ್‌ಮೆಂಟ್ ತಜ್ಞರಾಗಿ ಸಣ್ಣ ಊರಿನಲ್ಲೇ ಇದ್ದುಕೊಂಡು, ಇಂಥ ಬ್ಯಾಂಕ್ ಹೇಗೆ ಕಟ್ಟಬಹುದೆಂದು ರಾಷ್ಟ್ರಕ್ಕೆ ತೋರಿಸಿಕೊಟ್ಟರು. ಹೊಸ ಹೊಸ ಯೋಜನೆಗಳನ್ನು ರೂಪಿಸಿ ಎಲ್ಲ ವರ್ಗದ ಜನರಿಗೆ ಆರ್ಥಿಕ ನೆರವನ್ನು ನೀಡಿ ಬ್ಯಾಂಕಿಂಗ್ ಇತಿಹಾಸದಲ್ಲಿ ಹೊಸ ಅಧ್ಯಾಯ ಬರೆದರು. ಅಂದು 60ರ ದಶಕದಲ್ಲಿ ಟಿ.ಎ.ಪೈಯವರ ಮಾರ್ಗದರ್ಶನದಲ್ಲಿ ರೂಪಿಸಿದ ಎಲ್ಲಾ ಯೋಜನೆಗಳು ಮುಂದೆ ರಾಷ್ಟ್ರೀಯ ಧೋರಣೆಗಳಾದವು. ಟಿ.ಎ.ಪೈಯವರನ್ನು ಒಬ್ಬ ಅಸಾಮಾನ್ಯ ಆರ್ಥಿಕ ಮುತ್ಸದ್ದಿಯೆಂದು ದೇಶ ಗುರುತಿಸಿತು. ಸರಕಾರದ ಎಲ್ಲ ಹಂತಗಳಲ್ಲಿ ಆರ್.ಬಿ.ಐ. ವಿವಿಧ ಮ್ಯಾನೇಜ್‌ಮೆಂಟ್ ಸಂಸ್ಥೆಗಳಲ್ಲಿ ಅವರಿಂದ ಮಾರ್ಗದರ್ಶನಕ್ಕೆ ಅಪಾರ ಬೇಡಿಕೆ ಬಂತು. ರಾಷ್ಟ್ರೀಯ ಸಾಲ ನೀತಿ ನಿರೂಪಣೆ ಸಂಸ್ಥೆ, ಬ್ಯಾಂಕಿಂಗ್ ಕಮಿಷನ್, ಕೃಷಿ ಆಯೋಗಗಳಲ್ಲಿ ಅವರ ನಾಯಕತ್ವಕ್ಕೆ ಮನ್ನಣೆ ಸಿಕ್ಕಿತು.

## ಹೊಸ ಆಯಾಮದ ಮ್ಯಾನೇಜ್‌ಮೆಂಟ್

ಇನ್ನೊಂದು ಅವರು ಮಾಡಿದಂಥ ಅತ್ಯದ್ಭುತ ಕೆಲಸ ಅಂದ್ರೆ ಮ್ಯಾನೇಜ್‌ಮೆಂಟ್‌ಗೆ ಹೊಸ ಆಯಾಮ. ದೇಶದ ಅನೇಕ ಜನರಿಗೆ ಇದು ಪ್ರಾಯಶಃ ಗೊತ್ತಿಲ್ಲ. ಈವೊತ್ತು ಅವ್ರು ಇವ್ರು ಅಂತ ನಾವು ಮ್ಯಾನೇಜ್‌ಮೆಂಟ್ ಗುರುಗಳು ಅಂತ ಗುರುತಿಸ್ತೇವೆ. ಮ್ಯಾನೇಜ್‌ಮೆಂಟ್ ಗುರುಗಳು ಅಂತ ಹೇಳಿಸಿಕೊಳ್ಳುವುದಕ್ಕೆ ನಮ್ಮ ದೇಶದ ಅರ್ಹತೆಯುಳ್ಳ ವ್ಯಕ್ತಿ ಯಾರಾದ್ರೂ ಇದ್ರೆ, ಅದು ಟಿ.ಎ.ಪೈಗಳು ಅಂತ ನಾವು ಧೈರ್ಯವಾಗಿ ಹೇಳಬಹುದು.

ಬೆಂಗಳೂರು ಐಐಎಮ್ ಇಂದು ಅಂತರರಾಷ್ಟ್ರೀಯವಾಗಿ ಹೆಸರು ಮಾಡಿದಂಥ ಒಂದು ಸಂಸ್ಥೆ. ಐಐಎಮ್ ಅಹಮದಾಬಾದ್-ಇದನ್ನು ಕಟ್ಟಿ ಬೆಳೆಸುವುದರಲ್ಲೂ ಟಿ.ಎ.ಪೈ ಪಾತ್ರ ವಹಿಸಿದ್ದರು. ಅದರ ಆಧಾರದ ಮೇಲೆ, ಅದರ ಅನುಭವದ ಮೇಲೆ, ಬೆಂಗಳೂರು ಐಐಎಮ್ ಸ್ಥಾಪನೆ ಮಾಡಿದ್ರು. ಇದು ಬಹಳ ಜನರಿಗೆ ಗೊತ್ತಿಲ್ಲ. ಟಿ.ಎ.ಪೈಗಳು ಬೆಂಗಳೂರು ಐಐಎಮ್‌ನ ಸ್ಥಾಪಕ ಅಧ್ಯಕ್ಷರು. ಅದಾದ ನಂತರ ಮಣಿಪಾಲದಲ್ಲಿ ಅತ್ಯುತ್ತಮ ಸಂಸ್ಥೆಗಳನ್ನು ಕಟ್ಟಿದ್ದಾರೆ, ಡಾ.ಟಿ.ಎಂ.ಎ.ಪೈಗಳು, ಟಿ.ಎ.ಪೈಗಳು ಮತ್ತು ಅವರ ಕುಟುಂಬದವರು. ಇಲ್ಲಿ ಒಂದು ಮ್ಯಾನೇಜ್‌ಮೆಂಟ್ ಸ್ಕೂಲ್ ಆಗಬೇಕು ಅಂತ ಅವರ ಕೊನೇ ದಿವಸಗಳಲ್ಲಿ ಕೆಲಸ ಮಾಡಿದ್ರು. ಹಾಗೆ ಸ್ಥಾಪನೆಗೊಂಡಂಥ ಒಂದು ಸಂಸ್ಥೆ ದೇಶದಲ್ಲಿ ಹೆಸರು ಮಾಡಿರುವ 'ಟಿಎಪೈ ಮ್ಯಾನೇಜ್‌ಮೆಂಟ್ ಇನ್ಸ್ಟಿಟ್ಯೂಟ್-TAPMI'

## ರಾಷ್ಟ್ರಮಟ್ಟದಲ್ಲಿ ಹೆಜ್ಜೆ ಗುರುತು

ಬ್ಯಾಂಕಿಂಗ್ ಜತೆಗೆ ಟಿ.ಎ.ಪೈಯವರು ಕೃಷಿ ಕ್ಷೇತ್ರದಲ್ಲೂ ಗುರುತಿಸಿಕೊಂಡರು. ದೇಶದ ಆಹಾರ ಕೊರತೆಯನ್ನು ನೀಗಿಸಲು ಅಂದಿನ ಪ್ರಧಾನಿ ಲಾಲ್ ಬಹಾದುರ್ ಶಾಸ್ತ್ರಿಯವರಿಂದ ಹೊಸದಾಗಿ ಆರಂಭವಾದ ಭಾರತೀಯ ಆಹಾರ ನಿಗಮದ ಅಧ್ಯಕ್ಷರಾಗಿ ನೇಮಕಗೊಂಡರು. ಆಗ ಟಿ.ಎ.ಪೈಯವರ ಪ್ರಾಯ ಕೇವಲ 43ವರ್ಷ. ಅಂದಿನ ಆಹಾರ ಮತ್ತು ಕೃಷಿ ಮಂತ್ರಿ ಭಾರತ ರತ್ನ ಸಿ. ಸುಬ್ರಹ್ಮಣ್ಯಂರವರ ಜೊತೆಗೂಡಿ ಹಸಿರು ಕ್ರಾಂತಿಯ ಮೂಲಕ ಆಹಾರದಲ್ಲಿ ಸ್ವಾವಲಂಬನೆಯತ್ತ ಮಹತ್ವದ ಸಾಧನೆ ಮಾಡಿದರು. ಆಹಾರ ನಿಗಮದ ಅಧ್ಯಕ್ಷ ಮತ್ತು ಹಸಿರು ಕ್ರಾಂತಿಯ ಹರಿಕಾರನಾಗಿ ರೂಪುಗೊಂಡು ಪ್ರಸಿದ್ಧರಾದರು.

## ಜೀವವಿಮೆಗೆ ಜೀವ

1970ರಲ್ಲಿ ಅಂದಿನ ಪ್ರಧಾನಿ ಇಂದಿರಾ ಗಾಂಧಿಯವರ ಕೋರಿಕೆಯಂತೆ ಜೀವವಿಮಾ ನಿಗಮದ ಅಧ್ಯಕ್ಷರಾಗಿ ನೇಮಕಗೊಂಡು ಮುಂದಿನ ಮೂರು ವರ್ಷಗಳಲ್ಲಿ ತಮ್ಮ ನಾಯಕತ್ವದಿಂದ ಅದಕ್ಕೆ ಹೊಸ ರೂಪ ನೀಡಿದ್ದಲ್ಲದೇ ಜೀವ ವಿಮಾ ನಿಗಮ ದೇಶದ ಅತ್ಯುತ್ತಮ ಆರ್ಥಿಕ ಸಂಸ್ಥೆಯಾಗಿ ಬೆಳೆಯಲು ಕಾರಣರಾದರು. ಈ ಸಾಧನೆಗಾಗಿ ಅವರಿಗೆ ದೇಶ 'ಪದ್ಮಭೂಷಣ' ಪ್ರಶಸ್ತಿ ನೀಡಿ ಗೌರವಿಸಿತು. ಇವರ ಯೋಗ್ಯತೆಯನ್ನು ಗಮನಿಸಿದ ಇಂದಿರಾ ಗಾಂಧಿ, ಇವರನ್ನು ನೇರವಾಗಿ ಕೇಂದ್ರ ಸರಕಾರದಲ್ಲಿ ಕ್ಯಾಬಿನೆಟ್ ಸಚಿವರಾಗಿ ನೇಮಕಗೊಳಿಸಿದರು. ಪ್ರಾಯಶಃ ಈ ರೀತಿ ನೇಮಕಗೊಂಡವರಲ್ಲಿ ಸಿ.ಡಿ.ದೇಶ್‌ಮುಖ್ ಬಿಟ್ಟರೆ ಎರಡನೆಯವರು ಪೈಯವರು.

ಮುಂದಿನ ಸುಮಾರು 5ವರ್ಷ ವಿವಿಧ ಖಾತೆಗಳಲ್ಲಿ ದಕ್ಷ ಆಡಳಿತಗಾರ ಎಂಬ ಪ್ರಶಂಸೆಗೆ ಪಾತ್ರರಾದರು. ಅವರ ಸಮಕಾಲೀನರೂ, ದೇಶದ ಅತ್ಯುತ್ತಮ ನ್ಯಾಯಾಂಗ ತಜ್ಞರೂ, ಸುಪ್ರೀಂ ಕೋರ್ಟಿನ ನ್ಯಾಯಾಧೀಶರೂ ಆಗಿದ್ದ ವಿ.ಎಸ್. ಕೃಷ್ಣ ಅಯ್ಯರ್ ಹೀಗೆ ಹೇಳಿದ್ದರು.. "ನನ್ನ ಸುಧೀರ್ಘ ಜೀವನದಲ್ಲಿ ನನ್ನ ಮತ್ತು ಅವರ ರಾಜಕೀಯ ಆಸಕ್ತಿ ಬೇರೆಯಾಗಿದ್ದರೂ ಒಳ್ಳೆಯ ಮಿತ್ರನಾಗಿ ನಾನು ಕಂಡ ಅತ್ಯಂತ ದಕ್ಷ , ಪ್ರಾಮಾಣಿಕ ಮತ್ತು ನಿಷ್ಠ ವ್ಯಕ್ತಿ ಶ್ರೀ ಟಿ.ಎ.ಪೈ ಅವರು. ದೀನ ದಲಿತರಿಗೆ ಸಹಾಯ ಹಸ್ತವನ್ನು ನೀಡಿ ಸಂಕಷ್ಟದಲ್ಲಿರುವವರ ಸಮಸ್ಯೆಗಳಿಗೆ ಪರಿಹಾರ ನೀಡಿ ಸ್ಫೂರ್ತಿ ನೀಡಿ ಬಡವ ಬಲ್ಲಿದರೆನ್ನದೇ ಎಲ್ಲರ ಮಟ್ಟಿಗೆ ಆಪದ್ಬಾಂಧವ ರಾದವರು."

ಸಾವಿರಾರು ಮಂದಿ ಪೈಯವರ ಉದಾರತ್ವ ಮತ್ತು ಮಾರ್ಗದರ್ಶನದಲ್ಲಿ ಹೊಸ ದೇವರನ್ನು ಕಂಡರು. ಅಂಥವರಲ್ಲಿ ಒಬ್ಬರಾದ ಕನ್ನಡದ ಕಟ್ಟಾಳು ಡಾ. ಪಾಟೀಲ ಪುಟ್ಟಪ್ಪನವರು ಹೀಗೆ ಹೇಳಿದ್ದಾರೆ–

"ದೇವರು ಮತ್ತು ಟಿ.ಎ.ಪೈಯವರು ಮಧ್ಯರಾತ್ರಿಯಲ್ಲಿ ಒಟ್ಟಿಗೆ ಬಂದು ಮನೆ ಬಾಗಿಲು ತಟ್ಟಿದರೆ ನಾನು ಟಿ.ಎ.ಪೈ ಅವರನ್ನು ಮೊದಲಿಗೆ ಒಳಗೆ ಕರೆಯುತ್ತೇನೆ." ಪೈಯವರ ಮಾನವೀಯ ವ್ಯಕ್ತಿತ್ವಕ್ಕೆ ಇದಕ್ಕಿಂತ ಹೆಚ್ಚಿನ ಪ್ರಶಂಸೆ ಬೇರೆಯಿಲ್ಲ.

ಟಿ.ಎ.ಪೈಯವರು ಎಲ್ಲ ರಂಗಗಳಲ್ಲಿ ವಿಶೇಷ ಆಸಕ್ತಿ ತೋರಿಸಿ ಅನೇಕರಿಗೆ ಮಾರ್ಗದರ್ಶನ ನೀಡಿದರು. ಇವರಿಂದ ಪ್ರೇರಿತರಾಗಿ ಜೀವನದಲ್ಲಿ ಯಶಸ್ಸು ಕಂಡವರು ಲಕ್ಷಾಂತರ ಮಂದಿ. ಅಂಥವರಲ್ಲಿ ಬರಡು ಭೂಮಿಯ ಕೃಷಿಯಲ್ಲಿ ಯಶಸ್ಸು ಸಾಧಿಸಿದ ಚೇರ್ಕಾಡಿ ರಾಮಚಂದ್ರರಾಯರು ಇದ್ದಾರೆ; ರಿಲಯನ್ಸ್ ಕಂಪೆನಿಯನ್ನು ಸ್ಥಾಪಿಸಿ ಬೆಳೆಸಿದ ಧೀರೂಭಾಯಿ ಅಂಬಾನಿಯವರ ಬಳಗದವರೂ ಇದ್ದಾರೆ.

***

## ಅವರು ಬಂದರು, ಕಂಡರು, ಗೆದ್ದರು!

### –ಪದ್ಮಭೂಷಣ ಡಾ. ಬಿ.ಎಂ.ಹೆಗ್ಡೆ

### ವಿಶ್ರಾಂತ ಕುಲಪತಿ, 'ಮಾಹೆ'(ಮಣಿಪಾಲ ಶಿಕ್ಷಣ ಸಮೂಹ ಸಂಸ್ಥೆಗಳು)

ಟಿ.ಎ.ಪೈಯವರು ಮೊದಲಬಾರಿಗೆ 1952ರಲ್ಲಿ ಚುನಾವಣೆಯಲ್ಲಿ ಗೆದ್ದಾಗ ನಾನು ಶಾಲಾ ವಿದ್ಯಾರ್ಥಿಯಾಗಿದ್ದೆ. ಅವರು ಚುರುಕಾದ ವ್ಯಕ್ತಿತ್ವವನ್ನು ಹೊಂದಿದ್ದರು. ಅವರ ಈ ಗುಣವನ್ನು ನಾವು ಎಳೆಯರು ತುಂಬಾ ಮೆಚ್ಚಿಕೊಂಡಿದ್ದೆವು. ನಮ್ಮ ಕುಟುಂಬ ವರ್ಗ ಅವರ ಚಿಕ್ಕತಂದೆ ಡಾ। ಟಿ.ಎಂ.ಎ.ಪೈ ಅವರಿಗೆ ಆತ್ಮೀಯರಾಗಿದ್ದರು. ಆದ್ದರಿಂದ ಟಿ.ಎ.ಪೈಯವರಿಗೆ ನಮ್ಮ ನಿಕಟ ಪರಿಚಯವಿತ್ತು. ಅವರು ಮದ್ರಾಸಿನಲ್ಲಿ ಎಂ.ಎಲ್.ಎ. ಆಗಿದ್ದಾಗ, ನಾನು ಮದ್ರಾಸಿನ ಸ್ಟ್ಯಾನ್ಲಿ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದು, ನಮಗೆ ಪರಸ್ಪರ ಹೆಚ್ಚು ಸಂಪರ್ಕಹೊಂದುವ ಅವಕಾಶವಾಯಿತು. 1962ರಿಂದ ನಾನು ಮಣಿಪಾಲ ಶಿಕ್ಷಣ ಸಂಸ್ಥೆಯಲ್ಲಿ ದುಡಿಯುತ್ತಿದ್ದುದರಿಂದ ನನಗೂ ಪೈಯವರಿಗೂ ನಿಕಟವಾದ ಸಂಪರ್ಕವೂ, ಅವರನ್ನು ಹತ್ತಿರದಿಂದ ತಿಳಿದುಕೊಳ್ಳುವ ಅವಕಾಶವೂ ಲಭ್ಯವಾಯಿತು.

ಅವರು ಮಾನವೀಯ ಗುಣಗಳ ಜತೆಗೆ ರಾಜಕಾರಣಿಯಾಗಿ ಬೆಳೆದು ಬೆಳಗಿದರು– ಮೊದಲಿಗೆ ರೇಲ್ವೇ ಸಚಿವರಾಗಿ. ಅವರು ದೇಶದ ಸಾಮಾನ್ಯ ಜನರ ಪ್ರಗತಿಗೆ ಬಹಳಷ್ಟು ದುಡಿದಿರುವ ಮುತ್ಸದ್ದಿ. ಅವರೊಬ್ಬ ಪ್ರಾಮಾಣಿಕ, ಸರಳ ಸಜ್ಜನಿಕೆಯ ಕಾಯಕ ಮೂರ್ತಿ. ಅವರೊಬ್ಬ ಕ್ರಿಯಾತ್ಮಕ ವ್ಯಕ್ತಿಯಾಗಿದ್ದು, ತನ್ನ ಚಿಂತನೆಗೆ ಬದ್ಧರಾಗಿದ್ದು, ಆ ಪ್ರಕಾರ ನಡೆದುಕೊಂಡವರು. ರಾಜಕೀಯದಲ್ಲಿ ಪ್ರಾಮಾಣಿಕತೆ ಮತ್ತು ಸರಳತೆ ದುರಂತಕ್ಕೊಯ್ಯುವ

ವಿಷಯವಾಗಿದ್ದರೆ, ಅವರು ಅದಕ್ಕೋಸ್ಕರ ಸಾಕಷ್ಟು ಅನುಭವಿಸಬೇಕಾಗಿ ಬಂದದ್ದು ಈಗ ಇತಿಹಾಸ. ತಾವೇ ನಿಯುಕ್ತಿಗೊಳಿಸಿದ ವ್ಯವಸ್ಥಾಪಕರ ಎದುರಿಗೆ ಚುನಾವಣೆಯಲ್ಲಿ ಅವರು ಸೋತುಹೋದರು. ಅದೊಂದು ಮಾನಸಿಕ ಹೊಡೆತವನ್ನು ಅವರು ಅನುಭವಿಸಿದ್ದಲ್ಲದೆ, ಆ ಹೊಡೆತದಿಂದ ಅವರೆಂದಿಗೂ ಚೇತರಿಸಿಕೊಳ್ಳಲು ಸಾಧ್ಯವಾಗದೆ ಹೋಯಿತು. ಅವರು ತಮ್ಮ 59ನೇ ಪ್ರಾಯದಲ್ಲೇ ಹೃದಯಾಘಾತದಿಂದ ಅಸುನೀಗಿದರು.

ಟಿ.ಎ.ಪೈಯವರು ಮಾನವೀಯ ವ್ಯಕ್ತಿತ್ವ ಹೊಂದಿದವರಾಗಿದ್ದು, ಅಂತಹ ವ್ಯಕ್ತಿತ್ವ ರಾಜಕೀಯದಲ್ಲಿ ಸಿಗುವಂಥದ್ದು ಬಹಳ ವಿರಳ. ಓರ್ವ ಬ್ಯಾಂಕರ್ ಆಗಿ ಅವರು ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಾವೀನ್ಯತೆಯನ್ನು ತಂದರು. ಒಂದು ಸಾಮಾನ್ಯ ಬ್ಯಾಂಕ್ ಆಗಿದ್ದ ಸಿಂಡಿಕೇಟ್ ಬ್ಯಾಂಕನ್ನು ಅವರು ಪ್ರಗತಿ ಪಥದಲ್ಲಿ ಮುನ್ನಡೆಸಿದರು. ಅದು ಅಂತರರಾಷ್ಟ್ರೀಯವಾಗಿ



ಪ್ರಖ್ಯಾತವಾಯಿತು. ಭಾರತದ ಆಹಾರ ಸಮಸ್ಯೆಯನ್ನು ಪರಿಹರಿಸುವಲ್ಲಿ ಅವರು ಭಾರತೀಯ ಆಹಾರ ನಿಗಮದ ಅಧ್ಯಕ್ಷರಾಗಿ ದುಡಿಯ ಬೇಕಾಯಿತು. ಜೀವವಿಮಾ ನಿಗಮದ ಅಧ್ಯಕ್ಷರಾಗಿ ಅವರೊಬ್ಬ ಯಶಸ್ವೀ ಆಡಳಿತಗಾರ ಎಂದು ಸಿದ್ಧಪಡಿಸಿದರು. ಚುಟುಕಿನಲ್ಲಿ ಹೇಳುವುದಾದರೆ, 'ಅವರು ಬಂದರು, ಅವರು ಕಂಡರು, ಅವರು ಗೆದ್ದರು.' ಅವರು ಬಂದಾಗ ಅವರಲ್ಲಿ ಏನೂ ಇದ್ದಿರಲಿಲ್ಲ, ಹೋಗುವಾಗಲೂ ಏನೂ ಇದ್ದಿರಲಿಲ್ಲ. ನಡುವೆ ಜಗತ್ತು ಸಂತಸದಿಂದ ಬಾಳುವಂಥ ಅನೇಕ ಕಾರ್ಯಗಳನ್ನು ಎಸಗಿದರು. ಅವರ ಆತ್ಮ ಶಾಂತಿಯಿಂದ ಇರಲಿ!

***

## ನನ್ನಣ್ಣ ಅನಂತ



**ಟಿ.ಸತೀಶ್ ಯು. ಪೈ**

**'ಉದಯವಾಣಿ' ಪತ್ರಿಕಾ ಬಳಗದ ಮುಖ್ಯಸ್ಥರು**

ಮುಖ್ಯ ವಿಷಯ ಅಂದ್ರೆ ಅವರ ಗುಡ್ ಕ್ವಾಲಿಟೀಸ್. ಯಾಕಂದ್ರೆ ಸಾಮಾನ್ಯ ಮನುಷ್ಯರು ಯಾರಾದ್ರು ಬಂದ್ರೆ, ತಕ್ಷಣ ಡಿಸಿಷನ್ ತಗೊಂಡು

ಹೋಗ್ತಾ ಇದ್ರು ಅವ್ರು. ಆದ್ರಿಂದ ಬಂದವ್ರು ಯಾರು ಆದ್ರು ಕೂಡಾ, ಎಷ್ಟೋ ಮಂದಿ ಬಡವರಾಗ್ಲಿ, ಯಾರೇ ಇರ್ಲಿ, ಅವ್ರಿಗೆ ಅದೊಂದು ಫೀಲಿಂಗ್ ಇತ್ತು. ಅವ್ರು ಬರುವಾಗ ಏನಾದ್ರೂ ಗ್ರೇಟ್ ಎಕ್ಸ್‌ಪೆಕ್ಟೇಶನ್ ಏನಾದ್ರೂ ಇದ್ರೆ, ಸೊಲ್ಯೂಶನ್ ಕೊಟ್ಟು ಕಳಿಸ್ತಾ ಇದ್ರು. ಈ ಕ್ವಾಲಿಟಿ ಬಹಳ ಕಡಿಮೆ ಜನರಲ್ಲಿ ಕಾಣ್ತೇವೆ. ಅವ್ರು ಮಿನಿಷ್ಟ್ರು ಆದ ನಂತ್ರ ಕೂಡಾ, ಯಾರು ಹೋದ್ರೂ ಅವ್ರಿಗೆ ಅಪಾಯಿಂಟ್‌ಮೆಂಟ್ ಬೇಕಂತ ಇರ್ಲಿಲ್ಲ. ಬ್ಯೂರೋಕ್ರೆಸಿ ಮಾತ್ರ ಅವ್ರನ್ನ ಮೀಟ್ ಮಾಡ್ಲಿಕ್ಕೆ ಬಿಡ್ತಿರಲಿಲ್ಲ ಹೊರತು, ಅವ್ರು ಮಿನಿಷ್ಟ್ರಾಗಿ ಎಷ್ಟೋ ಸಲ ಇಲ್ಲಿ ಮಣಿಪಾಲದಲ್ಲಿ ಇರ್ತಿದ್ದಾಗ, ನನ್ನ ಮನೆಯಲ್ಲೇ ಇರ್ತಿದ್ರು. ಯಾರು ಬಂದ್ರೂ ಸೀದಾ ಹೋಗಿ ಅವ್ರತ್ರ ಮಾತಾಡ್ಲಿಕ್ಕೆ ಅವಕಾಶ ಇರ್ತಿತ್ತು.

ಶುರುವಿನಿಂದಲೂ, ಅವ್ರಿಗೆ ಮಿನಿಷ್ಟ್ರ ಆಗ್ಬೇಕಂತ ಆಫರ್ ಬಂದಾಗ, 1952ರಲ್ಲಿ, ಆಗ ತಂದೆಯವ್ರು ಇದ್ರು, ತಂದೆಯವ್ರು ಹೇಳಿದ್ರು, 'ನೋಡು, ನಮ್ಗೆ ಇಲ್ಲಿ ಎಷ್ಟೋ ಕೆಲ್ಸ ಮಾಡ್ಲಿಕ್ಕೆ ಉಂಟು, ಅಲ್ಲಿಗೆ ಹೋಗಿ ಟೈಮ್ ವೇಸ್ಟ್ ಮಾಡ್ಬೇಡ. ಆ ಸ್ಥಳ ನಿನಗೆ ಹೇಳಿಸಿದ್ದಲ್ಲ' ಹೀಗಂತ. ಆಗ ಅವ್ರು ಮಂತ್ರಿ ಆಗ್ಬಹುದಿತ್ತು. ಸಿ.ಸುಬ್ರಹ್ಮಣ್ಯಂ ಅವ್ರು ಇವರ ತುಂಬಾ ಡಿಯರ್ ಫ್ರೆಂಡ್. ಕಡೆಗೆ ಇವ್ರು ಫುಡ್ ಕಾರ್ಪೊರೇಶನ್ ಆಫ್ ಇಂಡಿಯಾ, ನಂತ್ರ ಎಲ್ಲೈಸಿಗೆ ಹೋದ್ರು. ಎಲ್ಲ ಸಕ್ಸಸ್! ಅವ್ರೊಬ್ಬ ಯಶಸ್ವೀ ಬ್ಯಾಂಕರ್ ಆದ್ರು. ರೇಲ್ವೇ ಮಿನಿಷ್ಟ್ರು ಇರುವಾಗ ಕೂಡಾ, ಅವ್ರು ಇರುವಾಗ್ಲೇ ಸಾಕಷ್ಟು ಸುಧಾರಣೆಗಳು ಆದುವು.



ರೇಲ್ವೇ ಸಚಿವರಾಗಿ ಅಧಿಕಾರ ವಹಿಸಿಕೊಂಡು ಊರಿಗೆ ಬಂದಾಗ ಟಿ. ಸತೀಶ್ ಪೈ ಅವರಿಂದ ಹೃತ್ಪೂರ್ವಕ ಸ್ವಾಗತ

ನಿಜವಾಗಿ ಅವ್ರು ಪೊಲಿಟಿಕ್ಸ್‌ಗೆ ಹೋಗ್ತಾ ಇರ್ತಿದ್ರೆ, ಇನ್ನೊಂದು ಹತ್ತು ವರ್ಷ ಬದುಕ್ತಾ ಇರ್ತಿದ್ರು. (ಹೀಗನ್ನುತ್ತಿರುವಾಗ ಶ್ರೀ ಸತೀಶ್ ಪೈಯವರ ಕಣ್ಣುಗಳು ತೇವಗೊಂಡು ದುಃಖ ಒತ್ತರಿಸಿ ಬಂತು. ಮತ್ತೆ ಅವರು ಮಾತನಾಡಲಿಲ್ಲ.)

***

# ಮುಖವಾಡವಿಲ್ಲದ ಅದ್ಭುತ ಜೀವ

## ಶ್ರೀಮತಿ ಸಂಧ್ಯಾ ಎಸ್. ಪೈ

## 'ತರಂಗ' ಸಾಪ್ತಾಹಿಕದ ವ್ಯವಸ್ಥಾಪಕ ಸಂಪಾದಕರು



**ಶ್ರೀಮತಿ ಸಂಧ್ಯಾ ಪೈ ಅವರೊಂದಿಗೆ ಲೇಖಕರು**

ನಾನು ಅವ್ರನ್ನ ಕಂಡದ್ದು ಹತ್ತು ಹನ್ನೆರಡು ವರ್ಷ ಅಷ್ಟೇ. ಯಾಕಂದ್ರೆ ನನಗೆ ಮದುವೆಯಾಗಿದ್ದು 1970ರಲ್ಲಿ. ಅವ್ರು ತೀರ್ಕೊಂಡಿದ್ದು 1981ರಲ್ಲಿ. ಆ 11ವರ್ಷಗಳ ಅವಧಿಯಲ್ಲಿ ಅವ್ರನ್ನ ಎಷ್ಟು ಅರ್ಥಮಾಡ್ಕೊಂಡಿದ್ನೋ ಗೊತ್ತಿಲ್ಲ. ಯಾಕಂತಂದ್ರೆ ನನಗೂ ಕೂಡಾ ಆಗ ಎಳೆಯ ವಯಸ್ಸು. ಆದ್ರೆ ಕಂಡದ್ರಲ್ಲಿ ಅವ್ರೊಂದು ಮಹಾ ಚಿಂತಕ ಅಂತ ತಿಳ್ಕೊಂಡಿದ್ದೆ. ಹೆಚ್ಚಿನವ್ರು ಒಂದು ದಿನದ ಹೊತ್ತು ಕೆಲ್ಸ ಮಾಡ್ತಾರೆ. 24ಗಂಟೆಯೂ ಹಿಡಿದ ಕೆಲ್ಸವನ್ನ ಬಿಡದೆ ಮಾಡಿಯೇ ತೀರುವ ಅದ್ಭುತ ಚೈತನ್ಯ ಅವರು ಅಂತ ನನಗನಿಸ್ತದೆ. ಇಡೀ ದಿನ ಅವ್ರ ತಲೆಯಲ್ಲಿ ತಿರುಗುತ್ತಿದ್ದುದು ದೇಶದ ಪ್ರಗತಿಯ ಕುರಿತಾದ ಚಿಂತನೆಗಳು. ಏನು ಕಂಡ್ರು ಕೂಡಾ ಅದನ್ನು ಫಲಪ್ರದವಾಗಿ ದೇಶಕ್ಕೋಸ್ಕರ ಹೇಗೆ ಬಳಸಿಕೊಳ್ಳಹುದು, ಏನ್ ಮಾಡ್ಬಹುದು ಅಂತ ಯೋಚಿಸ್ತಾ ಇರೋದು.

## ಮಚ್ ಎಹೆಡ್ ಆಫ್ ಹಿಸ್ ಟೈಮ್

ಒಂದು ಹಳ್ಳಿಗೆ ಹೋಗ್ಲಿ ಯಾರಾದ್ರು ಹಪ್ಪ ಸಂಡಿಗೆ ಮಾಡುವವರನ್ನು ಕಂಡ್ರೆ, ಇದನ್ನು ದೊಡ್ಡ ಸ್ಕೇಲ್‌ನಲ್ಲಿ ಮಾಡಿದ್ರೆ ಹ್ಯಾಗಾಗ್ಬಹುದು ಅಂತ ಯೋಚನೆ ಮಾಡ್ತಾರೆ. ಏನ್ ಊಟ ಮಾಡ್ತಾರೆ ಏನ್ ತಿಂತಾರೆ ಹೀಗೆಲ್ಲ ಯೋಚನೆ ಮಾಡ್ತಾರೆ. ಕೆಲವು ಸಲ ಬೆಂಡೆಕಾಯಿಯನ್ನು ಬೆಂಡೆಕಾಯಿ ಅಂತ ಹೇಳುವುದು ಅಥವಾ ಹೀರೆಕಾಯಿಯನ್ನು ಹೀರೆಕಾಯಿ ಅಂತ ಹೇಳುವುದು ಗೊತ್ತಾಗುವುದಿಲ್ಲ, ಅಂದ್ರೆ ಅಂಥ ತಮಾಷೆಯ ಸನ್ನಿವೇಶಗಳು ಕೂಡಾ ಬರ್ತಾ ಇದ್ದುದು ಉಂಟು. ಒಂದು ಈ ಭಾಗ– ಅಂದ್ರೆ ಸತತವಾಗಿ ದೇಶದ ಬಗ್ಗೆ ಚಿಂತನೆ. ಬಹುಶಃ ನಿದ್ರೆಯಲ್ಲೂ ಚಿಂತನೆ ಮಾಡ್ತಾ ಇದ್ರು ಅಂತ ಕಾಣ್ಸತ್ತದೆ. ಹೀಗೆ ಸದಾ ಕಾಲ ಈ ದೇಶವನ್ನ ಹೇಗೆ ಮುಂದಕ್ಕೆ ತರಬಹುದು ಅಂತ ಆಲೋಚನೆ ಮಾಡೋದು ಮಾತ್ರ ಅಲ್ಲ, ಆ ಯೋಜನೆಗಳ ರೂಪ ಹ್ಯಾಗಿರ್ತಿತ್ತು ಅಂದ್ರೆ ಆವಾಗಿನ ಕಾಲಮಾನದಲ್ಲಿ ಅದು ಆಗ್ತದೋ ಇಲ್ವೋ ಎಂಬ ಅನುಮಾನ ಬರುವಂಥ ಯೋಜನೆಗಳು ಇರ್ತಿದ್ವು ಆದ್ರೆ ಈಗ ಅದೇ ಯೋಜನೆಗಳು ಕಾರ್ಯರೂಪಕ್ಕೆ ಬಂದಾಗ, ಅನ್ನಸ್ತದೆ ಈ ಮೂವತ್ತು ವರ್ಷಗಳ ನಂತ್ರ, ಮೂವತ್ತು ವರ್ಷ ಆಯ್ತು ಅವ್ರು ತೀರ್ಕೊಂಡು, ಈಗ ಅನ್ನಿಸ್ತದೆ, ಹೀ ವೋಸ್ ಮಚ್ ಎಹೆಡ್ ಆಫ್ ಹಿಸ್ ಟೈಮ್ ಅಂತ. ಅಂದರೆ ಸುಮಾರು ಇಪ್ಪತ್ತು ವರ್ಷಗಳ ಮುಂದಕ್ಕೆ ಅವರ ಯೋಚನೆಗಳು, ಇರ್ತಾ ಇದ್ದವು.

## ಒಳಗಿನಿಂದ ಮೃದು ಹೊರಗಿನಿಂದ ಕಠಿಣ

ಇದು ಒಂದು ಭಾಗ ಆದ್ರೆ, ಇನ್ನೊಂದು ಕಡೆ ಏನಂತ ಅಂದ್ರೆ, ಮಾತಾಡುವಾಗ ಅವ್ರಿಗೆ ಸಿಟ್ಟು ಬಂತು ಅಥವಾ ಇದು ಸರಿಯಲ್ಲ ಅಂತ ಅನ್ನಿಸಿದ್ರೆ ಸರಿಯಲ್ಲ ಅಂತ ಯಾವದೇ ದಾಕ್ಷಿಣ್ಯ ಇಲ್ಲದೆ ಹೇಳಿಯೆ ಬಿಡೋದು. ಹೀಗಾಗಿ ಅವರ ರಾಜಕೀಯ ಜೀವನದಲ್ಲೂ ಆದಂಥ ಗೊಂದಲಗಳು ಅವ್ರ ಈ ನೇರ ನುಡಿಯಿಂದ ಅಂತ ನನಗೆ ಅನ್ನಿಸೋದು; ಈ ಕಾರಣದಿಂದ ಅಂತ ನನ್ನ ಭಾವನೆ. ಅವ್ರಿಗೆ ಏನು ಅನ್ನಿಸ್ತದೆಯೋ ಅದನ್ನು ಹೇಳಿಬಿಡೋದು. ಯಾರೇ ಆಗಿರ್ಲಿ, ತನ್ನವರಿರ್ಲಿ ಅಥವಾ ಬೇರೆಯವರೇ ಇರ್ಲಿ. ಒಂದು ತಪ್ಪು ಅಂತ ಹೇಳಿದ್ರೆ, ಡಿಫರೆನ್ಸ್ ಆಫ್ ಒಪಿನಿಯನ್ ಅಂದ ಮೇಲೆ ಅವ್ರು ಕಠಿಣ ಅಂತ ಕಾಣ್ತಾ ಇದ್ರು. ಹೀಗೆ ಪಟ ಪಟ ಮಾತಾಡ್ತಾ ಇದ್ದದ್ರಿಂದ ನಾವು ಅವ್ರು ಕಠಿಣ ಅಂತ ಅಂದುಕೊಳ್ತಾ ಇದ್ದೆವು ಹೊರ್ತು, ನಿಜಕ್ಕೂ ಅವ್ರು ಕಠಿಣ ಇರ್ಲಿಲ್ಲ. ಅದನ್ನು ಅಲ್ಲಿಗೇ

ಬಿಡ್ತಿದ್ದರೇ ವಿನಾ ಬೇರೆ ಭಾಗದಲ್ಲಿ ಅದನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಮುಗೀತು. ಆದ್ರೆ ಇನ್ನೊಂದು ದಿನ ನೀವು ಹಾಗೆ ಹೇಳಿದ್ದು ಉಂಟಲ್ಲ ಅಂದ್ರೆ ಅದನ್ನು ಅಲ್ಲಿಗೇ ಬಿಟ್ಟುಬಿಡುತ್ತಿದ್ದರು. ಒಳಗಿನಿಂದ ಮೃದು ಹೊರಗಿನಿಂದ  ಕಠಿಣ. ಇದು ಎರಡು ಮುಖ ಆಯ್ತು.

## ಏನೋ ಒಂದು ಹುಡುಕಾಟ

ಅವ್ರಿಗೆ ಇನ್ನೊಂದು ಮುಖ ಇತ್ತು- ಆ ಮುಖ ಏನಂತಂದ್ರೆ, ಏನೋ ಒಂದು ಹುಡುಕಾಟ.ಊರ್ನಲ್ಲಿ ಯಾವುದೇ ಕಾವಿಬಟ್ಟೆ ಬರ್ಲಿ, ಬಿಳಿಬಟ್ಟೆ ಬರ್ಲಿ ' ಅವ್ರು ಕಠಿಣ ಅಂತ ಕಾಣ್ತಾ ಇದ್ರು. ಹೀಗೆ ಪಟ ಪಟ ಮಾತಾಡ್ತಾ ಇದ್ದದ್ರಿಂದ ನಾವು ಅವ್ರು ಕಠಿಣ ಅಂತ ಅಂದುಕೊಳ್ತಾ ಇದ್ದೆವು ಹೊರ್ರು, ನಿಜಕ್ಕೂ ಅವ್ರು ಕಠಿಣ ಇರ್ಲಿಲ್ಲ. ಅದನ್ನು ಅಲ್ಲಿಗೇ ಬಿಡ್ತಿದ್ದರೇ ವಿನಾ ಬೇರೆ ಭಾಗದಲ್ಲಿ ಅದನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಮುಗೀತು. ಆದ್ರೆ ಇನ್ನೊಂದು ದಿನ ನೀವು ಹಾಗೆ ಹೇಳಿದ್ದು ಉಂಟಲ್ಲ ಅಂದ್ರೆ ಅದನ್ನು ಅಲ್ಲಿಗೇ ಬಿಟ್ಟುಬಿಡುತ್ತಿದ್ದರು. ಒಳಗಿನಿಂದ ಮೃದು ಹೊರಗಿನಿಂದ  ಕಠಿಣ. ಇದು ಎರಡು ಮುಖ ಆಯ್ತು.

## ಏನೋ ಒಂದು ಹುಡುಕಾಟ

ಅವ್ರಿಗೆ ಇನ್ನೊಂದು ಮುಖ ಇತ್ತು- ಆ ಮುಖ ಏನಂತಂದ್ರೆ, ಏನೋ ಒಂದು ಹುಡುಕಾಟ. ಊರ್ನಲ್ಲಿ ಯಾವುದೇ ಕಾವಿ ಬಟ್ಟೆ ಬರ್ಲಿ, ಬಿಳಿ ಬಟ್ಟೆ ಬರ್ಲಿ, ಅವ್ರ ಬೆನ್ನು ಹಿಡ್ದು ಹೋಗ್ತಾ ಇದ್ರು. ಅವ್ರತ್ರ ಇದ್ದಷ್ಟು ಆಧ್ಯಾತ್ಮಿಕ ಪುಸ್ತಕಗಳು ನನ್ನ ಲೈಫ್‌ನಲ್ಲಿ ಎಲ್ಲಿ ಕೂಡಾ ನೋಡ್ಲಿಲ್ಲ. ಅರವಿಂದೋ ಅವರ ಫುಲ್ ಎಡಿಷನ್, ಓಶೋ ಅವರ ಫುಲ್‌ಎಡಿಷನ್, ರಾಮಕೃಷ್ಣ ಪರಮಹಂಸರ ಎಲ್ಲಾ ಪುಸ್ತಕಗಳು, ಎಷ್ಟು ಬಂದಿದೆಯೋ ರಾಮಕೃಷ್ಣ



ಭಗವಾನ್ ಶ್ರೀ ಸತ್ಯ ಸಾಯಿ ಬಾಬಾ
ಅವರ ಜತೆಗೆ ಡಾ. ಟಿ.ಎಂ.ಎ.ಪೈ ಮತ್ತಿತರರು

ಮಠದಿಂದ ಅಷ್ಟು ಪುಸ್ತಕಗಳು, ಸಾಯಿ ಬಾಬಾರ ಪುಸ್ತಕಗಳು, ನೀವು ಏನು ಬೇಕಾದರೂ ಕೇಳಿ, ಅವೆಲ್ಲ ಪುಸ್ತಕಗಳು ಅವರಲ್ಲಿತ್ತು.

ಒಂದು ಉದಾಹರಣೆ ಹೇಳ್ತೇನೆ , ನನ್ಗೆ ಒಂದು ಪುಸ್ತಕ ಓದುವ ಆಸೆಯಿತ್ತು, ಪುಸ್ತಕ ಸಿಕ್ಕಿರ್ಲಿಲ್ಲ, 'ಸರ್ಚ್ ಥ್ರೂ ಸೀಕ್ರೆಟ್ ಇಂಡಿಯಾ' ಅಂತೇಳಿ, ಸಿಕ್ಕಿರ್ಲಿಲ್ಲ. ಅವ್ರು ಊರಿಗೆ ಬಂದಾಗ ಆ ಪುಸ್ತಕ ಉಂಟಾ ನಿಮ್ಹತ್ರ ಅಂತ ಕೇಳಿದೆ. ಒಬ್ಬ ಬ್ರಿಟಿಷ್ ಸೇನಾಧಿಪತಿ ಭಾರತದಲ್ಲಿ ಸಂತರ ಹುಡುಕಾಟ ನಡೆಸಿದಂಥ ಒಂದು ಅದ್ಭುತವಾದ ಅಪರೂಪದ ಪುಸ್ತಕ. ಅವ್ಟ್ ಆಫ್ ಪ್ರಿಂಟಿತ್ತು.

"ಹೌದೌದು, ನಿನಗೆ ಇಂಟರೆಸ್ಟ್ ಉಂಟಾ?" ಅಂತ ಕೇಳಿದ ಕೂಡ್ಲೆ ತೆಗೆದು ಕೊಟ್ರು. ರಾಮಕೃಷ್ಣ ಇರ್ಲಿ ರಮಣ ಮಹರ್ಷಿ ಇರ್ಲಿ, ನೀವು ಕೇಳಿದ್ದೆಲ್ಲ ಅವ್ರ ಹತ್ರ ಇರ್‍ತಿತ್ತು.

ಹೀಗೆ, ಆಧ್ಯಾತ್ಮದ ಒಂದು ಹುಡುಕಾಟ, ಅದನ್ನು ಹೇಳ್ಕೊಳ್ತಾ ಇರ್ಲಿಲ್ಲ, ಎಲ್ಲಿ ಯಾರು ಬಂದ್ರು ಕೂಡಾ ಹೋಗ್ತಿದ್ರು, ನಂಬ್ತಾ ಇದ್ರು. ಇದು ಹುಡುಕಾಟದ ಒಂದು ಮುಖ. ಅಂದ್ರೆ ಎಲ್ಲೋ ಏನೋ ಇದೆ. ಅಂತ್ಹೇಳಿ.. ಎಷ್ಟೋ ಸಂಜೆಗಳನ್ನ ಅವ್ರ ಜೊತೆಯಲ್ಲಿ ನಾನು ಕೂತ್ಕೊಳ್ತಾ ಮಾತಾಡ್ತಾ ಕಳೆದಿದ್ದಿದೆ. ಪ್ರಾಣ ಎಂಬುದು ಬೇರೆ, ಜೀವ ಅನ್ನೋದು ಬೇರೆಯ... ಅಥವಾ ಎರಡೂ ಒಂದೆಯ? ಇದರ ಮೂಲ ಯಾವುದು? ಇದನ್ನ ಮಾತಡ್ತಾ ಮಾತಾಡ್ತಾ ಗಂಟೆಗಟ್ಲೆ ಕೂತ್ಕೊಂಡು, ಚರ್ಚೆ ಮಾಡಿದ್ದಿದೆ. ಪ್ರಾಣ ಒಂದಿದೆಯಂತಾದ್ರೆ ಗಿಡದಲ್ಲಿ ಒಂದೆಯ? ಮನುಷ್ಯನಲ್ಲಿಯೂ ಒಂದೆಯಾ? ಹಾಗಾದ್ರೆ ಆತ್ಮಕ್ಕೂ ಪ್ರಾಣಕ್ಕೂ ಏನು ಡಿಫರೆನ್ಸು? ಇದು...

**ಎಷ್ಟೋ ಮುಖಗಳು**



ಆಮೇಲೆ ಜ್ಯೋತಿಷ್ಯದಲ್ಲಿ ಆಸಕ್ತಿ. ಯಾವ ಜ್ಯೋತಿಷಿ ಕಂಡ್ರೂ ಅವ್ರ ಹಿಂದೆ ಹೋಗ್ತಾ ಇದ್ರು. ಯಾರು ಏನೋ ಒಂದು ಪೂಜೆ ಹೇಳ್ದ್ರೆ ನಡೆಸ್ತಿದ್ರು. ಅಂದ್ರೆ ಏನೋ ಒಂದು ಆಗುತ್ತೆ ಅಂತ ಹೇಳುವಂಥ ಒಂದು ಹುಡುಕಾಟ. ಈ ಹುಡುಕಾಟದ ಮುಖವನ್ನ ನಮ್ಮ ಕುಟುಂಬದ ಬೇರೆ ಯಾರಲ್ಲೂ ನೋಡ್ಲಿಲ್ಲ. ಹೀಗೆ ಈ ಒಂದು ವ್ಯಕ್ತಿಗೆ ಎಷ್ಟೋ ಮುಖಗಳಿದ್ವು. ಹೇಳ್ತಾ ಹೋದ್ರೆ ಬಹುಶಃ ವೋಲ್ಯೂಂಗಳು ತುಂಬಬಹುದೋ ಅಂತ ಗೊತ್ತಿಲ್ಲ ನನಗೆ. ಆದ್ರೆ ಆ ಸಣ್ಣ ಅವಧಿಯಲ್ಲಿ, ನಾನು ಕಂಡದ್ದು ಈ ಮುಖಗಳನ್ನ.

## ಸಮಾನ ಚಿಂತನೆಯ ಓರ್ವ ಫ್ರೆಂಡ್

ಒಂದನಿಸ್ತದೆ ಏನೂಂತಂದ್ರೆ, ತೀರಾ ಟೈಮಿಗೆ ಮೊದ್ಲೇ, ಯಾಕಂತಂದ್ರೆ ಮುಂದೆ ಇವ್ರು ಬದುಕಿರುತಿದ್ರೆ,, ಬಹುಶಃ ಭಾರತಕ್ಕೊಂದು ಹೊಸ, ಭಾರತದ ಉನ್ನತಿಯ ಚಿಂತನೆಗೊಂದು ಹೊಸ ಡೈಮೆನ್ಶನ್ ಕೊಡ್ತಾ ಇದ್ರೇನೋ! ನಮಗೆ ಬಹಳ ಲಾಭ ಆಗ್ತಿತ್ತು ಅಂತ ಅನ್ನಿಸ್ತದೆ. ಯಾಕಂದ್ರೆ ಅವ್ರು ತೀರಿಕೊಂಡಾಗ, ಆಕಸ್ಮಿಕವಾಗಿ ಅವ್ರು ತೀರಿಕೊಂಡಾಗ, ಅದೊಂದು ಫ್ರೆಂಡು ಅಂತ ಹೇಳ್ಬಹುದು, ನನಗೆ ಭಾವ ಹೌದು, ನನಗಿಂತ ತುಂಬಾ ಹಿರಿಯರೂ ಹೌದು. ಎಲ್ಲವೂ ಹೌದು. ಆದ್ರೆ ಒಂದು ಸಮಾನ ಚಿಂತನೆಯ, ಸಮಾನ ಮನಸ್ಕರನ್ನು ನಾನವರಲ್ಲಿ ಕಂಡಿದ್ದೆ. ಅವರ ಸ್ಥಾನಮಾನದ ಅವರ ವಯಸ್ಸಿನ ಯಾವ ಡಿಫೆರನ್ಸನ್ನೂ ಕಾಣ್ಲಿಲ್ಲ. ನನಗೊಬ್ಬ ಆತ್ಮೀಯ ಗೆಳೆಯ ಅಗಲಿದ ಹಾಗೆ. ಯಾಕಂದ್ರೆ ಒಂದು ಸಣ್ಣ ಇನ್ಸಿಡೆಂಟ್–

ನನ್ನ ಮದುವೆಯಾದ ದಿನ. ಅಂದು ರಾತ್ರಿ ಊಟಕ್ಕೆ ತಯಾರು ಮಾಡಿದ್ರು, ಹೋದೆ, ಎಲ್ಲಾ ಗಂಡಸ್ರು ನಾನು ಒಬ್ಳೇ ಹೆಣ್ಣು, ನನ್ನ ಮದುವೆಯಾದ ಫರ್ಸ್ಟ್ ದಿನ ಬೇರೆ. ಏನು ಮಾಡ್ಬೇಕೂಂತ ಗೊತ್ತಾಗ್ಲಿಲ್ಲ, ಲೈಬ್ರೆರಿಯಲ್ಲಿ ಹೋದಾಗ ನನಗೆ ಬಹಳ ಖುಷಿಯಾಯ್ತು. ಆ ಪುಸ್ತಕ ಈ ಪುಸ್ತಕ ಅಂತ ತೆಗ್ದು ತೆಗ್ದು ನೋಡ್ತಾ ಇದ್ದೆ. ಫಕ್ಕನೆ ಯಾರೋ ಪಕ್ಕದಲ್ಲಿ ನಿಂತ ಹಾಗಾಯ್ತು.. ನೋಡ್ತೇನೆ, ಇವ್ರು. ನಿನ್ಗೂ ಓದುವ ಅಭ್ಯಾಸ ಇದೆಯಾ ಅಂದ್ರು. ಆಯ್ತು ನಮ್ಮಲ್ಲಿ ಸಲುಗೆಯ ನಂಟು.

## ನಿನಗೂ ನಾನು ಅಣ್ಣನೇ

ಗಂಡನ ಅಣ್ಣನನ್ನು ಬಹುವಚನದಲ್ಲಿ ಸಂಬೋಧಿಸುವುದು ಕ್ರಮ ಇದೆ. 'ಹೌದು' ಅಂತ ನಾನು ಬಹು ವಚನದಲ್ಲಿ ಹೇಳಿದೆ. ಕೂಡ್ಲೇ ಹೇಳಿದ್ರು, ಅವೆಲ್ಲ ಫಾರ್ಮಾಲಿಟೀಸ್ ಬೇಡ. ಸತೀಶ್ ನನ್ಗೆ ಹೇಗೆ ಅಣ್ಣ ಅಂತ ಕರೀತಾನೋ, ನೀನು ಕೂಡಾ ಹಾಗೆ ನನ್ಗೆ ಅಣ್ಣ ಅಂತ ಕರೆದ್ರೆ ಸಾಕು. ಆಮೇಲೆ ಯಾವಾಗ ಬೇಕಾದ್ರೂ ಬಂದು ಯಾವ ಪುಸ್ತಕ ಬೇಕಾದ್ರೂ ಬಂದು ತೆಕ್ಕೊಂಡು ಹೋಗು ಅಂದ್ರು.

ಅವ್ರ ಪುಸ್ತಕ ಮುಟ್ಟುವ ಧೈರ್ಯ ಯಾರಿಗೂ ಇರ್ಲಿಲ್ಲ. ಆಮೇಲೆ ಯಾವ ಪುಸ್ತಕ ಓದ್ತಾ ಇದ್ದೀಯ ಅಂತ ಕೇಳಿದ್ರು. ಹೀಗೆ. ಓ.ಕೆ. ನಾಳೆ ಮಾತಾಡ್ತೀನಿ ನಿನ್ಹತ್ರ ಅಂತ ಹೋದ್ರು.




ಹಾಗೆ ಒಂದು ಸರಳತೆ- ಇಷ್ಟ್ರ ತನಕ ನಮ್ಮ ಕುಟುಂಬದಲ್ಲಿ ಹಾಗಾದದ್ದೇ ಇಲ್ಲ. ಅಣ್ಣ ಅಂತ ಕರೀ, ಭಾವ ಅಂತ ಕರೀ ಹೀಗಂತ ಹೇಳಿದ್ದು, ಆದ್ರೆ ಆವತ್ತಿನಿಂದ, ಹ್ಯಾಗೆ ಹೇಳೋದು, ಅಣ್ಣ ಮಾತ್ರ ಅಲ್ಲ, ಒಂದು ತಂದೆಯ ಹಾಗೆ ಅಂತ ಹೇಳ್ಬಹುದು. ಅವ್ರು ಸಿಕ್ಕಿದ್ರು, ಎಷ್ಟು ಮಟ್ಟಿಗೆ ಅಂತಂದ್ರೆ, ಸತೀಶ್ ಪೈಗಳಿಗೆ ಗೊತ್ತುಂಟು, ನಮ್ಮಲ್ಲಿ ಏನದ್ರೂ ಜಗಳ ಮುಂತಾದ್ದು ಆದ್ರೆ ನಾನು ಅವ್ರಲ್ಲಿ ದೂರು ತೆಕ್ಕೊಂಡು ಹೋದಾಗ, ನನ್ನನ್ನು ಸಪೋರ್ಟ್ ಮಾಡೋದು ಹೊರ್ತು ತಮ್ಮನನ್ನಲ್ಲ. ಸತೀಶ್ ಪೈಗಳಿಗೆ ಕರೆದು ಹೇಳ್ತಾ ಇದ್ರು, ನೀನು ಹಾಗೆ ಮಾಡಿದ್ಯೇನು? ಅಂತ. ಆದ್ರಿಂದ ಸತೀಶ್ ಪೈಗಳು ಯಾರನ್ನು ಹೆದ್ರತ್ತ ಇಲ್ಲದೇ ಇರ್ತಿದ್ರೂ ಅವ್ರಲ್ಲಿ ಹೇಳ್ತೇನೆ ಅಂತಂದ್ರೆ ಹೆದ್ರುತಿದ್ರು. ಹೀಗೆ ನನಗೆ ಎಂದೂ ಕೂಡಾ ಗಂಡನ ಅಣ್ಣ ತಂದೆಯ ಹಾಗೆ ನಡಕೊಂಡ್ರು.

## ಮುಖವಾಡವಿಲ್ಲದ ಅದ್ಭುತ ಜೀವ

ಸತೀಶ್ ಪೈಗಳಿಗೂ ಅವ್ರಿಗೂ 21 ವರ್ಷಗಳ ಡಿಫರೆನ್ಸು.. ಟಿ.ಎ. ಪೈಗಳು ಮೊದಲನೆಯವರು ಮತ್ತು ಸತೀಶ್ ಪೈಗಳು ಕೊನೆಯವ್ರು. ಆದ್ರೆ ಎಲ್ಲಿತ್ತು ಡಿಫರೆನ್ಸು? ಅಂದ್ರೆ ನನಗಿಂತ 26ವರ್ಷ ದೊಡ್ಡವ್ರು.. ಈ ಯಾವುದೇ ವಯಸ್ಸಿನ, ಸ್ಥಾನಮಾನಗಳ, ಬುದ್ಧಿವಂತಿಕೆಯ ಯಾವ ಡಿಫರೆನ್ಸೂ ಇಲ್ಲದೆ, ನನ್ನನ್ನು ಒಂದು ತಂಗಿಯ ಹಾಗೆ, ಮಗಳ ಹಾಗೆ, ಫ್ರೆಂಡಿನ ಹಾಗೆ ಕಂಡ ಒಂದು ಜೀವ ಅದು. ಎಷ್ಟೋ ಸಲ, ಅಂದ್ರೆ ಇವತ್ತು ಕೂಡಾ ನಾನು ಮಿಸ್ ಮಾಡ್ತೇನೆ ಅವ್ರನ್ನ. ಪುಸ್ತಕ ಓದ್‌ದಾಗ, ಛೆ, ಅವಿದ್ರೆ ಅವ್ರತ್ರ ಚರ್ಚೆ ಮಾಡ್ಬಹುದಿತ್ತು, ಹೀಗೆ ಒಂದು ವ್ಯಕ್ತಿತ್ವದ ಇಂಥ ಒಂದು ಅದ್ಭುತವಾದ ಒಂದು ಜೀವ. ವ್ಯಕ್ತಿತ್ವ ಅಂತ ಹೇಳಿದ್ರೆ, ದೊಡ್ಡ ಅರ್ಥ ಇದೆ. ಈಗ ನಾವು ಪರ್ಸನಾಲಿಟಿ ಅಂತ ಹೇಳ್ತೀವೆ. 'ಪರ್ಸನಾ' ಅಂದ್ರೆ ಒಂದು ಮುಖವಾಡ ಅಂತ ಅರ್ಥ. ಪರ್ಸನಾಲಿಟಿ ಅಂತ ಹೇಳಿದ್ರೆ, ಮುಖವಾಡಗಳನ್ನ ಧರಿಸುವುದು, ಅಂದ್ರೆ ಅದರಲ್ಲಿ ಸಹಜತೆ ಇರುವುದಿಲ್ಲ. ಪರ್ಸನಾಲಿಟಿ ಇಲ್ಲದ, ಮುಖವಾಡ ಇಲ್ಲದ ಒಂದು ಅದ್ಭುತ ಜೀವವದು ಅನ್ನಬಹುದು.(ಹೀಗೆ ಹೇಳುವಾಗ ಶ್ರೀಮತಿ ಸಂಧ್ಯಾ ಅವರ ಕಣ್ಣುಗಳು ತೇವಗೊಂಡಿದ್ದವು).

***

# ದೂರದೃಷ್ಟಿಯ ದ್ರಷ್ಟಾರ

**–ಡಾ. ಎನ್.ಕೆ.ತಿಂಗಳಾಯ**

**ಸಿಂಡಿಕೇಟ್ ಬ್ಯಾಂಕಿನ ಮಾಜಿ ಅಧ್ಯಕ್ಷರು**



ಮುಂಬಯಿ ವಿಶ್ವವಿದ್ಯಾಲಯದಲ್ಲಿ ಅರ್ಥ ಶಾಸ್ತ್ರದಲ್ಲಿ ಪಿಎಚ್.ಡಿ. ಪದವಿಗಾಗಿ ಓದುತ್ತಿರುವಾಗ ಶ್ರೀಟಿ.ಎ.ಪೈಯವರೊಂದಿಗೆ ನನ್ನ ಪ್ರಥಮ ಭೇಟಿಯಾಯಿತು–1966ರಲ್ಲಿ. ಅವರು ಒಂದು ಸೆಮಿನಾರ್‌ಗೆ ಬಂದಿದ್ದರು. ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ನನ್ನ ತಂದೆಯವರ ಪರಿಚಯವಿದ್ದ ಶ್ರೀಪೈಯವರು ನನ್ನ ಮುಂದಿನ ಯೋಜನೆಯ ಬಗ್ಗೆ ವಿಚಾರಿಸಿದರು. ಅಧ್ಯಾಪಕನಾಗಿ ನಾನು ಸರಸ್ವತಿಯ ಆರಾಧಕನಾಗಿ ಇರಬೇಕಂತ ಬಯಸಿದ್ದೆ. ಗ್ರಾಮೀಣ ಕ್ಷೇತ್ರದ ಪ್ರಗತಿಗಾಗಿ ದುಡಿಯಬೇಕೆನ್ನುವ ಬಯಕೆ ಇದೆ, ಎಂದೆ. ಹಾಗಾದರೆ ನಮ್ಮ ಬ್ಯಾಂಕ್ ಸೇರಿ ಗ್ರಾಮೀಣ ಪ್ರದೇಶದ ಆರ್ಥಿಕ ಅಭಿವೃದ್ಧಿಯ ಕೆಲಸ ಮಾಡಬಹುದು ಎಂದು ಕರೆ ನೀಡಿದರು. ಗ್ರಾಮ ಸ್ವರಾಜ್ಯದ ಗಾಂಧೀಜಿಯವರ ಕನಸು ನನಸಾಗಿಸುವ ಸುಸಂದರ್ಭ ಒದಗಿ ಬಂತೆಂದು ಬಹಳ ಸಂತೋಷದಿಂದ ಒಪ್ಪಿ, ಲಕ್ಷ್ಮಿಯ ಆರಾಧಕರ ಸೇವಕನಾಗಿ ಬ್ಯಾಂಕ್ ಸೇರಿದೆ. ನನ್ನ ವೃತ್ತಿ ಜೀವನ ಇಲ್ಲಿಂದ ಪ್ರಾರಂಭವಾಯಿತು. ಮಣಿಪಾಲದ ಮುಖ್ಯ ಕಚೇರಿಯಲ್ಲಿ ಆರ್ಥಿಕ ಸಂಶೋಧನಾ ವಿಭಾಗದ ಮುಖ್ಯಸ್ಥ ಹಾಗೂ ಆರ್ಥಿಕ ಸಲಹೆಗಾರನಾಗಿ ಸೇರಿದೆ.

## ಪೈಗಳು ಕೊಟ್ಟ ಅಂಒಂದು ಬ್ಲಾಂಕ್ ಚೆಕ್!

ಆ ಕಾಲದಲ್ಲಿ (1966) ದೇಶದ ಎರಡು ದೊಡ್ಡ ಬ್ಯಾಂಕುಗಳಲ್ಲಿ– ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಬ್ಯಾಂಕ್ ಆಫ್ ಬರೋಡಾದಲ್ಲಿ– ಮಾತ್ರ ಆರ್ಥಿಕ ಸಂಶೋಧನಾ ವಿಭಾಗಗಳು ಸ್ಥಾಪನೆಯಾಗಿದ್ದವು. ಸಿಂಡಿಕೇಟ್ ಗಾತ್ರದಲ್ಲಿ ಮತ್ತು ವ್ಯವಹಾರದಲ್ಲಿ ಬಹಳ ಸಣ್ಣದಾಗಿದ್ದರೂ, ಶ್ರೀ ಪೈಯವರ ದೂರದರ್ಶಿತ್ವದ ಫಲಸ್ವರೂಪವಾಗಿ, ಸಿಂಡಿಕೇಟ್ ಬ್ಯಾಂಕಿನಲ್ಲಿ ಈ ವಿಭಾಗದ ಸ್ಥಾಪನೆಯಾಗಿ, ಬ್ಯಾಂಕಿನಲ್ಲಿ ಅನೇಕ ಉಪಯುಕ್ತ ಸಂಶೋಧನಾ ಕಾರ್ಯಗಳನ್ನು ಮಾಡಲಾಯಿತು. ಇತರ ಎಲ್ಲಾ ಬ್ಯಾಂಕುಗಳಲ್ಲಿ ಈ ವಿಭಾಗದ ಸ್ಥಾಪನೆಯಾದುದು ರಾಷ್ಟ್ರೀಕರಣವಾದ ಬಳಿಕ. ಇದಕ್ಕೆ ಕಾರಣರು ಶ್ರೀಟಿ.ಎ.ಪೈಯವರು. ಇದು ಅವರು ಕೊಟ್ಟಂಥ ಒಂದು ಬ್ಲಾಂಕ್ ಚೆಕ್!

## ಗ್ರಾಮೀಣ ಸರ್ವೆ

ನಾನು ಮಾಡಿದ ಮೊತ್ತಮೊದಲ ಸರ್ವೆ, ಗ್ರಾಮೀಣ ಗ್ರಾಹಕರ ಆರ್ಥಿಕ ಪರಿಸ್ಥಿತಿ ಹೇಗಿದೆ, ಅವರು ಯಾಕೆ ಉಳಿತಾಯ ಮಾಡುವುದಿಲ್ಲ? –ಇವುಗಳ ವಿಶ್ಲೇಷಣೆ. ನಮ್ಮ ಜಿಲ್ಲೆಯ ಹತ್ತು ಗ್ರಾಮೀಣ ಊರುಗಳಲ್ಲಿ ಸರ್ವೆ ಮಾಡಿದಾಗ, ಮೊತ್ತಮೊದಲ ವರದಿಯನ್ನು, ಟಿ.ಎ.ಪೈಯವರು ನನ್ನನ್ನು ಕರೆದು, ಆ 30ಪುಟಗಳ ವರದಿಯನ್ನು ಉನ್ನತ ಅಧಿಕಾರಿಗಳನ್ನು ಕೂತುಕೊಳ್ಳಿಸಿ, ಓದಿದರು. ಅದರಲ್ಲಿ ನಾನು ಒಂದು ವಿಚಾರ ಹೇಳಿದ್ದೆ. ನಮ್ಮ ಜಿಲ್ಲೆಯಲ್ಲಿ ಉಳಿತಾಯದ ಸಂಗ್ರಹಣೆ ಹೆಚ್ಚಾಗಬೇಕಾದರೆ, ಇಲ್ಲಿಗೆ ಮನಿಯಾರ್ಡರ್ ಮೂಲಕ ಹಣ ಬರುವ ಬದಲಿಗೆ, ಅದು ಸೇವಿಂಗ್ಸ್ ಬ್ಯಾಂಕ್ ಅಕೌಂಟ್‌ಗಳಿಗೆ ಹಣ ಬರುವಂತೆ ಮಾಡಿದರೆ, ತಂದೆ, ಇಲ್ಲಿ ಮನೆಯಲ್ಲಿರುವ ಮುದುಕ, ಮಗ ಕಳಿಸಿದ ಸಂಪೂರ್ಣ ಹಣವನ್ನು ಖಾಲಿ ಮಾಡದೆ, ಎಷ್ಟು ಬೇಕೋ ಅಷ್ಟನ್ನೇ ತೆಗೆದುಕೊಳ್ಳುತ್ತಾನೆ. ಅದರ ಬದಲು ಅದು ಮನಿಯಾರ್ಡರ್ ಬಂದರೆ ಪೂರ್ಣ ಹಣ ಅವನ ಕೈಗೆ ಸಿಗುವುದರಿಂದ, ಖರ್ಚು ಮಾಡುವ ಸಾಧ್ಯತೆ ಇದೆ. ಆದ್ದರಿಂದ ಒಂದು ಉಳಿತಾಯ ಖಾತೆಯಿಂದ ಮತ್ತೊಂದು ಉಳಿತಾಯ ಖಾತೆಗೆ ಹೆಚ್ಚು ಖರ್ಚಿಲ್ಲದೆ ಹಣದ ರವಾನೆಯಾಗುವಂಥ ವ್ಯವಸ್ಥೆಯನ್ನು ನಮ್ಮ ಬ್ಯಾಂಕಲ್ಲೇ ಮಾಡಬೇಕೂಂತ ಹೇಳಿದ್ದೆ. ಅದನ್ನು ಬ್ಯಾಂಕ್ ಮಾಡಿತು. ಇದರಿಂದಾಗಿ ಈವೊತ್ತು ನಮ್ಮ ಜಿಲ್ಲೆಯಲ್ಲಿ ಜನರಲ್ಲಿ ಉಳಿತಾಯ ಮನೋಭಾವನೆಯನ್ನು ಕಲ್ಪಿಸಿಕೊಟ್ಟಿದ್ದೇವೆ. ಅದರಿಂದ ನಮ್ಮ ಜಿಲ್ಲೆಯಲ್ಲಿ ಬ್ಯಾಂಕುಗಳು ಸಮೃದ್ಧವಾಗಿ ಬೆಳೆದಿವೆ.

## ಬಡಬೇಸಾಯಗಾರನಿಗೆ ಸಾಲ

ಶ್ರೀ ಪೈಯವರು ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕುಗಳು ತಮ್ಮ ಶಾಖೆಗಳನ್ನು ತೆರೆಯುವ ವಿಚಾರದಲ್ಲಿ ತನ್ನ ದೂರದರ್ಶಿತ್ವವನ್ನು ವ್ಯಕ್ತಪಡಿಸಿರುವ ಅನೇಕ ಉದಾಹರಣೆಗಳಿವೆ. ಅವರಿಗೆ ಗ್ರಾಮೀಣ ಅಭಿವೃದ್ಧಿಯಲ್ಲಿ ಇದ್ದ ಕಾಳಜಿಯನ್ನು ನಾನು ಬೇರೆ ಯಾವ ಬ್ಯಾಂಕು ಅಧ್ಯಕ್ಷರಲ್ಲಿ ಕಂಡಿಲ್ಲ. ಭಾರತ ಸರಕಾರವು ಬ್ಯಾಂಕುಗಳ ರಾಷ್ಟ್ರೀಕರಣ ಮಾಡಿ, ಬ್ಯಾಂಕುಗಳು ಹಳ್ಳಿಗೆ ತೆರಳುವಂತೆ ಮಾಡುವ ಮೊದಲೇ ಅವರು ಇದರ ಅವಶ್ಯಕತೆಯನ್ನು ಮನಗಂಡಿದ್ದರು.

ಆಂಧ್ರ ಪ್ರದೇಶದಲ್ಲಿ ಕಾರ್ಯರೂಪಗೊಂಡ ನಾಗಾರ್ಜುನ ಸಾಗರ ನೀರಾವರಿ ಯೋಜನೆಯಿಂದ ಸಹಸ್ರಾರು ಹಳ್ಳಿಗಳಿಗೆ ನೀರಾವರಿಯ ಪ್ರಯೋಜನ ದೊರಕುವ ಸಂದರ್ಭ 1966ರಲ್ಲಿ ಒದಗಿ ಬಂದಿತ್ತು. ನೆಲಕ್ಕೆ ನೀರುಣಿಸುವಾಗ, ಉಳುವವನಿಗೆ ಸಾಲದ ಆವಶ್ಯಕತೆ ಹೆಚ್ಚಾಗುತ್ತದೆ. ಬ್ಯಾಂಕುಗಳ ಶಾಖೆಗಳೇ ಇಲ್ಲದ ಹಳ್ಳಿಗಳಲ್ಲಿ ಬಡಬೇಸಾಯಗಾರ ಸಾಲವನ್ನು ಪಡೆಯುವುದಾದರೂ ಎಲ್ಲಿಂದ? ಅದಕ್ಕಾಗಿ ಆ ಪ್ರದೇಶದ ಸರ್ವೆ ಮಾಡಿ, ಎಲ್ಲ ಬ್ಯಾಂಕು ಶಾಖೆಗಳನ್ನು ತೆರೆಯಬಹುದೆಂದು ಯೋಜನೆ ಸಿದ್ಧಪಡಿಸುವಂತೆ ಶ್ರೀ ಪೈಯವರು ನನಗೆ ಸಲಹೆ ನೀಡಿದರು.

## ಲೀಡ್ ಬ್ಯಾಂಕ್ ಸ್ಕೀಮ್‌ನ ಕಲ್ಪನೆ

ಒಂದು ತಿಂಗಳು ನಾಗಾರ್ಜುನ ಸಾಗರ ನೀರಾವರಿ ಯೋಜನೆ ಪ್ರಯೋಜನ ಪಡೆಯತಕ್ಕ ಹಳ್ಳಿಗಳ ಸರ್ವೆ ಮಾಡಿ ಅಲ್ಲಿ ಎಷ್ಟು ಬ್ಯಾಂಕ್ ಶಾಖೆಗಳನ್ನು ತೆರೆಯಬಹುದು ಅಂತ ಒಂದು ದೊಡ್ಡ ಪಟ್ಟಿ ಮಾಡಿದೆವು. ಇದು ಮುಂದೆ ನಮ್ಮ ದೇಶದಲ್ಲಿ ಬಂದಂಥ ಲೀಡ್ ಬ್ಯಾಂಕ್ ಸ್ಕೀಮ್‌ಗಳಿಗೆ ಒಂದು ನಾಂದಿಯಾಯಿತು. ಭಾರತ ಸರಕಾರವು ಲೀಡ್ ಬ್ಯಾಂಕ್ ಸ್ಕೀಮನ್ನು ಆಲೋಚನೆ ಮಾಡುವ ಮೊದಲೇ, ಬ್ಯಾಂಕುಗಳ ರಾಷ್ಟ್ರೀಕರಣ ಆಗುವ ಮೊದಲೇ, ಟಿ.ಎ.ಪೈಯವರು ಗ್ರಾಮೀಣ ಅಭಿವೃದ್ಧಿಗಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಶಾಖೆಗಳನ್ನು ತೆರೆಯುವಂಥ ಒಂದು ಯೋಜನೆ, ನಮ್ಮಿಂದ ನಾಗಾರ್ಜುನ ಸಾಗರದ ಪ್ರದೇಶದಲ್ಲಿ ಮಾಡಿಸಿದ್ದಾರೆ. ಆ ನಮ್ಮ ವರದಿ ಬಂದ ಮೇಲೆ, ರಿಸರ್ವ್ ಬ್ಯಾಂಕಿಗೆ ಕೊಟ್ಟ ಬಳಿಕ, ನಮ್ಮ ಬ್ಯಾಂಕ್‌ಗಳಿಗೆ ಮತ್ತು ಇತರ ಬ್ಯಾಂಕುಗಳಿಗೆ ಅಲ್ಲಿ

ಶಾಖೆಗಳನ್ನು ತೆರೆಯುವಂತೆ ಆದೇಶ ದೊರೆತು ಈಗ ಸುಮಾರು ಮುನ್ನೂರಕ್ಕೂ ಹೆಚ್ಚು ಗ್ರಾಮಾಂತರ ಪ್ರದೇಶಗಳಲ್ಲಿ ಬ್ಯಾಂಕುಗಳ ಶಾಖೆಗಳು ಅಲ್ಲಿವೆ.



ಸಂದರ್ಭ: ಸಿಂಡಿಕೇಟ್ ಬ್ಯಾಂಕಿನ ಆರ್ಥಿಕ ತಜ್ಞರ ಸಮಾವೇಶ(1988)ಸತ್ಕಾರ ಕೂಟ. ಶ್ರೀಜನಾರ್ಧನ್, ಶ್ರೀಮತಿ ಪ್ರತಿಭಾ ತಿಂಗಳಾಯ, ಡಾ.ತಿಂಗಳಾಯ, ಶ್ರೀಎಂ.ವಿ.ದೇಶಪಾಂಡೆ(ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾದ ಆರ್ಥಿಕ ತಜ್ಞ, ಮತ್ತು ಶ್ರೀ ಟಿ.ಎ.ಪೈ)

ರಿಸರ್ವ್ ಬ್ಯಾಂಕಿನ ಆದೇಶದಂತೆ ಮುಂದೆ ಜಂಟಿ ಸರ್ವೆ ಅಂತ ಮಾಡಿದೆವು. ಆಂಧ್ರದಲ್ಲೇ ವೆಲ್ಲೂರು ಮತ್ತು ಕೃಷ್ಣಾ ಜಿಲ್ಲೆಗಳಲ್ಲಿ, ರಿಸರ್ವ್ ಬ್ಯಾಂಕಿನಿಂದ ಇಬ್ಬರು ಮತ್ತು ಸಿಂಡಿಕೇಟ್ ಬ್ಯಾಂಕಿನಿಂದ ನಾನು, ಹೀಗೆ ಮೂರು ಜನ ಸೇರಿ ಗ್ರಾಮಾಂತರ ಪ್ರದೇಶಗಳಲ್ಲಿ ಶಾಖೆಗಳನ್ನು ತೆರೆಯುವುದಕ್ಕೆ ವ್ಯವಸ್ಥೆಗಳನ್ನು ಮಾಡಿದೆವು. ಇದು ಕೂಡಾ ಲೀಡ್ ಬ್ಯಾಂಕ್ ಯೋಜನೆಯು ಬರುವುದಕ್ಕೆ ಮೊದಲು ಆದದ್ದು. ಹೀಗೆ ಗ್ರಾಮಾಂತರ ಪ್ರದೇಶಗಳಲ್ಲಿ ಶಾಖೆಗಳನ್ನು ತೆರೆದು ಅದನ್ನು ಉತ್ತಮ ಮಟ್ಟಕ್ಕೆ ಲಾಭದಾಯಕವಾಗಿ ನಡೆಸುವ ಶ್ರೇಯಸ್ಸು ಸಿಂಡಿಕೇಟ್ ಬ್ಯಾಂಕಿಗೆ ಸಲ್ಲುತ್ತದೆ. ಇದರ ರೂವಾರಿ ಶ್ರೀ ಪೈಯವರು.

## ವೈ.ಬಿ. ಚವ್ಹಾಣ್ ಮಣಿಪಾಲಕ್ಕೆ

1969ರಲ್ಲಿ ಬ್ಯಾಂಕ್ ರಾಷ್ಟ್ರೀಕರಣವಾಯಿತು. ರಾಷ್ಟ್ರೀಕರಣ ಆದ ಮೇಲೆ, ಟಿ.ಎ.ಪೈಯವರು, 1971ನೇ ಇಸವಿಯಲ್ಲಿ, ಭಾರತೀಯ ಜೀವವಿಮಾ ನಿಗಮಕ್ಕೆ ಅಧ್ಯಕ್ಷರಾಗಿ ಹೋಗಬೇಕಾಯಿತು. ಆಗ ಆಗಿನ ವಿತ್ತ ಮಂತ್ರಿಯಾಗಿದ್ದ ಶ್ರೀ ವೈ.ಬಿ.ಚವ್ಹಾಣ್‌ರು ಮಣಿಪಾಲಕ್ಕೆ ಬಂದಾಗ ಇಲ್ಲಿನ ನಮ್ಮ ಕಾರ್ಯಚಟುವಟಿಕೆಗಳನ್ನೆಲ್ಲ ನೋಡಿ, ಎಲ್ಲ ಬ್ಯಾಂಕುಗಳು ಸಿಂಡಿಕೇಟ್ ಬ್ಯಾಂಕಿನ ಥರ ಕೆಲಸ ಮಾಡುತ್ತಿದ್ದರೆ, ಪ್ರಾಯಶಃ ಬ್ಯಾಂಕುಗಳ ರಾಷ್ಟ್ರೀಕರಣದ ಅವಶ್ಯಕತೆ ಇರಲಿಲ್ಲ ಅಂತ ಉದ್ಗರಿಸಿದ್ದರು. ಆಮೇಲೆ ಸಿಂಡಿಕೇಟ್ ಬ್ಯಾಂಕಿಗೆ ಉತ್ತರ ಭಾರತದಲ್ಲಿ ಕೇರಳದಲ್ಲಿ, ಆಂಧ್ರದಲ್ಲಿ,ಅನೇಕ ಜಿಲ್ಲೆಗಳಲ್ಲಿ ಲೀಡ್ ಬ್ಯಾಂಕ್ ಆಗಿ ರಿಸರ್ವ್ ಬ್ಯಾಂಕ್ ನೇಮಕ ಮಾಡಿತ್ತು. ಈ ಜಿಲ್ಲೆಗಳಲ್ಲಿ ಆರ್ಥಿಕ ಸಂಶೋಧನಾ ವಿಭಾಗದಿಂದ ಸರ್ವೆಮಾಡಿ, ಎಲ್ಲಾ ಬ್ಯಾಂಕುಗಳ ಪೈಕಿ ಅತೀ ಉತ್ತಮವಾಗಿ ಅತೀ ವೇಗವಾಗಿ ಸರ್ವೆಗಳನ್ನು ಮಾಡಿದ ಕೀರ್ತಿ ಸಿಂಡಿಕೇಟ್ ಬ್ಯಾಂಕಿಗೆ ಸಲ್ಲುತ್ತದೆ. ಅದಕ್ಕೆ ಟಿ.ಎ.ಪೈಗಳ ಒಂದು ಆಶೀರ್ವಾದ, ಮಾರ್ಗದರ್ಶನವಿತ್ತು.



## ಗ್ರಾಮೀಣ ಬ್ಯಾಂಕುಗಳ ಉದಯ

1976ನೇ ಇಸವಿಯಲ್ಲಿ ಭಾರತದಲ್ಲಿ ಗ್ರಾಮೀಣ ಬ್ಯಾಂಕುಗಳ ಉದಯವಾಯಿತು. ಗ್ರಾಮೀಣ ಬ್ಯಾಂಕುಗಳಲ್ಲಿ ಮೊತ್ತಮೊದಲ ಗ್ರಾಮೀಣ ಬ್ಯಾಂಕನ್ನು ಸ್ಥಾಪನೆ ಮಾಡುವಂಥ ಸಂದರ್ಭ ಬಂದದ್ದು ಸಿಂಡಿಕೇಟ್ ಬ್ಯಾಂಕಿಗೆ. ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿದ್ದಂಥ ನಾರಾಯಣ ದತ್ತ ತಿವಾರಿಯವರು, ಸಿಂಡಿಕೇಟ್ ಬ್ಯಾಂಕನ್ನು ಕರೆದು ನೀವು ನಮ್ಮ ಉತ್ತರ ಪ್ರದೇಶದಲ್ಲಿ ಗ್ರಾಮೀಣ ಬ್ಯಾಂಕನ್ನು ಪ್ರಾರಂಭ ಮಾಡಬೇಕು, ಅದು ಕೂಡಾ 'ಪ್ರಥಮ' ಅಂತ ಹೆಸರಿಡಬೇಕು ಅಂತ ಹೇಳಿದ್ದರು.

ಸಿಂಡಿಕೇಟ್ ಬ್ಯಾಂಕು 10ಗ್ರಾಮೀಣ ಬ್ಯಾಂಕುಗಳನ್ನು ಕರ್ನಾಟಕ, ಆಂಧ್ರ, ಕೇರಳ ಮತ್ತು ಹರ್ಯಾಣಗಳಲ್ಲಿ ಸ್ಥಾಪನೆಮಾಡಿತು. ದೇಶದಲ್ಲಿ ಆಗ ಇದ್ದ 196 ಗ್ರಾಮೀಣ ಬ್ಯಾಂಕುಗಳಲ್ಲಿ ಅತ್ಯಂತ ಉತ್ತಮ ಮಟ್ಟದಲ್ಲಿ ಮತ್ತು ಲಾಭದಾಯಕವಾಗಿ ನಡೆದಂಥ ಬ್ಯಾಂಕುಗಳಲ್ಲಿ ಅದು ಸಿಂಡಿಕೇಟ್ ಬ್ಯಾಂಕಿನಿಂದ ಪ್ರಯೋಜಿಸಲ್ಪಟ್ಟ ಹತ್ತು ಗ್ರಾಮೀಣ ಬ್ಯಾಂಕುಗಳು ಇದ್ದವು. ಇದಕ್ಕೆಲ್ಲ ಕಾರಣ ಇರುವಂಥದ್ದು ಒಂದು ಪರಂಪರೆ. ಗ್ರಾಮೀಣ ಪ್ರದೇಶದಲ್ಲಿ ಗ್ರಾಮೀಣ ಜನರಿಗಾಗಿ ಈ ಬ್ಯಾಂಕಿನ ಸಾಲ ಸೌಲಭ್ಯಗಳನ್ನು ಕೊಡಬಹುದು ಎಂಬ ವಿಚಾರದಲ್ಲಿ ಟಿ.ಎ.ಪೈಯವರು ಹಾಕಿಕೊಟ್ಟಂಥ ಮಾರ್ಗದರ್ಶನ. ಅದೇ ಮುಂದೆ ನಡೆದು ಬಂದು ಈವೊತ್ತಿಗೂ, ಗ್ರಾಮಾಂತರ ಪ್ರದೇಶಗಳಲ್ಲಿ ಅತ್ಯುತ್ತಮ ಮಟ್ಟದ ಕೆಲಸ ಮಾಡುವುದೆಂದರೆ ಅದು ಸಿಂಡಿಕೇಟ್ ಬ್ಯಾಂಕ್. ಸಿಂಡಿಕೇಟ್ ಬ್ಯಾಂಕಿನ ಪಿಗ್ಮಿ ಡಿಪೋಸಿಟ್ ಯೋಜನೆ 1928ರಲ್ಲಿ ಪ್ರಾರಂಭವಾಗಿತ್ತು. ಅದು ಬ್ಯಾಂಕಿನ 2000 ಶಾಖೆಗಳಲ್ಲೂ ಇದ್ದು ಹೆಚ್ಚಿನ ಜನರಿಗೆ ಅದರ ಪ್ರಯೋಜನ ಸಿಗುವಂತಾಗಿದೆ.

ಟಿ.ಎ.ಪೈಯವರಿಂದ ನಾನು ಕಲಿತ ಒಂದು ಗುಣ ಅವರ ಮಾನವೀಯ ದೃಷ್ಟಿ. ಎಲ್ಲರನ್ನೂ ಬೆನ್ನುತಟ್ಟಿ ಮಾತನಾಡುವಂತದ್ದು, ಅವರ ಉದಾತ್ತ ವಿಚಾರಗಳನ್ನು ನಮಗೆ ತಿಳಿಸಿ ಹೇಳುವಂಥದ್ದು. ಇದರಿಂದಾಗಿ ನಾವು ಹೆಚ್ಚಿನವರು ಅವರ ಮಾರ್ಗದರ್ಶನದಲ್ಲಿ ಬ್ಯಾಂಕಿನೊಂದಿಗೆ ಅಭಿವೃದ್ಧಿಯನ್ನು ಹೊಂದಿ ಬ್ಯಾಂಕಿನ ಜತೆಗೆ ಬೆಳೆದು ಹೆಚ್ಚಿನ ಕೆಲಸ ಮಾಡಲಿಕ್ಕೆ ಸಾಧ್ಯವಾಗಿದೆ.

ಮೂರು ದಶಕಗಳ ಬಳಿಕ ಬ್ಯಾಂಕಿನಿಂದ ನಿವೃತ್ತನಾದ ಮೇಲೆ ಶೈಕ್ಷಣಿಕ ಕ್ಷೇತ್ರದೊಂದಿಗೆ ಸೇರಿಕೊಂಡಿದ್ದೇನೆ. ದೇಶದ ಬ್ಯಾಂಕಿಂಗ್ ಕ್ಷೇತ್ರದಲ್ಲಿ, ಮುಖ್ಯವಾಗಿ

ಗ್ರಾಮೀಣ ಬ್ಯಾಂಕಿಂಗ್ ವಲಯದಲ್ಲಿ ಆಗುತ್ತಿರುವ ಬದಲಾವಣೆ –ಬೆಳವಣಿಗೆಗಳ ವಿಮರ್ಶೆ ಮಾಡುತ್ತಿದ್ದೇನೆ. ಮದ್ರಾಸಿನ ಆಂಗ್ಲ ಭಾಷೆಯ ಮಾಸಿಕವೊಂದಕ್ಕೆ ಅಂಕಣವನ್ನು ಕಳೆದ ಹತ್ತು ವರ್ಷಗಳಿಂದ ಬರೆಯುತ್ತಿದ್ದೇನೆ. ಗ್ರಾಮೀಣ ಬ್ಯಾಂಕಿನ ಒಳ–ಹೊರಗುಗಳ ಬಗ್ಗೆ ತಮ್ಮ ಅನುಭವಗಳ ಆಧಾರದ ಮೇಲೆ ಅಧಿಕೃತವಾಗಿ ಬರೆಯುವ ಕೆಲವೇ ಅರ್ಥಶಾಸ್ತ್ರಜ್ಞರ ಪಟ್ಟಿಗೆ ಸೇರಿದ್ದೇನೆ. ಇದಕ್ಕೆಲ್ಲ ಸ್ಫೂರ್ತಿ ನೀಡಿದವರು ಶ್ರೀ ಟಿ.ಎ.ಪೈಗಳೆಂದು ಸದಾ ಸ್ಮರಿಸುತ್ತಿದ್ದೇನೆ.

***

## ರಾಷ್ಟ್ರೀಯ ನೇತಾರ – ಶ್ರೀ ಟಿ.ಎ.ಪೈ

**–ಡಾ.ಕೆ.ಕೆ.ಅಮ್ಮಣ್ಣಾಯ, ವರದಾ ಗ್ರಾಮೀಣ ಬ್ಯಾಂಕಿನ ಮಾಜಿ ಅಧ್ಯಕ್ಷರು**

ರಾಷ್ಟ್ರೀಯ ನೇತಾರರಲ್ಲೊಬ್ಬರಾಗಿ ಕೇಂದ್ರ ಸಚಿವ ಸಂಪುಟದಲ್ಲಿ ಕೈಗಾರಿಕಾ ಮತ್ತು ರೈಲ್ವೇ ಸಚಿವ ಹುದ್ದೆಯೂ ಸೇರಿದಂತೆ ವಿವಿಧ ಉನ್ನತ ಹುದ್ದೆಗಳನ್ನು ಬಹಳಷ್ಟು ಜವಾಬ್ದಾರಿಯಿಂದ ನಿರ್ವಹಿಸಿ ರಾಷ್ಟ್ರೀಯ ಪ್ರಗತಿಗೆ ಮಹತ್ತರ ಕೊಡುಗೆ ನೀಡಿದ ಟಿ.ಎ.ಪೈಯವರು ಇಂದು ನಮ್ಮೊಂದಿಗಿಲ್ಲವಾದರೂ ಅವರ ಚಿಂತನೆ, ಕಲ್ಪನೆ ಮತ್ತು ಆದರ್ಶಗಳು ಇಂದು ಮಾತ್ರವಲ್ಲ ಭವಿಷ್ಯದ ದಿನಗಳಲ್ಲೂ ಪ್ರಸ್ತುತವಾಗಿದ್ದು ಮುಂದಿನ ಜನಾಂಗಕ್ಕೆ ದಾರಿದೀಪವಾಗಬಲ್ಲುದು.

ಬ್ಯಾಂಕಿಂಗ್ ಕ್ಷೇತ್ರದಲ್ಲಿ ಅವರು ನಡೆಸಿದ ಹೊಸ ಹಾಗೂ ಅಪೂರ್ವ ಪ್ರಯೋಗಗಳು ಮತ್ತು ಅವರು ಅಳವಡಿಸಿಕೊಂಡ ಸಾಂಸ್ಥಿಕ ಬ್ಯಾಂಕಿಂಗ್ ಧೋರಣೆಗಳಾಗಿ ಅಂಗೀಕರಿಸಲ್ಪಟ್ಟು ಇಡೀ ರಾಷ್ಟ್ರದಲ್ಲಿ ಬ್ಯಾಂಕಿಂಗ್ ಕ್ರಾಂತಿಗೆ ಕಾರಣವಾದವು. ಭಾರತೀಯ ಜೀವವಿಮಾ ನಿಗಮದ ವರಿಷ್ಠರಾಗಿ ಆ ಬೃಹತ್ ಸಂಸ್ಥೆಗೆ ಹೊಸ ಪಥವನ್ನು ಒದಗಿಸಿ, ಅದರ ಅಭ್ಯುದಯದ ರೂವಾರಿಯಾದರು. ಭಾರತೀಯ ಆಹಾರ ನಿಗಮದ ಸ್ಥಾಪಕಾಧ್ಯಕ್ಷರಾಗಿ ರಾಷ್ಟ್ರದ ಆಹಾರ ಸಮಸ್ಯೆಗೆ ಶಾಶ್ವತ ಪರಿಹಾರವನ್ನೊದಗಿಸುವ ಉದ್ದೇಶದಿಂದ ಹಸಿರು ಕ್ರಾಂತಿಗೆ ನಾಂದಿ ಹಾಡಿದರು. ಕೇಂದ್ರ ಸರಕಾರದ ರೈಲ್ವೇ ಸಚಿವರಾಗಿ ರೈಲು ಉದ್ಯಮಕ್ಕೆ ಕಾಯಕಲ್ಪ ನೀಡಿ ಅದರ ಪ್ರಗತಿಯ ಶಿಲ್ಪಿಯಾದರು. ಕೈಗಾರಿಕಾ ಸಚಿವರಾಗಿ ಹೊಸ ಕೈಗಾರಿಕಾ ನೀತಿಯ ಅಳವಡಿಕೆ, ಪರವಾನಿಗೆ ನೀತಿಯ ಉದಾರೀಕರಣ ಇತ್ಯಾದಿ ಕ್ರಮಗಳ ಮೂಲಕ ತ್ವರಿತ ಕೈಗಾರಿಕಾ ಪ್ರಗತಿ ಹಾಗೂ ವಿಸ್ತರಣೆಗೆ

ಕಾರಣರಾದರು. ನಿರ್ವಹಣಾ ಶಿಕ್ಷಣವೂ ಸೇರಿದಂತೆ ಶೈಕ್ಷಣಿಕ ಕ್ಷೇತ್ರದಲ್ಲೂ ಮಹತ್ತರವಾದ ಸೇವೆಯನ್ನು ನೀಡಿದ ಶ್ರೀ ಪೈಯವರು ಶಿಕ್ಷಣಕ್ಕೆ ಸಂಬಂಧಿಸಿದ ಕೆಲವು ಸಮಿತಿಗಳಲ್ಲೂ ಸೇವೆ ಸಲ್ಲಿಸಿದ್ದಾರೆ. ಅತಿ ಚಿಕ್ಕ ಹರೆಯದಲ್ಲೇ ಶಾಸಕರಾಗಿ, ರಾಜ್ಯಸಭೆ ಮತ್ತು ಲೋಕಸಭೆಯ ಸದಸ್ಯರಾಗಿ ಮತ್ತು ರಾಜಕೀಯ ಪಕ್ಷವೊಂದರ ಪದಾಧಿಕಾರಿಯಾಗಿ ಹಾಗೂ ಜಿಲ್ಲಾಧ್ಯಕ್ಷರಾಗಿ ಅವರು ದುಡಿದಿದ್ದಾರೆ. ಲೋಕಸಭೆಯಲ್ಲಿ ವಿರೋಧಪಕ್ಷದ ನಾಯಕರಲ್ಲೊಬ್ಬರಾಗಿ ವಿವಿಧ ಸಮಸ್ಯೆಗಳನ್ನು ಸರಕಾರದ ಲಕ್ಷ್ಯಕ್ಕೆ ತರುವಲ್ಲಿ ಅವರು ಮಹತ್ತರ ಪಾತ್ರ ವಹಿಸಿದ್ದರು.

ಶ್ರೀ ಪೈಯವರು ದೀನದಲಿತರೂ ಸೇರಿದಂತೆ ಎಲ್ಲರಲ್ಲೂ ಬಲಗಳನ್ನು ಕಂಡರು– ದೌರ್ಬಲ್ಯಗಳನ್ನಲ್ಲ. ಎಲ್ಲರಲ್ಲೂ ಒಳ್ಳೆಯತನವನ್ನು ಗುರುತಿಸಿದರು. ಇತರರು ಸಮಸ್ಯೆಗಳನ್ನು ಕಂಡಲ್ಲಿ ಅವರು ಪರಿಹಾರಗಳನ್ನು ಕಂಡರು. ತಾನು ದುಡಿದ ಪ್ರತಿ ಕ್ಷೇತ್ರದಲ್ಲೂ– ಅದು ಬ್ಯಾಂಕಿಂಗ್ ಇರಲಿ, ಕೇಂದ್ರ ಕೈಗಾರಿಕಾ ಸಚಿವಾಲಯವೇ ಇರಲಿ– ಅಲ್ಲಿ ತನ್ನ ಸೃಜನಶೀಲತೆಯ ಮುದ್ರೆಯನ್ನು ಒತ್ತಿದ್ದ ಪೈಯವರು ಹೊಸ ನೀತಿ ಮತ್ತು ಹೊಸ ಕ್ರಮಗಳ ಮೂಲಕ ಅವುಗಳಿಗೆ ಹೊಸ ಹುರುಪು, ಹೊಸ ಚೈತನ್ಯ ನೀಡಿ ಅವುಗಳ ಪ್ರಗತಿಯಲ್ಲಿ ವೇಗೋತ್ಕರ್ಷಸಾಧಿಸಿದರು. ರಾಜಕೀಯ ಕ್ಷೇತ್ರದಲ್ಲಿ ಮೌಲ್ಯಾಧಾರಿತ ರಾಜಕೀಯ ಮತ್ತು ಮೌಲ್ಯಾಧಾರಿತ ನಾಯಕತ್ವದ ಕುರಿತು ಮಾತನಾಡುವುದಾದರೆ ಬಹುಶಃ ಅವನ್ನು ಅನುಸರಿಸಿದ ಕೆಲವೇ ನಾಯಕರಲ್ಲಿ ಟಿ.ಎ.ಪೈಯವರು ಒಬ್ಬರು.

***

## ಅಪರೂಪದ ವ್ಯಕ್ತಿತ್ವ

### ಬಿ.ಆರ್.ಪೈ, ವಿಜಯ್ ಫೌಂಡೇಶನ್, ಮೈಸೂರು

1978ರಲ್ಲಿ ಪ್ರಾರಂಭವಾದ ವಿಜಯ ವೈರ್ಸ್ ಅಂಡ್ ಫಿಲಮೆಂಟ್ಸ್ ಇಂದು ವಿ.ಡಬ್ಲ್ಯು.ಎಫ್. ಇಂಡಸ್ಟ್ರೀಸ್ ಎಂಬ ಹೊಸ ಹೆಸರಿನೊಂದಿಗೆ ಎಂಟು ಕಂಪೆನಿಗಳ ಸಮೂಹ ಸಂಸ್ಥೆಯಾಗಿ ಬೆಳೆದಿದೆ. ಇದು ಸಾಧ್ಯವಾಗಲು ಕಾರಣರಾದವರು ಆಗಿನ ಕೇಂದ್ರ ಕೈಗಾರಿಕಾ ಮಂತ್ರಿಗಳಾಗಿದ್ದ ಶ್ರೀ ಟಿ.ಎ.ಪೈಯವರು.

1975ರಲ್ಲಿ ಮೈಸೂರಿನ ಕೈಗಾರಿಕೆಯೊಂದರಲ್ಲಿ ಕೆಲಸ ಮಾಡುತ್ತಿದ್ದ ನಾನು ಸ್ವಂತ ಕೈಗಾರಿಕೆಯೊಂದನ್ನು ಪ್ರಾರಂಭಿಸುವ ಕನಸು ಕಾಣುತ್ತಿದ್ದೆ. ಅದು

ಲೈಸೆನ್ಸ್‌ರಾಜ್ ಸಮಯ. ಸರಕಾರಕ್ಕೆ ಕಂಪೆನಿಗಳ ಮೇಲೆ ಬಹಳ ಹಿಡಿತವಿತ್ತು. ಲೈಸೆನ್ಸ್ ಎನ್ನುವುದು ಸುಲಭದ ಮಾತಾಗಿರಲಿಲ್ಲ. ಆ ಸಂದಿಗ್ಧ ಪರಿಸ್ಥಿತಿಯಲ್ಲಿ ಅದೃಷ್ಟವಶಾತ್ ನನಗೆ ಶ್ರೀ ಟಿ.ಎ.ಪೈಯವರನ್ನು ಕಂಡು ಮಾತನಾಡಿ ಅವರಿಗೆ ನನ್ನ ಅರ್ಜಿಯನ್ನು ಸಲ್ಲಿಸುವ ಅವಕಾಶ ದೊರೆಯಿತು.

ಸ್ವಲ್ಪ ಸಮಯದಲ್ಲೆ ನನಗೆ ಆಶ್ಚರ್ಯ ಕಾದಿತ್ತು. ಶ್ರೀಪೈಯವರು ನನಗೆ ಲೆಟರ್ ಆಫ್ ಇಂಟೆಂಟ್ ಕಳಿಸಿದ್ದರು. ಅವರು ಯುವ ಕೈಗಾರಿಕೋದ್ಯಮಿಗಳನ್ನು ಪ್ರೋತ್ಸಾಹಿಸುತ್ತಿದ್ದ ರೀತಿ ಅದು. ತದನಂತರ ಬಾಡಿಗೆ ಶೆಡ್‌ನಲ್ಲಿ ನಡೆಯುತ್ತಿದ್ದ ನಮ್ಮ ಕಾರ್ಖಾನೆಗೂ ಅವರು ಬಂದು ನಮಗೆ ಉತ್ತೇಜನ ನೀಡಿದರು. ನಮ್ಮ ಎಲ್ಲ ಯಶಸ್ಸಿಗೂ ಅವರ ಪ್ರೋತ್ಸಾಹವೇ ಕಾರಣ ಎಂಬ ಭಾವನೆ ನನ್ನದು. ಅವರು ನನ್ನಂಥ ಎಷ್ಟೋ ಯುವ ಉದ್ಯಮಿಗಳಿಗೆ ದಾರಿದೀಪವಾಗಿದ್ದರು.



ಶ್ರೀ ಬಿ.ಆರ್.ಪೈ (ಎಡದಿಂದ ಮೂರನೆಯವರು) ಶ್ರೀ ಟಿ.ಎ.ಪೈಯವರೊಂದಿಗೆ

## ಅಜಾತ ಶತ್ರು

**–ಸಿ.ಮಹಾಬಲ ನಾಯಕ್, ಹಿಂದಿ ಪ್ರಚಾರಕ, ಉಡುಪಿ**

ಸ್ವರ್ಗೀಯ ಟಿ.ಎ.ಪೈಗಳ ಅಸಂಖ್ಯ ಅಭಿಮಾನಿಗಳಲ್ಲಿ ನಾನೂ ಒಬ್ಬ. 1950ರಿಂದಲೂ ನಿಕಟವಾಗಿ ಅವರನ್ನು ಬಲ್ಲೆ. 1948ರಿಂದ ನಾನು ಕಾರ್ಯದರ್ಶಿಯಾಗಿರುವ ಹಿಂದೀ ಪ್ರಚಾರ ಸಂಸ್ಥೆಗೆ 1954ರಲ್ಲಿ ಅವರನ್ನು ನಾವು ಅಧ್ಯಕ್ಷರಾಗಿ ಪಡೆದೆವು. ಸಮಿತಿಗೆ ಸ್ವಂತ ಕಟ್ಟಡ ಇಲ್ಲದಿದ್ದಾಗ, ಅವರ ಉಡುಪಿ ನಗರದ ಮಧ್ಯಭಾಗದಲ್ಲಿ ಕರ್ನಾಟಕ ಸರಕಾರದಿಂದ ನಿವೇಶನ

ಒದಗಿಸಿಕೊಟ್ಟರಲ್ಲದೆ, ಕೇಂದ್ರ ಸರಕಾರದಿಂದ ಕಟ್ಟಡಕ್ಕೆ ರೂ.50,000/- ಗ್ರ್ಯಾಂಟನ್ನು ಒದಗಿಸಲು ಕಾರಣರಾದರು. ಈ ರೀತಿಯಲ್ಲಿ ಶಾಲಾ ಕಟ್ಟಡಗಳು, ಮಹಿಳಾ ಮಂಡಳಿಗಳು, ಮಕ್ಕಳ ಕ್ರೀಡಾವನಗಳು-ಹೀಗೆ ಒಂದೇ ಎರಡೇ, ಅನೇಕ ಸಂಸ್ಥೆಗಳ ನಿರ್ಮಾಣ ಕಾರ್ಯದಲ್ಲಿ ಅವರ ನೆರವಿನ ಹಸ್ತ ಇದ್ದೇ ಇತ್ತು. ಅವರು ಮಣಿಪಾಲದಲ್ಲಿ ಸ್ಥಾಪಿಸಿದ 'ಭಾರತೀಯ ವಿಕಾಸ ಟ್ರಸ್ಟ್' ಇಂದಿಗೂ ಜನೋಪಯೋಗಿ ಕಾರ್ಯಗಳನ್ನು ಮಾಡುತ್ತಿದೆ.

## ಕೊಡುಗೈ ದಾನಿ

ಅವರು ಕೊಡುಗೈ ದಾನಿಗಳಾಗಿದ್ದರು. ಸಹಾಯ ಕೇಳಿ ಬಂದ ಯಾರನ್ನೂ ನಿರಾಶೆಗೊಳಿಸಿ ಹಿಂದೆ ಕಳುಹಿಸಿದ್ದನ್ನು ನಾನು ಕೇಳಿಲ್ಲ. ತನ್ನ ಇತಿಮಿತಿಗೆ ಮಿಕ್ಕಿ ಸಹಾಯ ಪ್ರಕಟಿಸುತ್ತಿದ್ದರು. ಹಣ ಜಮೆಯಾದಾಗ ಸಂದಾಯವಾಗುತ್ತಿತ್ತು. ಅಧಿಕಾರದಲ್ಲಿದ್ದಾಗ, ಅನುಕೂಲವಿದ್ದಾಗ ಸಾಧ್ಯವಾದಷ್ಟು ಜನಪರ ಕೆಲಸ ಮಾಡಬೇಕು, ಬೇರೆಯವರಿಗೆ ಸಹಾಯ ಮಾಡಬೇಕು ಎಂದು ಆಗಾಗ್ಗೆ ಹೇಳುತ್ತಿದ್ದರು. ಈಗಲೂ ಎಷ್ಟೋ ಮಂದಿ ತಮ್ಮ ಕಷ್ಟಕಾಲದಲ್ಲಿ ಪೈಯವರು ನೆರವಿಗೆ ಬಂದುದನ್ನು ಸ್ಮರಿಸುವವರಿದ್ದಾರೆ. ಇತ್ತೀಚೆಗೆ 'ಉದಯವಾಣಿ' (28.1.2010ರ ಸಂಚಿಕೆ)ಯಲ್ಲಿ ಡಾ.ಪಾಟೀಲ ಪುಟ್ಟಪ್ಪನವರು, 'ಕಷ್ಟ ಕಾಲದಲ್ಲಿ ನೆರವಾದ ಮಣಿಪಾಲದ ಮಾಂತ್ರಿಕ' ಎಂದು ತಮ್ಮ ಆತ್ಮ ಕಥನದಲ್ಲಿ ನೆನಪಿಸಿಕೊಂಡಿರುವುದನ್ನು ಪ್ರಕಟಿಸಲಾಗಿತ್ತು. ಓದುವಾಗ ಕಣ್ಣೀರು ಬರುವಂತಿತ್ತು.

ರಾಜಕೀಯದಲ್ಲಿ ವಿರೋಧ ಪಕ್ಷದವರನ್ನು ಅವರು ಗೌರವಿಸುತ್ತಿದ್ದರು. ಚುನಾವಣೆ ಬಂದಾಗ 'ರಾಯಭಾರಿ' ಪತ್ರಿಕೆಯ ದಿ.ಎಸ್.ಎಲ್.ಭಟ್ಟರನ್ನು (ಅವರು ಪ್ರಜಾ ಸೋಶಿಯಲಿಸ್ಟ್ ಪಕ್ಷಕ್ಕಾಗಿ ಕೆಲಸ ಮಾಡುತ್ತಿದ್ದರು), ಒಂದು ಸಮಾರಂಭದಿಂದ ಇನ್ನೊಂದು ಸಮಾರಂಭಕ್ಕೆ ಹೋಗುವಾಗ, ತನ್ನ ವಿರುದ್ಧ ಪತ್ರಿಕೆಯಲ್ಲಿ

ಬರೆಯುತ್ತಾರೆಂದು ತಿಳಿದಿದ್ದರೂ ಪೈಯವರು, ತಮ್ಮ ಕಾರಿನಲ್ಲಿ ಕರೆದೊಯ್ಯುತ್ತಿದ್ದರು. ಮರುದಿನ ರಾಯಭಾರಿ ಅಥವಾ ಬೇರೊಂದು ಪತ್ರಿಕೆಯಲ್ಲಿ ಪೈಯವರನ್ನು ಟೀಕಿಸಿ ಭಟ್ಟರು ಬರೆದ ಲೇಖನ ಪ್ರಕಟವಾಗುತ್ತಿತ್ತು.

## ಬಿ.ಜೆ.ಪಿ.ವೇದಿಕೆಯಲ್ಲಿ ಟಿ.ಎ.ಪೈ!

ಪೈಯವರು ಕಾಂಗ್ರೆಸ್ ಪಕ್ಷದಲ್ಲಿದ್ದಾಗ ಡಾ. ವಿ.ಎಸ್. ಆಚಾರ್ಯರ ನೇತೃತ್ವದಲ್ಲಿ ನಗರ ಸಭಾ ಕಟ್ಟಡ ಮುಂತಾದ ಅವರ ಕಾರ್ಯಗಳನ್ನು ನೋಡಿ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಮಾತ್ರವಲ್ಲ 'ಇಲ್ಲಿನ ತರುಣರು ಮಾಡಿದ ಕೆಲಸ ನೋಡಿ' ಎಂದು ಇತರರಿಗೂ ಹೇಳುತ್ತಿದ್ದರು. ಒಮ್ಮೆ ಅಜ್ಜರಕಾಡಿನಲ್ಲಿ ಜರುಗಿದ ಬಿ.ಜೆ.ಪಿ.ಯವರ ಸಭೆಯಲ್ಲಿ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರನ್ನು ನೋಡಲು ವೇದಿಕೆಯ ಮೇಲೇರಿ ಹೋದುದನ್ನು ಸ್ಥಾನೀಯ ಕಾಂಗ್ರೆಸಿಗರು ಟೀಕಿಸಿದಾಗ 'ಉಡುಪಿಯ ರಾಜಕೀಯ ನನಗೆ ಹೇಳಬೇಕಾಗಿಲ್ಲ'ವೆಂದು ನಿರ್ದಾಕ್ಷಿಣ್ಯದಿಂದ ಟೀಕಿಸಿದವರ ಬಾಯಿ ಮುಚ್ಚಿಸಿದ್ದರು. ತಮಗೆ ಸರಿಕಂಡುದನ್ನು ನಿರ್ಭಯವಾಗಿ ಹೇಳಲು ಅವರು ಎಂದೂ ಹಿಂಜರಿಯುತ್ತಿರಲಿಲ್ಲ.



1981 ಮಾರ್ಚ್, ದಿನಾಂಕ 31ರಂದು ಉಡುಪಿ ಅಜ್ಜರಕಾಡಿನಲ್ಲಿ ಸಾರ್ವಜನಿಕ ಸಭೆ. ಆಸೀನರಾಗಿರುವವರು ಶ್ರೀ ಟಿ.ಎ.ಪೈ, ಶ್ರೀಕೆ.ಎಸ್.ಹೆಗ್ಡೆ (ಮಾಜಿ ಲೋಕಸಭಾಧ್ಯಕ್ಷರು), ಶ್ರೀ ಅಟಲ್ ಬಿಹಾರಿ ವಾಜಪೇಯಿ (ಮಾಜಿ ಪ್ರಧಾನಿ), ಶ್ರೀ ಎ.ಕೆ.ಸುಬ್ಬಯ್ಯ (ಅಂದಿನ ಬಿ.ಜೆ.ಪಿ.ರಾಜ್ಯಾಧ್ಯಕ್ಷರು), ಡಾ.ವಿ.ಎಸ್.ಆಚಾರ್ಯ (ಇಂದಿನರಾಜ್ಯ ಗೃಹ ಸಚಿವರು). ಸ್ವಾಗತ ಭಾಷಣ ಶ್ರೀ ಎಸ್.ವಿಟ್ಠಲ್ ಶೆಟ್ಟಿಗಾರ್ (ಅಂದಿನ ಉಡುಪಿ ಬಿ.ಜೆ.ಪಿ.ಅಧ್ಯಕ್ಷರು)

## ಪೈಯವರು ಎಲ್ಲರಿಗೂ ಅಚ್ಚುಮೆಚ್ಚು

ಪೈಯವರು ವಿರೋಧ ಪಕ್ಷದಲ್ಲಿದ್ದಾಗ ಅಥವಾ ಅಧಿಕಾರದಲ್ಲಿ ಇಲ್ಲದಾಗ ಅವರನ್ನು ಗೌರವದಿಂದ ಕಾಣುವ ಅನೇಕ ಮಂದಿ ಕಾಂಗ್ರೆಸ್‌ನಲ್ಲಿದ್ದರು. ಒಂದು ಉದಾಹರಣೆ– ನಮ್ಮ ಹಿಂದೀ ಪ್ರಚಾರ ಸಮಿತಿಯ ಕಟ್ಟಡಕ್ಕೆ ಅನುದಾನ ಪಡೆಯಲು ಪೈಯವರು ಆಗಿನ ಕೇಂದ್ರ ಸರಕಾರದ ಮಾನವ ಸಂಪನ್ಮೂಲ ಮಂತ್ರಿಗಳಾಗಿದ್ದ ಶ್ರೀ ವೈ.ಬಿ.ಚವಾಣರಿಗೆ ಪತ್ರ ಬರೆದ ಒಂದು ವಾರದೊಳಗೆ ಶ್ರೀ ಚವಾಣರು ಹಣ ಮಂಜೂರು ಮಾಡಿ ಪೈಯವರಿಗೆ ಉತ್ತರ ಕಳುಹಿಸಿದ್ದರು.

## ಹಿಂದಿ ಕಲಿಕೆಯ ಮೋಹ

ಪೈಯವರು ನಮ್ಮ ಸಮಿತಿಯ ಅಧ್ಯಕ್ಷರಾಗಿದ್ದ ಸಮಯ, ತನಗೆ ಹಿಂದಿ ಕಲಿಯಬೇಕು, ಉತ್ತರ ಭಾರತಕ್ಕೆ ಹೋದಾಗ ಹಿಂದಿಯಲ್ಲಿ ಮಾತನಾಡಬೇಕು ಎಂದು ಅಪೇಕ್ಷೆ ಪಟ್ಟಿದ್ದರು. ನಾನು ಒಂದೆರಡು ಸಲ ಉಡುಪಿಯ ಮುಕುಂದ ನಿವಾಸದಲ್ಲಿ ಸಿಂಡಿಕೇಟ್ ಬ್ಯಾಂಕಿನ ಪ್ರಧಾನ ಕಾರ್ಯಾಲಯವಿದ್ದಾಗ ಸಂಬಂಧಪಟ್ಟ ಪುಸ್ತಕಗಳನ್ನು ಅವರಿಗೆ ಕೊಟ್ಟರೂ ಅವರ ಕಾರ್ಯಬಾಹುಳ್ಯದಿಂದ ಸಮಯ ಒದಗಿ ಬಂದಿರಲಿಲ್ಲ.

ಮುಂದೆ ಚುನಾವಣೆ ಕಳೆದ ಬಳಿಕ ನಾನಾಗಿಯೇ ಅವರಿಗೆ ಹಿಂದೆ ಹಿಂದಿ ಕಲಿಯುವ ಅಪೇಕ್ಷೆ ವ್ಯಕ್ತಪಡಿಸಿದ್ದನ್ನು ನೆನಪಿಸಿದೆ. ಅವರು ಸಂತೋಷದಿಂದ ಒಪ್ಪಿದರು. ಮರು ದಿವಸದಿಂದ ಪಾಠ ಪ್ರಾರಂಭವಾಯಿತು. ಹಿಂದೀ ಕ್ಲಾಸಿನ ಮಕ್ಕಳಿಗೆ ಹೇಳಿಕೊಡುವಂತೆ ಪಾಠ ಮಾಡಿ ಅವರಿಂದ ಅಭ್ಯಾಸವನ್ನು ಬರೆಸುತ್ತಿದ್ದೆ. ಅವರು ಕೂಡಾ ಬಹಳ ಶ್ರದ್ಧೆಯಿಂದ ಕಲಿಯುತ್ತಿದ್ದರು. ನಿತ್ಯ ಬೆಳಿಗ್ಗೆ ಒಂದು ಗಂಟೆ ಪಾಠ ಮಾಡಿ 6ತಿಂಗಳಲ್ಲಿ ಪ್ರಾಥಮಿಕ ಪರೀಕ್ಷೆಯ ಪುಸ್ತಕಗಳನ್ನು ಮುಗಿಸಿ ಮುಂದಿನ ಮಧ್ಯಮ ಪರೀಕ್ಷೆಯ ಪುಸ್ತಕಗಳನ್ನು ಕೊಟ್ಟು ಬಂದಿದ್ದೆ. ಅದೇ ದಿನ ರಾತ್ರೆ ಅವರು ಇಹಲೋಕ ತ್ಯಜಿಸಿದರು.

ಬೆಳಿಗ್ಗೆ ರೇಡಿಯೋದಲ್ಲಿ ಅವರ ನಿಧನ ವಾರ್ತೆ ಕೇಳಿ ಆಘಾತವಾಯಿತು. ಅಂದು ಪಾಠ ಮಾಡಲು ಹೋಗುವ ಬದಲು ಪಾರ್ಥಿವ ಶರೀರವನ್ನು ನೋಡಲು ಹೋಗಬೇಕಾಯಿತು. ನನ್ನ ದುರಾದೃಷ್ಟವಲ್ಲದೆ ಮತ್ತಿನ್ನೇನು?

***

ಶ್ರೀ ಟಿ.ಎ. ಪೈ

# ಆಪದ್ಬಾಂಧವ

–ಎಚ್. ಶ್ರೀಧರ ಹಂದೆ,

ಸಂಚಾಲಕರು, ಸಾಲಿಗ್ರಾಮ ಮಕ್ಕಳ ಮೇಳ

1978ರಲ್ಲಿ ಸಾಲಿಗ್ರಾಮ ಮಕ್ಕಳ ಮೇಳಕ್ಕೆ ಅಮೆರಿಕಾದ ಸೆನೋಸೆಯಲ್ಲಿ ಜಾಗತಿಕ ಮಕ್ಕಳ ಉತ್ಸವದಲ್ಲಿ ಭಾರತದ ಏಕೈಕ ತಂಡವಾಗಿ ಪಾಲ್ಗೊಳ್ಳುವ ಅವಕಾಶ ಒದಗಿ ಬಂತು. ವಿದೇಶಕ್ಕೆ ಈ ಮೇಳದ ಆಯ್ಕೆ ಮಾಡಿದವರು ಕೃಷ್ಣಾರ್ಜುನ ಪ್ರಸಂಗ ನೋಡಿದ ಡಾ.ಎಚ್.ಕೆ.ರಂಗನಾಥರು. ಆರ್ಥಿಕ ನೆರವು ನೀಡಿದವರು ಅಂದಿನ ಶ್ರೀ ದೇವರಾಜ ಅರಸ್ ಸರಕಾರ ಮತ್ತು ವಾರ್ತಾ ಇಲಾಖೆ.

ಕೇವಲ 20 ದಿನಗಳ ಅವಧಿಯಲ್ಲಿ ವಿದೇಶ ಪ್ರಯಾಣದ ಎಲ್ಲ ತಯಾರಿ ಆಗಬೇಕಿತ್ತು. ಆ ಕುರಿತಾದ ಯಾವ ಪ್ರಾಥಮಿಕ ಅನುಭವ ನನಗಾಗಲೀ, ಮೇಳದ ರೂವಾರಿ ಕಾರ್ಕಡ ಶ್ರೀನಿವಾಸ ಉಡುಪರಿಗಾಗಲೀ ಇರಲಿಲ್ಲ. ನಮ್ಮ ಕಾಯಕಕ್ಕೆ ಬೆಂಬಲವಾಗಿ ನಿಂತವರೆಂದರೆ ಶ್ರೀ ಕೆ.ಎಂ.ಉಡುಪರು. ಎಲ್ಲ ಭಗೀರಥ ಪ್ರಯತ್ನಗಳು ನಡೆದರೂ 'ವಿಸಾ' ಪಡೆಯುವ ಮಹತ್ವದ ಕಾರ್ಯ ಬಾಕಿ ಉಳಿಯಿತು. ತಂಡದ ಎಲ್ಲ 10 ಮಂದಿ ಮಕ್ಕಳು ಮದ್ರಾಸಿಗೆ ಹೋಗಿ 'ವಿಸಾ' ಪಡೆಯಬೇಕಾಗಿದ್ದಿತು. ಪ್ರಯಾಣಕ್ಕೆ ಉಳಿದಿರುವುದು ಬೆರಳೆಣಿಕೆಯ ದಿನಗಳು ಮಾತ್ರ. ಅವಕಾಶ ತಪ್ಪಿ ಹೋದೀತು ಎಂಬ ಭಯ ಬೇರೆ. ಆಗ ತಂಡದ ನೆರವಿಗೆ ಬಂದವರು ಶ್ರೀ ಟಿ.ಎ.ಪೈ!

ಕೆ.ಎಂ.ಉಡುಪರೊಂದಿಗೆ ಮಕ್ಕಳ ಮೇಳದ ಎಲ್ಲರೂ ಮಣಿಪಾಲದ ಪೈಗಳ ಮನೆಗೆ ಹೋದೆವು. ವಿಷಯ ತಿಳಿದ ಪೈಗಳು ದೂರವಾಣಿ ಕೈಗೆತ್ತಿಕೊಂಡರು. ಅಂದಿನ ವಿದೇಶಾಂಗ ಸಚಿವರಾಗಿದ್ದ ಶ್ರೀ ಅಟಲ ಬಿಹಾರಿ ವಾಜಪೇಯಿ ಅವರೊಡನೆ ಮಾತಾಡತೊಡಗಿದರು–

"ಇದು ನನ್ನದೇ ಯಕ್ಷಗಾನದ ಮಕ್ಕಳ ಮೇಳ. ಪ್ರಪ್ರಥಮವಾಗಿ ಯಕ್ಷಗಾನವನ್ನು ವಿದೇಶಕ್ಕೆ ಕೊಂಡುಹೋಗುವ ಸಂದರ್ಭವಿದು. ಕಲಾವಿದರೆಲ್ಲ ಶಾಲಾ ಬಾಲಕರು. ಅವರನ್ನೆಲ್ಲ ಮದ್ರಾಸಿಗೆ ಕರೆದುಕೊಂಡು ಹೋಗುವ ಸಮಯಾವಕಾಶವಿಲ್ಲ. ತಂಡದ ಮುಖ್ಯಸ್ಥರೊಬ್ಬರು ಮದ್ರಾಸಿಗೆ ಹೋಗುತ್ತಾರೆ, ಎಲ್ಲರ 'ವಿಸಾ' ಅವರ ವಶ ಕೊಡುವ ವ್ಯವಸ್ಥೆ ಆಗಬೇಕು."

–ಎನ್ನುವ ಆಗ್ರಹದ ಟಿ.ಎ.ಪೈಗಳ ಮಾತು ಮಾತ್ರ ನಮಗೆ ಕೇಳುತ್ತಿತ್ತು. ಫೋನ್ ಕೆಳಗಿಟ್ಟು ನಗುನಗುತ್ತ ಹೊರ ಬಂದರು ಪೈಗಳು.



"ಉಡುಪರೇ, ನೀವು ಒಬ್ಬರೇ ಮದ್ರಾಸಿಗೆ ಹೋಗಿ, ಎಲ್ಲರ 'ವಿಸಾ' ನಿಮಗೆ ಸಿಗುತ್ತದೆ" ಎಂದರು. ಹಾಗೆಯೇ ಆಯಿತು.

ಮಕ್ಕಳ ಮೇಳ ಒಂದು ತಿಂಗಳ ಕಾಲ ಅಮೆರಿಕದ ಸೆನೋಸೆ, ನ್ಯೂಯೋರ್ಕ್, ಅಟ್ಲಾಂಟಾ, ಭಫೆಲೋ, ವಾಷಿಂಗ್‌ಟನ್ ಮೊದಲಾದೆಡೆ ಪ್ರದರ್ಶನಗಳನ್ನಿತ್ತು ದೇಶಕ್ಕೆ ಖ್ಯಾತಿ ತಂದು ದಾಖಲೆ ನಿರ್ಮಿಸಿತು.

ಟಿ.ಎ.ಪೈಯವರು ಅಂದು ಯಾವುದೇ ಅಧಿಕಾರದಲ್ಲಿರಲಿಲ್ಲ. ಕೇವಲ ಪಾರ್ಲಿಮೆಂಟ್ ಸದಸ್ಯರಾಗಿದ್ದರಷ್ಟೇ–ಅದೂ ಪ್ರತಿಪಕ್ಷದವರಾಗಿ. ಅಂಥವರು ತನ್ನ ಮನೆಯಿಂದಲೇ ದೂರದ ದೆಹಲಿಯಲ್ಲಿದ್ದ ಕೇಂದ್ರ ಸಚಿವ ಶ್ರೀ ವಾಜಪೇಯಿಯವರನ್ನು ದೂರವಾಣಿಯ ಮೂಲಕ ಸಂಪರ್ಕಿಸುವುದೆಂದರೇನು, ನಂಬಲು ಸಾಧ್ಯವೇ? ಪೈಗಳ ವಿಚಾರದಲ್ಲಿ ಇವೆಲ್ಲ ಸಾಧ್ಯ. ತನ್ನ ಪಕ್ಷದವರಿಂದ, ಇತರ ಎಲ್ಲ ಪಕ್ಷದವರಿಂದ, ಮುತ್ಸದ್ದಿಗಳಿಂದ ಗೌರವವನ್ನೂ ಮಾನ್ಯತೆಯನ್ನೂ ಪಡೆದಿದ್ದ ಏಕೈಕ ಪ್ರಾಮಾಣಿಕ, ದೂರದರ್ಶಿತ್ವವುಳ್ಳ ರಾಜಕಾರಣಿ ಟಿ.ಎ.ಪೈಗಳು ಎಂಬುದಕ್ಕೆ ಈ ಘಟನೆಯೇ ಸಾಕ್ಷಿ!

ಪೈಗಳು ಕೇಂದ್ರ ಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಬಾಲಭವನದವರ ಕರೆಯ ಮೇರೆಗೆ ದೆಹಲಿಗೆ ತೆರಳಿದ್ದ ಸಾಲಿಗ್ರಾಮ ಮಕ್ಕಳ ತಂಡವನ್ನು ತಮ್ಮ ಮನೆಗೇ ಕರೆಯಿಸಿ ಸತ್ಕರಿಸಿದುದನ್ನು ಮರೆಯಲು ಸಾಧ್ಯವೇ?

***

## ಅಭಿವೃದ್ಧಿಯ ಹರಿಕಾರ

**–ಎಂ.ನಾರಾಯಣ ಗೋಖಲೆ, ಕೃಷಿಕ, ಕಾರ್ಕಳ**

ಟಿ.ಎ.ಪೈಯವರು ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾದ ಬಳಿಕ ಬ್ಯಾಂಕಿನ ಸರ್ವತೋಮುಖ ಅಭಿವೃದ್ಧಿಯಾಯಿತು. ಸಿಂಡಿಕೇಟ್ ಬ್ಯಾಂಕಿನ ಕೃಷಿ ಸಾಲ ವಿಸ್ತರಣೆಯಲ್ಲಿ ಅವರ ಸಾಧನೆ ಅಪಾರ. ಆಗ ಗೇಣಿದಾರರಿಗೆ (ಪಟ್ಟಾಧಾರರಲ್ಲದಿದ್ದರೂ) ಕೃಷಿ ಸಾಲ ನೀಡಿದ್ದು ಸಿಂಡಿಕೇಟ್ ಬ್ಯಾಂಕ್. ನೀರಾವರಿಗೆ ಪಂಪ್ ಸೆಟ್ಟು ಪಡೆದುಕೊಳ್ಳುವ ಸಾಲ ಮತ್ತು ಖರೀದಿಯ ತೊಂದರೆಗಳನ್ನು ಮನಗಂಡು ಮಂಗಳೂರಿನಲ್ಲಿ 'ಕೃಷಿ ಅಭಿವೃದ್ಧಿ ಸಹಕಾರ ಸಂಘ'ವನ್ನು ಸ್ಥಾಪಿಸಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಂಪ್‌ಸೆಟ್ ನೀರಾವರಿಯ ಕ್ರಾಂತಿ ಮಾಡಿದರು.

ಅವರ ಸಾಧನೆಯನ್ನು ಪರಿಗಣಿಸಿ ಶ್ರೀಮತಿ ಇಂದಿರಾ ಗಾಂಧಿಯವರು ಅವರನ್ನು ಎಲ್ಲೈಸಿಯ ಅಧ್ಯಕ್ಷರನ್ನಾಗಿ ಮಾಡಿದರು. ಅಲ್ಲೂ ಆರ್ಥಿಕ ಮತ್ತು ಆಡಳಿತಾತ್ಮಕ ವಿಕೇಂದ್ರೀಕರಣಗೊಳಿಸಿದರು. ಏಜಂಟರ ಕಷ್ಟಕರ ನಿಯಮಗಳನ್ನು ತೊಡೆದು ಹಾಕಿ ಸಾಕಷ್ಟು ಸೌಲಭ್ಯ ಮತ್ತು ಸ್ವಾತಂತ್ರ್ಯ ನೀಡಿದರು. ಆರೋಗ್ಯ ಸೇವೆಗಳ ವಿಸ್ತರಣೆಯಿಂದಾಗಿ ಸರಾಸರಿ ಆಯುಷ್ಯ 52 ಹೆಂಗಸರಿಗೂ, 60 ಗಂಡಸರಿಗೂ ಏರಿದ್ದ ಸಂದರ್ಭ ಇನ್ಶೂರ್ ಕಂತು ಕಡಿಮೆಯಾಗಿರಲಿಲ್ಲ. ಅದನ್ನು ಕಡಿತಗೊಳಿಸಿ ವಿಮಾದಾರರಿಗೆ ಅಗ್ಗದ ವಿಮಾ ಸೌಲಭ್ಯ ಒದಗಿಸಿದರು.

ಫುಡ್ ಕಾರ್ಪೊರೇಶನ್ ಆಫ್ ಇಂಡಿಯಾದ ಅಧ್ಯಕ್ಷರಾಗಿ ನೇಮಕಗೊಂಡಾಗ, ದೇಶ ವ್ಯಾಪಿ ಅದರ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಒಂದು ವರ್ಷಕ್ಕೆ ಬೇಕಾದಷ್ಟು ಆಹಾರ ಧಾನ್ಯದ ಕಾಪುದಾಸ್ತಾನು ಮಾಡಿದರು. ತಕ್ಷಣ ಹಣ ಪಾವತಿ, ಹೊಸ ಗೋದಾಮುಗಳ ರಚನೆ, ಆರ್ಥಿಕ ಸೌಲಭ್ಯ ನೀಡಿ ನಿಗಮವನ್ನು ಒಂದು ಆದರ್ಶ ಸಂಸ್ಥೆಯನ್ನಾಗಿ ರೂಪಿಸಿದರು.

ರೇಲ್ವೇ ಸಚಿವರಾದ ತಕ್ಷಣ ಮಂಗಳೂರಿನಿಂದ ದಿಲ್ಲಿಗೆ ನೇರ ಸಂಪರ್ಕ ಕಲ್ಪಿಸುವ ಜಯಂತಿ ಜನತಾ ಎಕ್ಸ್ ಪ್ರೆಸ್ ರೈಲನ್ನು ಆರಂಭಿಸಿದರು. ಆ ತನಕ 2-3ಕಡೆ ರೈಲು ಬದಲಿಸಿ, ರಿಸರ್ವೇಶನ್ ಇಲ್ಲದೆ ಕಷ್ಟಪಟ್ಟು ದಿಲ್ಲಿಗೆ ಹೋಗಬೇಕಾಗಿತ್ತು. ಈ ಸೌಲಭ್ಯವನ್ನು ದೇಶದ ಇತರ ಒಂದೆರಡು ರಾಜ್ಯಗಳಿಗೂ ವಿಸ್ತರಿಸಿ, ಮುಂದೆ ಹೆಚ್ಚಿನ ಎಲ್ಲ ರಾಜ್ಯಗಳಿಗೂ ದಿಲ್ಲಿಗೆ ಸಂಪರ್ಕಿಸುವ ಜಯಂತಿ ಜನತಾ ಎಕ್ಸ್ ಪ್ರೆಸ್ ಗಳು ಬಂದವು. ಭಾರೀ ಕೈಗಾರಿಕೆಯ ಸಚಿವರಾಗಿದ್ದಾಗ ಭಿಲಾಯಿ, ರೂರ್ಕೆಲಾ ಮತ್ತು ಭದ್ರಾವತಿ ಕಾರ್ಖಾನೆಗಳ ಅಭಿವೃದ್ಧಿಗೆ ಶ್ರಮಿಸಿದರು.

ಟಿ.ಎ.ಪೈಗಳು ಒಟ್ಟಿನಲ್ಲಿ ಅಭಿವೃದ್ಧಿಯ ಹರಿಕಾರ ಎಂದರೂ ತಪ್ಪಾಗದು.

***

## ಅನಂತ ಅಂತಃಕರಣ

### ಯು. ವಾದಿರಾಜ ಉಪಾಧ್ಯಾಯ, ಕನ್ನರಪಾಡಿ, ಉಡುಪಿ

ಜಾತಿ, ಮತ, ಧರ್ಮ, ನೀತಿ, ನಿಯಮಗಳನ್ನು ಅನಿವಾರ್ಯವಾದಾಗ ಮೆಟ್ಟಿ ನಿಂತು ಸಹಜತೆಯ ಕಡೆಗೆ ನೋಡುವವರು ಶ್ರೀ ಪೈಗಳು. ಕೇವಲ ಕಾಟಾಚಾರಕ್ಕೆ ಅಂತಃಕರಣವನ್ನು ತೋರಿಸಿ ನಾಟಕವಾಡುವವರಲ್ಲ. ಯಾವುದೇ ಸಭೆ ಸಮಾರಂಭಗಳಲ್ಲಿ ಹೇಳಿಕೊಳ್ಳುವವರೂ ಅಲ್ಲ. ಕೇಂದ್ರ ಸರಕಾರದ ಮಂತ್ರಿ ಪದವಿ ಇದ್ದಾಗಲಾಗಲೀ, ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷ ಸ್ಥಾನವನ್ನು ಹೊಂದಿರುವ ಕಾಲದಲ್ಲಾಗಲೀ ದಂತಗೋಪುರದಲ್ಲಿ ಕುಳಿತು ಮೆರೆದವರೂ ಅಲ್ಲ. ಮೇಲ್ದರ್ಜೆಯ ಜನರ ಜತೆಗೆ ಒಡನಾಟವು ಅನಿವಾರ್ಯವಾಗಿದ್ದರೂ, ಬಡವರನ್ನು ಎಂದೂ ಮರೆತವರಲ್ಲ. ದೀನದಲಿತರ ಕೂಗು ಕೇಳುವ, ಅವರ ಕಷ್ಟ ಕಾರ್ಪಣ್ಯಗಳನ್ನು ಪರಿಹರಿಸುವ, ಆ ನಿಟ್ಟಿನಲ್ಲಿ ಅಡ್ಡಿಬರಬಹುದಾದಂಥ ಕಾನೂನು ಕಟ್ಟಳೆಗಳನ್ನು ನಿರ್ದಾಕ್ಷಿಣ್ಯವಾಗಿ ಮುರಿದು, ಸಹಾಯ ಹಸ್ತ ಚಾಚುವಂಥ ಧೀಮಂತ ವ್ಯಕ್ತಿತ್ವ ಅವರದ್ದು.

ಪೈಗಳವರು ರೇಲ್ವೇ ಮಂತ್ರಿಗಳಾಗಿದ್ದಾಗ, ಆಂಧ್ರ ಪ್ರದೇಶದ ಒಂದು ರೇಲ್ವೇ ಸ್ಟೇಶನನ್ನು ಕಿಡಿಗೇಡಿಗಳು ಧ್ವಂಸ ಮಾಡಿಬಿಟ್ಟರು. ವರ್ತಮಾನ ತಮಗೆ

ಸಿಕ್ಕಿದ ಕೂಡಲೇ ಸ್ಥಳಕ್ಕೆ ಧಾವಿಸಿ ಸುಟ್ಟುಹೋಗಿದ್ದ ರೇಲ್ವೇ ಸ್ಟೇಶನನ್ನು ಸಂದರ್ಶಿಸಿ, ತನ್ನನ್ನು ಸಂಪರ್ಕಿಸಿದ ವರದಿಗಾರರೊಡನೆ ಮಾತನಾಡುತ್ತ,

"ಈ ರೇಲ್ವೇ ಸ್ಟೇಶನ್ ಊರಿನ ಜನರಿಗೆ ಅನುಕೂಲವಾಗಲಿ ಅಂತ ನಿರ್ಮಿಸಿದ್ದು. ಆದರೆ ಅದು ಅವರಿಗೇ ಬೇಡವಾಗಿದ್ದರೆ, ನಾನೇನೂ ಮಾಡುವ ಹಾಗಿಲ್ಲ. ಕೇಂದ್ರ ಸರಕಾರವು ಇದನ್ನು ಪುನರ್ನಿರ್ಮಾಣ ಮಾಡಬೇಕಾದರೆ, ಊರ ಜನರ ಮೇಲೆ 'ಮಂಡೆ ತೆರಿಗೆ'ಯನ್ನು ಹಾಕಿಯೇ ಕಟ್ಟಿಸಬೇಕಾಗುತ್ತದೆ." ಎಂದು ಹೇಳಿದರಂತೆ. ಹಾಗೆ ಹೇಳಿದ್ದರೂ ಕೂಡಾ ಸಾರ್ವಜನಿಕ ಹಿತದೃಷ್ಟಿಯಿಂದ ಅದರ ಪುನರ್ನಿರ್ಮಾಣ ಮಾಡಿಸಿದರೆನ್ನಿ.

## ಕರುಣೆಯ ಅಂತಃಕರಣ

ಪೈಗಳು ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾಗಿದ್ದಾಗ, ಒಂದು ದಿನ ಅವರನ್ನು ಭೇಟಿಯಾಗಿ, ತನ್ನ ಮಗಳಿಗೆ ಬ್ಯಾಂಕಿನಲ್ಲಿ ಕೆಲಸ ಕೊಡಿಸಬೇಕೆಂದು ಕಾಪು ಕಡೆಯಿಂದ ಬ್ರಾಹ್ಮಣ ವಿಧವೆ, ತನ್ನ ಮಗಳ ಸಮೇತ ಬಂದಿದ್ದರಂತೆ. ಹಲವಾರು ಪೂರ್ವನಿಶ್ಚಿತ ಕಾರ್ಯಕ್ರಮಗಳಲ್ಲಿ ವ್ಯಸ್ತರಾಗಿದ್ದ ಪೈಗಳು, "ನೋಡಿ ಅಮ್ಮ, ಈಗ ನಮ್ಮಲ್ಲಿ ಕೆಲಸ ಖಾಲಿಯೂ ಇಲ್ಲ, ಮತ್ತು ಯಾರನ್ನೂ ಹೊಸದಾಗಿ ನೇಮಿಸಿಕೊಳ್ಳಲು ಅವಕಾಶವೂ ಇಲ್ಲ. ನಿಮ್ಮ ಮಗಳ ಅರ್ಜಿಯನ್ನು ಕೊಡಿರಿ. ಮುಂದಕ್ಕೆ ನೋಡುವ" ಎಂದರಂತೆ. ಬೇಸರಗೊಂಡ ಆ ತಾಯಿ ಮಗಳು, ನಿರಾಶೆಯಿಂದ ವಾಪಾಸು ಹೊರಟರಂತೆ.

ಇದಾದ ಒಂದೆರಡು ಗಂಟೆಯೊಳಗೆ, ಪೈಯವರಿಗೆ ಮಂಗಳೂರಿಗೆ ಹೋಗುವ ತುರ್ತು ಸಂದರ್ಭ ಆಕಸ್ಮಿಕವಾಗಿ ಒದಗಿಬಂತು. ಅವರು ಕೂಡಲೇ ಕಾರು ಹತ್ತಿ, ಉಡುಪಿಯ ಮೂಲಕ ಮಂಗಳೂರಿಗೆ ಹೊರಟರಂತೆ. ಇನ್ನೇನು ಕಾರು ಕಟಪಾಡಿ ಪೇಟೆ ದಾಟಿ ಮುಂದೆ ಹೋಗುತ್ತಿರುವಾಗ, ಆ ತಾಯಿ ಮಗಳು ರಸ್ತೆ ಬದಿಯಲ್ಲಿ ನಡೆದುಕೊಂಡು ಹೋಗುತ್ತಿದ್ದರಂತೆ. ಪೈಗಳು ತಮ್ಮ ಕಾರನ್ನು ಅವರ ಪಕ್ಕದಲ್ಲೇ ನಿಲ್ಲಿಸುವಂತೆ ಹೇಳಿ,

"ಇದೇನಮ್ಮ ನೀವು ನಡೆದುಕೊಂಡೇ ಹೋಗುತ್ತಿರುವಿರಲ್ಲ?" ಎಂದು ಕೇಳಿದರಂತೆ. ಪಾಪ ಆ ತಾಯಿ ಕಣ್ಣಲ್ಲಿ ನೀರು ತಂದುಕೊಂಡು,

"ಇನ್ನೇನು ಮಾಡಲಿ ಸ್ವಾಮೀ, ಬಸ್ಸಿನಲ್ಲಿ ಹೋಗಲು ಹಣವಿಲ್ಲ. ಮಣಿಪಾಲಕ್ಕೆ ನಡೆದುಕೊಂಡೇ ಹೋಗಿದ್ದೆವು. ಈಗಲೂ ನಡೆದುಕೊಂಡೇ ಮನಗೆ ಹೋಗುತ್ತಿದ್ದೇವೆ. ಇನ್ನು ಮಧ್ಯಾಹ್ನ ಊಟಕ್ಕೆ ಯಾರಿಂದಾರೂ ಒಂದಿಷ್ಟು ಅಕ್ಕಿ ಬೇಡಿ ತರಬೇಕಷ್ಟೆ. ಹೊಟ್ಟೆಗೆ ಬಟ್ಟೆಕಟ್ಟಿಕೊಂಡು, ಒಂದು ಹೊತ್ತು ಗಂಜಿಕುಡಿಯುತ್ತಾ, ಕಷ್ಟಪಟ್ಟು ಈ ಮಗಳಿಗೆ ವಿದ್ಯೆ ಕೊಡಿಸಿದ್ದೆ. ಅವಳಿಗೆ ಕೆಲಸ ಸಿಗಬಹುದೆಂಬ ಆಸೆಯಿಂದ ಬಂದಿದ್ದೆವು. ನಮ್ಮ ಗ್ರಹಚಾರ, ಈಗ ವಾಪಾಸು ಹೋಗುತ್ತಿದ್ದೇವೆ." ಎಂದರಂತೆ.

ಪಾಪ, ಪೈಗಳ ಮನಸ್ಸು ಕರಗಿಹೋಯಿತು. ಛೆ! ನಾನೆಂಥ ತಪ್ಪು ಮಾಡಿಬಿಟ್ಟೆ. ನನಗೆ ಇವರ ಬಡತನದ ವಿಷಯ ತಿಳಿಯದೇ ಹೋಯಿತಲ್ಲ? ಏನೇ ಆಗಲಿ, ಈಗ ಆ ತಪ್ಪನ್ನು ಸರಿಪಡಿಸಿಕೊಳ್ಳಬೇಕು ಎಂದೆಣಿಸಿ, ಬಳಿಯಲ್ಲೇ ಕುಳಿತಿದ್ದ ತಮ್ಮ ಆಪ್ತ ಕಾರ್ಯದರ್ಶಿಗೆ, "ನೋಡಪ್ಪ ಈಕೆಯ ಮಗಳ ಅರ್ಹತೆಯನ್ನು ವಿಚಾರಿಸಿ, ಆಕೆಗೆ ಕೂಡಲೇ ನೇಮಕಾತಿಯ ಆದೇಶವನ್ನು ಕಳುಹಿಸಿಕೊಡಬೇಕು." ಎಂದು ಆದೇಶಿಸಿ, ತಾಯಿ ಮಗಳನ್ನುದ್ದೇಶಿಸಿ, "ನೋಡಿ ಅಮ್ಮ, ನಾಳೆಯೇ ನಿಮ್ಮ ಮಗಳಿಗೆ ನೇಮಕಾತಿ ಆದೇಶ ಸಿಗುತ್ತದೆ. ನಮ್ಮ ಕಾಪು ಶಾಖೆಯಲ್ಲೇ ಕೆಲಸಕ್ಕೆ ಹಾಜರಾಗಲಿ. ಈಗ ನೀವು ಕಾರು ಹತ್ತಿ. ನಿಮ್ಮನ್ನು ನಿಮ್ಮ ಮನೆತನಕ ಬಿಡುತ್ತೇನೆ ಎಂದರಂತೆ. ಬೇಡ, ಬೇಡ ಎಂದು ಎಷ್ಟು ಹೇಳಿದರೂ ಕೇಳದೆ ಅವರನ್ನು ಅವರ ಮನೆತನಕ ಬಿಟ್ಟು ಮುಂದೆ ಸಾಗಿದರಂತೆ ಪೈಗಳು. ಆ ಮಹಾ ತಾಯಿ ಕಾರಿನಿಂದ ಇಳಿದು, ಕಣ್ಣೀರು ಸುರಿಸಿಕೊಂಡು, 'ನಿನ್ನ ಮನಸ್ಸು ದೊಡ್ಡದಪ್ಪ, ಆ ದೇವರು ನಿನಗೆ ಒಳ್ಳೇದು ಮಾಡಲಿ' ಎಂದು ಹರಸಿ ಮುಂದೆ ಹೋದರಂತೆ. ಪೈಗಳ ಅಂತಃಕರಣಕ್ಕೆ ಇದೊಂದು ನೈಜ ಘಟನೆಯ ಪುಟ್ಟ ಉದಾಹರಣೆ ಅಷ್ಟೆ!

***

## ಕೊನೆಯ ನಿಮಿಷದ ನೆನಪುಗಳು

### ಜಿ.ಶ್ರೀಧರ್ ರಾವ್, ಬ್ರಹ್ಮಗಿರಿ, ಉಡುಪಿ

70-80ರ ದಶಕದಲ್ಲಿ ನಾನು ಮಣಿಪಾಲ ಕೆ.ಎಂ.ಸಿ. ಆಸ್ಪತ್ರೆಯಲ್ಲಿ ಕಾರ್ಡಿಯಾಲಜಿ ವಿಭಾಗದಲ್ಲಿ ಸೀನಿಯರ್ ಟೆಕ್ನೀಶಿಯನ್ ಆಗಿ ಕೆಲಸ

ಮಾಡುತ್ತಿದ್ದೆ. ನಾನು ಆಗಾಗ ಟಿ.ಎ.ಪೈಯವರ ಮನೆಗೆ ಅವರ ಚೆಕ್‌ಅಪ್‌ಗಾಗಿ ಮೆಶಿನ್ ಹಿಡಿದುಕೊಂಡು ಹೋಗುತ್ತಿದ್ದೆ.

ಪೈಯವರ ಬದುಕಿನ ಕೊನೆಯ ದಿನದಂದು, ಅಂದರೆ, 1981 ಮೇ ತಿಂಗಳ 29ರಂದು ಬೆಳಿಗ್ಗೆ ನಾನು ರಾತ್ರಿಯ ಪಾಳಿ ಮುಗಿಸಿ ಮನೆಗೆ ಹೊರಟಿದ್ದೆ. ಆಗ ನಮ್ಮ ಡಿಪಾರ್ಟ್‌ಮೆಂಟಿನ ಡಾ. ಕಾಮತ್ ಅವರು, ನನ್ನ ಬಳಿ ಬಂದು,

'ಟಿ.ಎ.ಪೈಯವರಿಗೆ ಆರೋಗ್ಯ ಸರಿಯಿಲ್ಲ, ನೀನು ಹೋಗಿ ಅವರ ಇ.ಸಿ.ಜಿ. ತೆಗೆದುಕೊಂಡು ಬಾ' ಎಂದರು. ನಾನು ಮೆಶಿನ್‌ನೊಂದಿಗೆ ಅನಂತ ನಗರದಲ್ಲಿದ್ದ ಅವರ ಮನೆಗೆ ಹೋದೆ. ಮಂಚದಲ್ಲಿ ಮಲಗಿದ್ದ ಪೈಯವರ ಇ.ಸಿ.ಜಿ. ತೆಗೆದುಕೊಂಡೆ. ನಂತರ ಮೆಶಿನ್ ಪ್ಯಾಕ್ ಮಾಡಿ ವಾಪಸ್ ಬರಲು ಸಿದ್ಧನಾದೆ.

ಅವರ ಮನೆಯ ಆ ರೂಮಿಗೆ ನಾಲ್ಕು ದಿಕ್ಕಿನಲ್ಲೂ ಒಂದೇ ಬಗೆಯ ಸ್ಕ್ರೀನ್ ಹಾಕಿದ್ದರು. ನನಗೆ ಮೆಶಿನ್ ಕೈಯಲ್ಲಿ ಹಿಡಿದೆತ್ತಿದ ಮೇಲೆ ಹೊರಗೆ ಹೋಗುವ ಬಾಗಿಲು ಯಾವುದೆಂದು ತಿಳಿಯಲಿಲ್ಲ. ಆದರೂ ಅಂದಾಜಿನ ಮೇಲೆ ಒಂದು ಸ್ಕ್ರೀನಿನ ಕಡೆಗೆ ಹೋದೆ. ಆಗ ಪೈಗಳು,

"ಏನಾ ಶ್ರೀಧರ, ನಿನಗೆ ಜೋರು ಹಸಿವೆಯಾಗ್ತಿದೆಯಾ?" ಎಂದು ಕೇಳಿ ನಕ್ಕರು. ನಾನು ತಬ್ಬಿಬ್ಬಾದೆ. ಶ್ರೀಮತಿ ಪೈಗಳು ಜೋರಾಗಿ ನಗುತ್ತಾ,

"ಅದು ಅಡುಗೆ ಮನೆಗೆ ಹೋಗುವ ಬಾಗಿಲು" ಎಂದು ನನಗೆ ಹೊರಗೆ ಹೋಗುವ ಬಾಗಿಲನ್ನು ತೋರಿಸಿದರು. ಆ ಕ್ಷಣ ನಾವು ಮೂವರೂ ಜೋರಾಗಿ ನಕ್ಕಿದ್ದೆವು. ಪೈಯವರು ಎಷ್ಟೇ ದುಃಖವಿದ್ದರೂ, ಅನಾರೋಗ್ಯವಿದ್ದರೂ, ನಗುವಿನ ಕ್ಷಣಗಳನ್ನು ಮನಸಾರೆ ಅನುಭವಿಸುತ್ತಿದ್ದರು. ಬಹುಶಃ ಅದು ಅವರ ಕೊನೆಯ ನಗು ಇದ್ದಿರಬಹುದೇನೋ!

ಇ.ಸಿ.ಜಿ. ರಿಪೋರ್ಟ್‌ನ್ನು ಡಾ. ಕಾಮತ್ ಅವರಿಗೆ ಒದಗಿಸಿ ನಾನು ಮನೆಗೆ ತೆರಳಿದ್ದೆ. ಮತ್ತೆ ನನಗೆ ಅದೇ ದಿನ ರಾತ್ರಿಯ ಪಾಳಿಯ ಡ್ಯೂಟಿ ಇತ್ತು. ನಾನು ಡ್ಯೂಟಿಯಲ್ಲಿರುವಾಗಲೇ ತುರ್ತು ಕರೆಯೊಂದು ಬಂತು.

'ಟಿ.ಎ.ಪೈಯವರಿಗೆ ಮತ್ತೆ ಆರೋಗ್ಯ ಸರಿಯಾಗಿಲ್ಲ, ಅರ್ಜೆಂಟಾಗಿ ಎಮೆರ್ಜೆನ್ಸಿ ವಾರ್ಡ್‌ಗೆ ಬಾ' ಅಂತ. ಬೆಳಿಗ್ಗೆ ತೆಗೆದಿರಿಸಿದ್ದ ಇ.ಸಿ.ಜಿ.ರಿಪೋರ್ಟ್

ಅಲ್ಲೇ ಮೇಜಿನ ಮೇಲೆ ಇತ್ತು. ರಿಪೋರ್ಟ್‌ನೊಂದಿಗೆ ಎಮರ್ಜೆನ್ಸಿ ವಾರ್ಡ್‌ಗೆ ಲಗುಬಗನೆ ಓಡಿದೆ. ಅಲ್ಲಿ ಶ್ರೀ ರಮೇಶ್ ಪೈಯವರು ಇದ್ದರು. ಟಿ.ಎ.ಪೈಗಳು ಇನ್ನೂ ಬಂದಿರಲಿಲ್ಲ.

ಸ್ವಲ್ಪ ಸಮಯದೊಳಗೆ ಪೈಗಳು 'ನಾನು ನಡೆಯಬಲ್ಲೆ' ಎಂದು ಹೇಳುತ್ತಾ ನಡೆದುಕೊಂಡೇ ಎಮರ್ಜೆನ್ಸಿ ವಾರ್ಡ್‌ಗೆ ಬಂದರು. ನಿಜವಾಗಿಯೂ ಅವರು ವೀಲ್‌ಚೇರ್‌ನಲ್ಲಿ ಬರಬೇಕಾಗಿತ್ತು. ಅವರ ಆರೋಗ್ಯ ಅಷ್ಟು ಸರಿಯಾಗಿರಲಿಲ್ಲ.

ಅವರನ್ನು ಎಮೆರ್ಜೆನ್ಸಿ ವಾರ್ಡ್‌ನ ಬಲಭಾಗದ ರೂಮ್‌ನಲ್ಲಿ ಮಲಗಿಸಿ ಎಲ್ಲಾ ಮೆಶಿನ್‌ಗಳನ್ನು ಕನೆಕ್ಟ್ ಮಾಡಿದೆ. ನಮ್ಮ ಹೆಡ್ ಆಫ್ ದಿ ಡಿಪಾರ್ಟ್‌ಮೆಂಟ್ ಡಾಕ್ಟರ್ ಅವರ ಹೃದಯ ಬಡಿತವನ್ನು ನೋಡತೊಡಗಿದರು.

ಒಂದು ಕ್ಷಣವೂ ತಡಮಾಡದೆ ಹೃದಯಕ್ಕೆ ನೇರ ಇಂಜೆಕ್ಷನ್, ಶಾಕ್, ಮಸಾಜ್ ಎಲ್ಲವನ್ನೂ ನೀಡಿದರು. ನಾನು ಡಾಕ್ಟರ್ ಹೇಳಿದಂತೆ ಮೆಶಿನನ್ನು ಆಪರೇಟ್ ಮಾಡುತ್ತಲೇ ಇದ್ದೆ. ಹೀಗೆ ಅರ್ಧ ಗಂಟೆ ಸಾಗಿದ ನಮ್ಮಿಬ್ಬರ ಪ್ರಯತ್ನ ಕೊನೆಗೂ ಫಲ ನೀಡಲಿಲ್ಲ. ಆಸ್ಪತ್ರೆಗೆ ಬಂದು ಬೆಡ್‌ನಲ್ಲಿ ಮಲಗಿದ ಮರುಕ್ಷಣದಲ್ಲೇ ಅವರ ಪ್ರಾಣ ಪಕ್ಷಿ ಹಾರಿಹೋಗಿತ್ತು.

ಭಾರತ ಮಾತೆಯ ಪ್ರೀತಿಯ ಸುಪುತ್ರ, ಟಿ.ಎ.ಪೈಗಳು ದೇವರ ಪಾದವನ್ನು ಅದಾಗಲೇ ಸೇರಿದ್ದರು.

ಚಿಕ್ಕಂದಿನಿಂದಲೂ ಪರಸ್ಪರ ಪರಿಚಯವಿದ್ದ ನನಗೆ ಆ ಒಂದು ಕ್ಷಣ ತಡೆಯಲಾಗದ ದುಃಖ ಒತ್ತರಿಸಿ ಬಂತು.

ನನ್ನ ಕೊನೆಯ ಕರ್ತವ್ಯವೆನ್ನುವಂತೆ, ಅವರ ದೇಹಕ್ಕೆ ಜೋಡಿಸಿದ್ದ ಮೆಶಿನಿನ ವಿವಿಧ ಪಾರ್ಟ್‌ಗಳನ್ನು ಒಂದೊಂದಾಗಿ ಬಿಡಿಸಿಕೊಳ್ಳುತ್ತ, ಅವರ ಪಾದಗಳಿಗೆ ನಮಿಸುತ್ತ, ನಾನು ಭಾರವಾದ ಹೃದಯದೊಂದಿಗೆ ಹೊರಗೆ ಬಂದಿದ್ದೆ.

***



ಸಾರ್ವಜನಿಕ ಸಭೆ: ವೇದಿಕೆಯಲ್ಲಿರುವವರು--ಪೇಜಾವರ ಮಠಾಧೀಶರಾದ ಶ್ರೀವಿಶ್ವೇಶ ತೀರ್ಥ ಸ್ವಾಮೀಜಿ. ಶ್ರೀ ಟಿ.ಎ.ಪೈ. ಶ್ರೀಮತಿ ಇಂದಿರಾ ಗಾಂಧಿ. ಶ್ರೀಡಿ.ದೇವರಾಜ ಅರಸು ಅವರು



ವರನಟ ಡಾ. ರಾಜಕುಮಾರ್ ಅವರ ಜತೆಗೆ ಸಮಾರಂಭವೊಂದರಲ್ಲಿ




ಕುಶಾಲನಗರದ ಬೈಲುಕುಪ್ಪೆಯಲ್ಲಿ ದಲಾಯಿ ಲಾಮ ಅವರ ಜತೆಗೆ



ಅಂದಿನ ಮುಖ್ಯ ಮಂತ್ರಿ ಶ್ರೀ ಎಸ್. ನಿಜಲಿಂಗಪ್ಪ
ಅವರೊಂದಿಗೆ ಮಾತುಕತೆಯಲ್ಲಿ



ಶ್ರೀ ಬ್ರಹ್ಮಾನಂದ ರೆಡ್ಡಿ ಮತ್ತು ಶ್ರೀ ಸಿ.ಸುಬ್ರಹ್ಮಣ್ಯಂ ಅವರ ಜತೆಗೆ ಸಂವಾದದಲ್ಲಿ



ಉಕ್ಕು ಮತ್ತು ಘನ ಉದ್ಯಮಾಯ ಸಚಿವರಾಗಿದ್ದ ಸಂದರ್ಭ
ಬೊಕಾರೋ ಉಕ್ಕು ಸ್ಥಾವರವನ್ನು ಉದ್ಘಾಟಿಸುತ್ತ



ಶ್ರೀ ವೈ.ಬಿ.ಚವ್ಹಾಣ್ ಜತೆಗೆ ವಿಶೇಷ ಮಾತುಕತೆಯಲ್ಲಿ.
ಪಕ್ಕದಲ್ಲಿರುವವರು ಶ್ರೀ ಕರಣ್ ಸಿಂಗ್



ಶ್ರೀಮತಿ ಇಂದಿರಾ ಗಾಂಧಿಯವರನ್ನು ಸ್ವಾಗತಿಸುತ್ತಿರುವ ಶ್ರೀ ಟಿ.ಎ.ಪೈ.
ಸಂದರ್ಭ: ಭಾರತೀಯ ಜೀವವಿಮಾ ನಿಗಮದ ದಶಮಾನೋತ್ಸವಸಮಾರಂಭ



ಅದಮಾರ ಮಠದ ಶ್ರೀ ವಿಭುದೇಶ ತೀರ್ಥ ಸ್ವಾಮೀಜಿಯವರ ಬಳಿಗೆ ಶ್ರೀಮತಿ ಇಂದಿರಾ ಗಾಂಧಿಯವರನ್ನು ಒಯ್ದ ಶ್ರೀ ಟಿ.ಎ.ಪೈ




1973 ಮೇ 17ರಂದು. ವಿಜಯಾ ಬ್ಯಾಂಕಿನ ಸ್ಟಾಫ್ ಟ್ರೈನಿಂಗ್ ಕಾಲೇಜನ್ನು ಉದ್ಘಾಟಿಸಿದ ಸಮಾರಂಭ. ಬ್ಯಾಂಕಿನ ಅಧ್ಯಕ್ಷ ಶ್ರೀ ಸುಂದರ್ ರಾಮ್ ಶೆಟ್ಟಿ. ಅಂದಿನ ಕರ್ನಾಟಕ ರಾಜ್ಯ ಅರ್ಥ ಸಚಿವ ಶ್ರೀ ಎಂ.ವೈ. ಘೋರ್ಪಡೆಯವರನ್ನೂ ಕಾಣಬಹುದು



ರಾಷ್ಟ್ರೀಯ ಉತ್ಪಾದನಾ ಸಲಹಾ ಸಮಿತಿಯನ್ನು ಉದ್ದೇಶಿಸಿ
1976ರ ನವೆಂಬರ್ 11ರಂದು ಮಾತನಾಡಿದ ಸಂದರ್ಭ



ಮಂಗಳೂರು ಮತ್ತು ಉಡುಪಿಯ ನಡುವೆ ಎಸ್.ಟಿ.ಡಿ. ಸಂಪರ್ಕದ
ಪ್ರಾರಂಭೋತ್ಸವದಲ್ಲಿ ಉದ್ಘಾಟಕರಾಗಿ ಭಾಗವಹಿಸಿದಾಗ.
ವೇದಿಕೆಯಲ್ಲಿರುವವರು-ಡಾ.ಟಿ.ಎಂ.ಎ.ಪೈ, ಡಾ.ವಿ.ಎಸ್.ಆಚಾರ್ಯ ಮತ್ತು
ಶ್ರೀಮತಿ ಮನೋರಮಾ ಮಧ್ವರಾಜ್



ನವಮಂಗಳೂರು ಬಂದರಿನ ಉದ್ಘಾಟನಾ ಸಮಾರಂಭದಲ್ಲಿ ಸ್ಮರಣ ಸಂಚಿಕೆಯನ್ನು ಬಿಡುಗಡೆಮಾಡುತ್ತ. ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಮತ್ತು ಮುಖ್ಯಮಂತ್ರಿ ಶ್ರೀಡಿ ದೇವರಾಜ ಅರಸುರವರು ಇದ್ದಾರೆ



ಜಪಾನೀಸ್ ಪ್ರಧಾನಿ ಶ್ರೀ ಎಫ್.ಎ.ಫಖೂದಾ ಅವರ ಜತೆ ಸ್ನೇಹಕೂಟವೊಂದರಲ್ಲಿ– ಸ್ಥಳ: ಟೋಕಿಯೋ



ಸ್ವರಣ್ ಸಿಂಗ್ ಮತ್ತು ಬಾಬು ಜಗಜೀವನ್ ರಾಮ್ ಜತೆಗೆ



ಸಿಂಡಿಕೇಟ್ ಬ್ಯಾಂಕಿನ ಸಮಾರಂಭವೊಂದರಲ್ಲಿ ಶ್ರೀ ಕೆ.ಕೆ.ಪೈಯವರ ಜತೆಗೆ



ಚುನಾವಣೆಯಲ್ಲಿ ಗೆದ್ದ ಸಂತಸ



ರಿಸರ್ವ್ ಬ್ಯಾಂಕಿನ ಡೆಪ್ಯುಟಿ ಗವರ್ನರ್ ಶ್ರೀ ಅಡಕರ್ ಅವರು
ಶ್ರೀ ಪೈಯವರನ್ನು ಸ್ವಾಗತಿಸುತ್ತಿರುವದು



ಪೂನಾದ ಕಿರ್ಲೋಸ್ಕರ್ ಕಮ್ಮಿನ್ಸ್ ಕಂಪೆನಿಯ ಶಂಕುಸ್ಥಾಪನೆ ಮಾಡಿದ ಸಂದರ್ಭ



ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ಪಣಂಬೂರಿನ ಮಂಗಳೂರು ರಾಸಾಯನಿಕ ಮತ್ತು ಗೊಬ್ಬರ ಕಾರ್ಖಾನೆಯನ್ನು 1975ರ ಜನವರಿಯಲ್ಲಿ ಉದ್ಘಾಟಿಸಿದ ಸಂದರ್ಭ



ಉಡುಪಿಯಲ್ಲಿ ಜರುಗಿದ ಸಮಾರಂಭವೊಂದರಲ್ಲಿ ಭಾಗವಹಿಸಿದ ಸಂದರ್ಭ



ಭಾರೀ ಕೈಗಾರಿಕೆ, ಉಕ್ಕು ಮತ್ತು ಗಣಿಗಾರಿಕೆಯ ಸಚಿವರಾಗಿ 1973ರಲ್ಲಿ
ನವದೆಹಲಿಯ ಉದ್ಯೋಗ ಭವನದಲ್ಲಿ ಜರ್ಮನಿಯ ಉಪ ಪ್ರಧಾನಿ
ಶ್ರೀ ಜೆರಾಲ್ಡ್ ಶೆಮರ್ ಜತೆಗೆ



ಭಾರತ್ ಹೆವಿ ಇಲೆಕ್ಟ್ರಿಕಲ್ಸ್ ಲಿಮಿಟೆಡ್ ನ ಹೈದರಾಬಾದ್ ಘಟಕವನ್ನು
ಪರಿಶೀಲಿಸಿದ ಸಂದರ್ಭದಲ್ಲಿ ಬಿ.ಎಚ್.ಇ.ಎಲ್ ನ ಅಧ್ಯಕ್ಷ
ಶ್ರೀ ಕೃಷ್ಣಮೂರ್ತಿಯವರೊಂದಿಗೆ



'ಮಳೆಯೊಂದು ತೊಡಕೇ ಅಲ್ಲ!'
1976ರ ಅಕ್ಟೋಬರ್ ತಿಂಗಳಲ್ಲಿ ಬೆಂಗಳೂರಿನ ಎನ್.ಜಿ.ಇ.ಎಫ್.
ಕಾರ್ಖಾನೆಗೆ ಭೇಟಿ ನೀಡಿದ ಸಂದರ್ಭ



1974ರ ಏಪ್ರಿಲ್ ತಿಂಗಳಲ್ಲಿ ಕೇರಳದ ಕಲಮಶ್ಶೇರಿಯ ಎಚ್.ಎಂ.ಟಿ.
ಕಾರ್ಖಾನೆಯ ಕಾರ್ಮಿಕರನ್ನು ಉದ್ದೇಶಿಸಿ ಮಾತನಾಡಿದ ಸಂದರ್ಭ



'ಟೊಪ್ಪಿಯನ್ನು ಬದಲಾಯಿಸಿಕೊಂಡರೆ ಹೇಗೆ?'
1973ರಲ್ಲಿ ಸೋವಿಯತ್ ರಷ್ಯಾದಿಂದ ಪೈಯವರ ಆಹ್ವಾನದ ಮೇರೆಗೆ
ಭಾರತಕ್ಕೆ ಆಗಮಿಸಿದ ಪೈಯವರ ಆಪ್ತ ಮಿತ್ರರಾದ
ಸೋವಿಯತ್ ಗಣಿಕಾರಿಕೆಯ ಸಚಿವರ ಜತೆಗೆ ಟೊಪ್ಪಿಯನ್ನು
ಬದಲಾಯಿಸಿಕೊಂಡ ರಸಕ್ಷಣ!



ಕೇಂದ್ರ ರೇಲ್ವೇ ಸಚಿವರಾಗಿ ನಾಡಿಗೆ ಬಂದಾಗ ಉಡುಪಿ ಗೌಡ ಸಾರಸ್ವತ ಬ್ರಾಹ್ಮಣ ಸಮಾಜದವರು ರೈಲಿನ ಒಂದು ಮಾದರಿಯನ್ನು ನೀಡಿ ಶುಭಾಶಂಸನೆ ಗೈದರು



ಆಫ್ರಿಕನ್ ನೇತಾರರೊಬ್ಬರ ಜತೆಗೆ ಶ್ರೀಟಿ.ಎ.ಪೈಯವರು



ಮದ್ರಾಸ್ (ಚೆನ್ನೈ)ನಲ್ಲಿ ಜರುಗಿದ ಸಮಾರಂಭವೊಂದರಲ್ಲಿ



1970 ಜನವರಿಯಲ್ಲಿ ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷಸ್ಥಾನವನ್ನು
ತೆರವುಗೊಳಿಸಿದ ಸಂದರ್ಭ – ಸನ್ಮಾನ ಸಮಾರಂಭದಲ್ಲಿ



ಭಾರೀ ಉದ್ದಿಮೆಗಳ ಸಚಿವರಾಗಿದ್ದಾಗ ಬಾರಕೂರಿನ ಫಾರ್ಮ್ ಕ್ಲಿನಿಕ್‌ಗೆ
ಭೇಟಿ ನೀಡಿದ ಸಂದರ್ಭ. ಶ್ರೀ ಎಚ್.ವಿ.ಕಾಮತ್, ಶ್ರೀ ಎಚ್.ಡಿ.ಎಸ್.ಪೈ ಮತ್ತು
ಶ್ರೀ ಕೆ.ಎಂ.ಉಡುಪ ಮತ್ತಿತರರನ್ನು ಕಾಣಬಹುದು



1966ರಲ್ಲಿ ದಿಲ್ಲಿಯ ಸಿಂಡಿಕೇಟ್ ಬ್ಯಾಂಕ್‌ನ ವಿಸ್ತರಣೆಯ ಕುರಿತು
ಶ್ರೀ ಪಿ.ಎಸ್.ವಿ. ಮಲ್ಯ ಅವರೊಂದಿಗೆ ಚರ್ಚೆಯಲ್ಲಿ.
ಶ್ರೀ ಟಿ.ಸತೀಶ್ ಪೈಯವರೂ ಜತೆಯಲ್ಲಿದ್ದಾರ.



1970ರ ಮಾರ್ಚ್‌ನಲ್ಲಿ ಭಾರತೀಯ ಜೀವವಿಮಾ ನಿಗಮದ ಅಧ್ಯಕ್ಷರಾದ ತಕ್ಷಣ ಎಲ್ಲೈಸಿ ನೌಕರ ಸಂಘಗಳ ನೇತಾರರನ್ನು ಭೇಟಿಮಾಡಿದ ಸಂದರ್ಭ



ರಿಸರ್ವ್ ಬ್ಯಾಂಕಿನ ಗವರ್ನರ್ ಶ್ರೀ ಎಲ್.ಕೆ.ಝಾ ಅವರನ್ನು ಸ್ವಾಗತಿಸಿದ ಸಂದರ್ಭ



ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರನ್ನು ಮಣಿಪಾಲಕ್ಕೆ
ಸ್ವಾಗತಿಸಿದ ಸಂದರ್ಭ. ಅಂದಿನ ರಾಜ್ಯ ಮುಖ್ಯಮಂತ್ರಿ
ಶ್ರೀ ದೇವರಾಜ ಅರಸ್ ಅವರನ್ನೂ ಕಾಣಬಹುದು



ಕ್ಯಾಬಿನೆಟ್ ಮೀಟಿಂಗ್‌ಗೆ ಶ್ರೀ ಉಮಾಶಂಕರ್ ದೀಕ್ಷಿತ್, ಶ್ರೀಸುಬ್ರಹ್ಮಣ್ಯಂ,
ಶ್ರೀ ಮೋಹನ್ ಕುಮಾರ ಮಂಗಲಂ ಮತ್ತು ಶ್ರೀರಾಜ್ ಬಹಾದುರ್ ಜತೆಗೆ
ಆಗಮಿಸುತ್ತಿರುವುದು



19 ಜುಲೈ 1976ರಂದು, ಭಾರತ್ ಹೆವಿ ಇಲೆಕ್ಟ್ರಿಕಲ್ಸ್ ಲಿಮಿಟೆಡ್‌ನ ಘಟಕವೊಂದನ್ನು ಕೈಗಾರಿಕಾ ಮಂತ್ರಿಯಾಗಿ ಉದ್ಘಾಟಿಸುತ್ತ



ಭಾರತೀಯ ಜೀವವಿಮಾ ನಿಗಮದ ಶತಮಾನೋತ್ಸವದ ಸಂದರ್ಭ – ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಮತ್ತು ಅರ್ಥ ಮಂತ್ರಿ ಶ್ರೀ ವೈ.ಬಿ.ಚವ್ಹಾಣ್ ಅವರೊಂದಿಗೆ



ಶ್ರೀ ಸಿ.ಸುಬ್ರಹ್ಮಣ್ಯಂ ಅವರು ಮಣಿಪಾಲದ ಶಿಕ್ಷಣ ಸಂಸ್ಥೆಗಳಿಗೆ ಭೇಟಿ ನೀಡಿದ ಸಂದರ್ಭ : ಅವರ ಜತೆಗೆ. ಡಾ.ಟಿ.ಎಂ.ಎ.ಪೈಯವರನ್ನೂ ಕಾಣಬಹುದು



ಬ್ರಿಟಿಷ್ ಪಾರ್ಲಿಮೆಂಟಿನ ಸದಸ್ಯರು ಹಾಗೂ ಯುನೈಟೆಡ್ ಕಿಂಗ್ಡಂನ ಹೌಸ್ ಆಫ್ ಕಾಮನ್ಸ್‌ನ ಲೀಡರ್ ಶ್ರೀ ಮೈಕೆಲ್ ಫೂಟ್ ಅವರೊಂದಿಗೆ



19 ಜನವರಿ 1976ರಂದು, ಅಭಿವೃದ್ಧಿವಿಹೀನ ಏಷ್ಯಾ ಮತ್ತು ದೂರ ಪೂರ್ವ ದೇಶಗಳ “ಯುನಿಡೋ” ಕಾರ್ಯಾಚರಣೆಗಳ 5ನೇ ಪ್ರಾಂತೀಯ ಚರ್ಚಾಕೂಟವನ್ನು ಉದ್ಘಾಟಿಸುತ್ತ

ಆಟೋಮೋಟೀವ್ ಇಂಜನಿಯರ್ ಅಂಡ್ ಟ್ರೇಡರ್’ ಪತ್ರಿಕೆಯ ಸಂಪಾದಕರಾದ ಶ್ರೀ ಟಿ.ಡಬ್ಲ್ಯೂ. ಬಾಲಚಂದಾನಿಯವರ ಜತೆಯಲ್ಲಿ ಪತ್ರಿಕೆಯನ್ನು ಅವಲೋಕಿಸುತ್ತ






ಅಖಿಲ ಭಾರತ ರಬ್ಬರ್ ಉದ್ದಿಮೆ ಸಂಘದ ಒಂದು ಸಮಾವೇಶದಲ್ಲಿ



ಆಟೋಮೊಬೈಲ್ ಮತ್ತು ಇತರ ಉದ್ದಿಮೆಗಳ (1975–77) ಪುನರ್ಘಟಿತ
ಅಭಿವೃದ್ಧಿ ಸಮಿತಿಯ ಉದ್ಘಾಟನಾ ಸಮಾರಂಭದಲ್ಲಿ



ತಾಂತ್ರಿಕ ರಫ್ತು ಉತ್ತೇಜಿತ ಸಂಘಟನೆಯ ಅಗ್ರಮಾನ್ಯ
ರಫ್ತುದಾರರ ಸಮಾವೇಶದಲ್ಲಿ ಶ್ರೀ ಮಾಂತೋಷ್
ಸೋಂಧಿಯವರ ಜತೆಗೆ ಶ್ರೀ ಟಿ.ಎ.ಪೈಯವರು




1977 ಜನವರಿ 4ರಂದು ಅಭಿವೃದ್ಧಿಶೀಲ ರಾಷ್ಟ್ರಗಳ ಕೈಗಾರಿಕೆ ಮತ್ತು ತಾಂತ್ರಿಕ
ಸಹಕಾರದ ಬಗೆಗೆ ನವದೆಹಲಿಯಲ್ಲಿ ಹಮ್ಮಿಕೊಳ್ಳಲಾದ ದುಂಡುಮೇಜಿನ
ಸಚಿವರುಗಳ ಸಮಾವೇಶನ್ನು ಪೈಯವರು ಉದ್ಘಾಟಿಸಿ ಮಾತನಾಡಿದರು.



ಕೈಗಾರಿಕಾ ರಾಜ್ಯ ಸಚಿವ ಶ್ರೀ ಎ.ಪಿ.ಶರ್ಮಾ ಮತ್ತು ನಿವೃತ್ತ ಕೈಗಾರಿಕಾ ಕಾರ್ಯದರ್ಶಿ ಶ್ರೀ ಆರ್.ವಿ.ರಾಮನ್ ಜತೆಗೆ



ಆಟೋಮೊಬೈಲ್ ಕಾರ್ಖಾನೆಯೊಂದಕ್ಕೆ ಭೇಟಿ ನೀಡಿದ ಮೇಲೆ ತನ್ನ ಅನಿಸಿಕೆಗಳನ್ನು ದಾಖಲಿಸುತ್ತಿರುವ ಸಮಾಜಸೇವಕಿ ಶ್ರೀಮತಿ ವಸಂತಿ ಪೈ



ಶ್ರೀಮತಿ ಇಂದಿರಾ ಗಾಂಧಿಯವರು ಮತ್ತು ಇತರ ಗಣ್ಯರ ಜತೆಗೆ



ಆಧ್ಯಾತ್ಮದ ಬಗ್ಗೆ ಅತೀವ ಒಲವಿದ್ದ ಶ್ರೀ ಪೈಯವರು ಉಡುಪಿ ಪೇಜಾವರ ಮಠದ ಶ್ರೀ ವಿಶ್ವೇಶ ತೀರ್ಥ ಸ್ವಾಮೀಜಿಯವರಿಂದ ಆಶೀರ್ವಚನ ಪಡೆಯುತ್ತಿರುವ ಸಂದರ್ಭ



1966ರಲ್ಲಿ ಸಿಂಡಿಕೇಟ್ ಅಗ್ರಿಕಲ್ಚರ್ ಫೌಂಡೇಶನನ್ನು ಕೇಂದ್ರ ಕೃಷಿ ಮಂತ್ರಿ ಶ್ರೀ ಸಿ. ಸುಬ್ರಹ್ಮಣ್ಯಂ ಉದ್ಘಾಟಿಸಿದರು. ಡಾ.ಟಿ.ಎಂ.ಎ.ಪೈ, ಶ್ರೀಎಲ್.ಎನ್.ರಾವ್ ಶ್ರೀ ಕೆ.ಕೆ.ಪೈ ಹಾಗೂ ಡಾ.ಎನ್.ಸಿ.ಮೆಹತಾರನ್ನು ಕಾಣಬಹುದು



ಉತ್ತರ ಕನ್ನಡದ ಅಂಕೋಲದಲ್ಲಿ ಕೃಷಿ ಸಾಲ ವಿತರಣಾ ಸಮಾರಂಭದಲ್ಲಿ ಅಂದಿನ ರಾಜ್ಯ ಅರ್ಥ ಸಚಿವ ಶ್ರೀ ರಾಮಕೃಷ್ಣ ಹೆಗಡೆಯವರೊಂದಿಗೆ



ಹರಿದ್ವಾರದ ಬಿ.ಎಚ್.ಇ.ಎಲ್.ನ ಘಟಕ್ಕೆ ಭೇಟಿ. ಜತೆಗೆ, ರಾಜ್ಯ ಮಂತ್ರಿ
ಸಿದ್ಧೇಶ್ವರ ಪ್ರಸಾದ್ ಮತ್ತು ಮಾಂತೋಷ್ ಸೋಂಧಿ



ಕರ್ನಾಟಕ ಗವರ್ನರ್ ಶ್ರೀ ಧರ್ಮವೀರ ಅವರೊಂದಿಗೆ,
1972ರಲ್ಲಿ ಮಂತ್ರಿಯಾಗಿ ಕರ್ನಾಟಕಕ್ಕೆ ಭೇಟಿ ನೀಡಿದ ಸಂದರ್ಭ



ದೆಹಲಿಯಲ್ಲಿ ನಡೆದ ಒಂದು ಸಮಾರಂಭದಲ್ಲಿ ಶ್ರೀ ಪ್ರಣಬ್ ಮುಖರ್ಜಿ,
ಶ್ರೀ ಸಿ.ಸುಬ್ರಹ್ಮಣ್ಯಂ ಮತ್ತು ಶ್ರೀ ಬಾಬು ಜಗಜೀವನ್ ರಾಮ್ ಅವರ ಜತೆಗೆ



1976ರ ಜೂನ್ 15ರಂದು ಮಲ್ಪೆಯ ಫಿಶ್ಶಿಂಗ್ ಹಾರ್ಬರ್‌ನ ಶಿಲಾನ್ಯಾಸದ
ಸಮಾರಂಭದಲ್ಲಿ–ಶ್ರೀಮತಿ ಮನೋರಮಾ ಮಧ್ವರಾಜ್
ಮತ್ತು ಶ್ರೀ ಮಧ್ವರಾಜ್ ಅವರೊಂದಿಗೆ




10 ಸೆಪ್ಟೆಂಬರ್ 1971ರಂದು ಯೂನಿಟ್ ಲಿಂಕ್ಡ್ ಇನ್ಸೂರೆನ್ಸ್
ಕಾರ್ಯಕ್ರಮವನ್ನು ಉದ್ಘಾಟಿಸಿದ ಶ್ರೀ ವೈ.ಬಿ.ಚವ್ಹಾಣ್



ಕೆಲ್ವಿನೇಟರ್ ಕಂಪೆನಿಗೆ ಭೇಟಿಯಿತ್ತ ಸಂದರ್ಭದಲ್ಲಿ ಕಂಪೆನಿಯ ಅಧಿಕಾರಿಗಳ
ಪರಿಚಯ ಮಾಡಿಕೊಳ್ಳುತ್ತ



ನವದೆಹಲಿಯ ಶ್ರೀ ವೆಂಕಟರಮಣ ದೇವಳದ ಅರ್ಚಕರು ಸನ್ಮಾನ ನೀಡಿ ಆಶೀರ್ವದಿಸಿದ ಸಂದರ್ಭ



ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾಗಿ ಪೈಯವರ ನಂತರ ಬಂದ ಶ್ರೀ ಕೆ.ಕೆ.ಪೈ ಮತ್ತು ಶ್ರೀ ಆರ್. ರಘುಪತಿ ಅವರೊಂದಿಗೆ



ಸಿಂಡಿಕೇಟ್ ಬ್ಯಾಂಕಿನ ಅಧ್ಯಕ್ಷರಾಗಿದ್ದ ಸಮಯದಲ್ಲಿ ಬ್ಯಾಂಕಿನ ಗ್ರಾಹಕ
ನೇಕಾರರ ಉತ್ಪಾದನೆ ಮತ್ತು ಮಾರಾಟದ ಬಗೆಗೆ ಚರ್ಚಿಸುತ್ತ



ಕೇಂದ್ರ ಅರ್ಥಸಚಿವರಾದ ಶ್ರೀ ವೈ.ಬಿ.ಚವ್ಹಾಣ್ ಜತೆಗೆ, ಭಾರತೀಯ
ಜೀವವಿಮಾ ಶತಮಾನೋತ್ಸವ ಸಂದರ್ಭ.



1973ರ ಡಿಸೆಂಬರ್‌ನಲ್ಲಿ ರಾಣಿಗಂಜ್‌ನ ಕಲ್ಲಿದ್ದಲು ಗಣಿಗೆ ಕೇಂದ್ರ ಉಕ್ಕು ಮತ್ತು ಗಣಿಗಾರಿಕೆಯ ಸಚಿವರಾಗಿ ಆಗಮಿಸಿದಾಗ ಕಾರ್ಮಿಕರಿಂದ ಸ್ವೀಕರಿಸಿದ ಅದ್ದೂರಿಯ ಸ್ವಾಗತ

ಭಾರೀ ಕೈಗಾರಿಕೆಯ ಸಚಿವರಾಗಿದ್ದ ಸಂದರ್ಭ : ಸ್ವತಃ ಕೈಗಾರಿಕಾ ಘಟಕಗಳಿಗೆ ಭೇಟಿ ನೀಡುತ್ತಿದ್ದುದು ಪೈಯವರು ಹಾಕಿಕೊಟ್ಟ ಸಂಪ್ರದಾಯ





ಚುನಾವಣೆಯಲ್ಲಿ ಗೆದ್ದಾಗ ಅಭಿಮಾನಿಗಳ ಹರ್ಷೋದ್ಗಾರ

ವಿಜ್ಞಾನ ಭವನದಲ್ಲಿ
ಸಮಾವೇಶವೊಂದನ್ನು
ಉದ್ಘಾಟಿಸಲು
ಆಗಮಿಸುತ್ತಿರುವ
ಸಂದರ್ಭ



ಮುದ್ರಕರು: ನಿರ್ದೇಶಕರು, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶನಾಲಯ, ಕಾ.ಸ.ಮ. ಪಿಡಬ್ಲ್ಯುಎಸ್ 2100–ಪ್ರತಿಗಳು–1000, [illegible]